ಆರ್ಥರ್ ಕೊಸ್ಲರ್ ಬರೆದ

# ನಡುಹಗಲಿನ ಕಗ್ಗತ್ತಲೆ

ಅನುವಾದಕ:

ಕು. ಶಿ. ಹರಿದಾಸ ಭಟ್ಟ.

ನವಯುಗ ಎಂಟರ್‌ಪ್ರೈಸ್ ಲಿಮಿಟೆಡ್
ಉಡುಪಿ.

December 1956

# NADUHAGALINA KAGGATTALE

Kannada Translation of

## DARKNESS AT NOON

By Arthur Koestler



Rendered into Kannada

By

*Prof. K. S. Haridasa Bhat M. A;*
Mahatma Gandhi Memorial College
Udipi, Mysore.

Published By
Navayuga Enterprise Ltd; Udipi.

"ಯಾರು ಸರ್ವಾಧಿಕಾರವನ್ನು ಸ್ಥಾಪಿಸಿಯೂ ಬ್ರೂಟಸನನ್ನು (ಅಂದರೆ ರಾಜ್ಯದ್ರೋಹಿಯನ್ನು) ಕೊಲ್ಲುವುದಿಲ್ಲವೋ, ಪ್ರಜಾರಾಜ್ಯವನ್ನು ನಿರ್ಮಿಸಿಯೂ ಬ್ರೂಟಸನ ಪೀಳಿಗೆಯವರನ್ನು ನಿರ್ನಾಮಮಾಡುವುದಿಲ್ಲವೋ, ಆತನು ಸ್ವಲ್ಪ ಕಾಲ ಮಾತ್ರ ರಾಜ್ಯವಾಳಿಯಾನು."

ಮಕಿಯವೆಲ್ಲಿ:
**ಡಿಸ್ಕೊರ್ಸಿ**

"ಅಪ್ಪಾ, ಯಜಮಾನಾ, ಕರುಣೆಯ ಲವಲೇಶವೂ ಇಲ್ಲದೆ ಮನುಷ್ಯನು ಬದುಕಲಾರನಯ್ಯಾ."

ಡಾಸ್ಟೊವಸ್ಕಿ:
**ಪಾಪ ಮತ್ತು ದಂಡನೆ**

ಈ ಗ್ರಂಥದಲ್ಲಿ ಬರುವ ಪಾತ್ರಗಳೆಲ್ಲ ಕಾಲ್ಪನಿಕ. ಅವರ ಕಾರ್ಯಗಳನ್ನು ನಿರ್ಣಯಿಸಿದ ಐತಿಹಾಸಿಕ ಪರಿಸ್ಥಿತಿ ಮಾತ್ರ ವಾಸ್ತವವಾದುದು. ನಿ. ಸ. ರುಬಶೊವ್ ಎಂಬ ವ್ಯಕ್ತಿಯ ಜೀವನವು **ಮೊಸ್ಕೊ ವಿಚಾರಣೆಗಳು** ಎಂದು ಕರೆಯಲ್ಪಡುವ ದುರ್ಘಟನೆಗೆ ಬಲಿಯಾದ ಅಗಣಿತ ಜನರ ಜೀವನದ ಸಂಶ್ಲೇಷಣೆಯಾಗಿರುತ್ತದೆ. ಇವರಲ್ಲಿ ಹಲವರನ್ನು ಲೇಖಕರು ಸ್ವತಃ ಬಲ್ಲವರಾಗಿದ್ದರು. ಈ ಗ್ರಂಥವು ಆ ಹುತಾತ್ಮರ ಸ್ಮರಣೆಗೆ ಸಮರ್ಪಿತ.

ಪ್ಯಾರಿಸ್.

ಅಕ್ಟೋಬರ ೧೯೩೮—ಏಪ್ರಿಲ್ ೧೯೪೦.

## ಈ ಕಾದಂಬರಿಯ ಕುರಿತು

'ನಡುಹಗಲಿನ ಕಗ್ಗತ್ತಲೆ' ಈ ಶತಮಾನದಲ್ಲಿ ಬರೆಯಲಾದ ಒಂದು ಮಹತ್ತ್ವಪೂರ್ಣ ಕಾದಂಬರಿ. ಇದು ೧೯೪೧ರಲ್ಲಿ ಪ್ರಕಟವಾದಾಗ ರಶಿಯದಲ್ಲಿ ೧೯೩೦–೪೦ ರ ಅಂತರದಲ್ಲಿ ನಡೆದ ಅಮಾನುಷ ರಾಜಕೀಯ ವಿಚಾರಣೆಗಳ ಒಳಗುಟ್ಟು ಎಲ್ಲರಿಗೂ ಅರಿವಾಯಿತು. ಸ್ಟಾಲಿನ್-ಯುಗ ಕಳೆದ ಮೇಲೆ ರಶಿಯದ ನಾಯಕವರ್ಗದ ಬದಲಾವಣೆ, ಪರಸ್ಪರ ಭರ್ತ್ಸನೆಗಳಿಂದಾಗಿ, ಈ ಕಾದಂಬರಿಯ ವಾಸ್ತವತೆ ಜನರಿಗೆ ಮನದಟ್ಟಾಗಿದೆ. ದಾರಿ ಹೇಗಿದ್ದರೂ ಆಯಿತು, ನಮ್ಮ ಲಕ್ಷ್ಯ ಚೆನ್ನಾಗಿದ್ದರೆ ಸರಿ, ಎನ್ನುವ ರಾಜಕೀಯ ಅಭಿಪ್ರಾಯಗಳ ಕೈ ಮೇಲಾಗಿರುವ ಅರ್ವಾಚೀನ ಕಾಲದಲ್ಲಿ 'ನಡುಹಗಲಿನ ಕಗ್ಗತ್ತಲೆ' ಚಿಕಿತ್ಸಕ ವೈದ್ಯನಂತೆ ಮುಂದೆ ಬಂದು ಸಮೂಹಕ್ಕಿಂತ ಮನುಷ್ಯ ವ್ಯಕ್ತಿ ಶ್ರೇಷ್ಠನೆಂಬ ಸನಾತನ ಸತ್ಯವನ್ನು ಮತ್ತೆ ಸಾರುತ್ತದೆ.

ಕಾದಂಬರಿಯ ನಾಯಕ ಕ್ರಾಂತಿವೀರ ರುಬಶೊವ್‌ನ ಪತನದಲ್ಲಿ ನಾವೆಲ್ಲರೂ ಪತಿತರಾಗಿರುವುದನ್ನು ಕಾದಂಬರಿಯು ಅನುಭವಪೂರ್ವಕವಾಗಿ ಸಿದ್ಧಗೊಳಿಸುತ್ತದೆ. ಮೊತ್ತ ಮೊದಲು ಜರ್ಮನ್ ಭಾಷೆಯಲ್ಲಿ ಬರೆಯಲಾದ ಈ ಕಾದಂಬರಿಯಲ್ಲಿ ವಿಖ್ಯಾತ ಲೇಖಕ ಕೊಸ್ಲರ್ ಎಲ್ಲಿಯೂ

ಪ್ರಚಾರದ ಮಟ್ಟಕ್ಕಿಳಿಯದೆ, ಕೇವಲ ವಿಡಂಬನೆಯ ಮೊನೆಮಾತುಗಳಿಂದಲೇ ಕಥೆಯ ಧ್ಯೇಯವನ್ನು ಪ್ರಕಟಿಸಿದ್ದಾರೆ. ನಲ್ವತ್ತು ವರ್ಷಗಳ ಕಾಲ ತನ್ನ ಪ್ರೀತಿಯ ಧ್ಯೇಯಗಳ ಸಾಧನೆಗಾಗಿ ಹೆಣಗಿ, ಕಟ್ಟಕಡೆಗೆ ತಾನು ಸೃಷ್ಟಿಸಿದ ನೂತನ ಜನಾಂಗದ ಕೈಯಿಂದಲೇ ನರಕ ಯಾತನೆಗೀಡಾಗಿ, ತಾನು ಮಾಡಿರದ ಅಪರಾಧಗಳಿಗೆಲ್ಲ ರುಜು ಸೇರಿಸಿ, ಮಾಡಿದ ಪಾಪಕ್ಕಾಗಿ ನೊಂದು ಸಾವಿನ ಕೊನೆಗಳಿಗೆಯಲ್ಲಿ ಸಮಷ್ಟಿತತ್ತ್ವದ ಜಂಜಡದಿಂದ ಬಿಡುಗಡೆಹೊಂದುವ ರುಬಷೊವ್‌ನ ಕಥೆ ಡಾಸ್ಟೊವಸ್ಕಿಯ 'ಪಾಪ ಮತ್ತು ದಂಡನೆ'ಯಂತೆ ಒಂದು ಮಹಾಕಾದಂಬರಿ, ಹೃದಯ ವಿದ್ರಾವಕ ಸನ್ನಿವೇಶಗಳಿಂದಲೂ, ರೋಮಾಂಚಕ ದೃಶ್ಯಗಳಿಂದಲೂ ತರ್ಕದ ಪ್ರಖರತೆಯಿಂದಲೂ ಕೂಡಿದ ರಾಜಕೀಯ ಕಾದಂಬರಿ.

ದಶಂಬರ
೧೯೫೬.

ಕು. ಶಿ. ಹರಿದಾಸ ಭಟ್ಟ.

# ಪ್ರಥಮ ವಿಚಾರಣೆ

"ಯಾವನೂ ನಿರ್ದೋಷವಾಗಿ ಆಳಲಾರ"

ಸೈಂಟ್ - ಜಸ್ಟ್

## ೧

ರುಬಶೊವನ ಹಿಂದೆ ಕೊಠಡಿಯ ಬಾಗಿಲು ಸಪ್ಪಳದೊಡನೆ ಬಡಿದುಕೊಂಡಿತು.

ಬಾಗಿಲಿಗೆ ಆತುಕೊಂಡು ಕೆಲವು ಕ್ಷಣ ಆತ ಹಾಗೆಯೇ ನಿಂತನು, ಸಿಗರೇಟ ಹೊತ್ತಿಸಿದನು. ಅವನ ಬಲಗಡೆಯ ಮಂಚದ ಮೇಲೆ ಸಾಧಾರಣ ಶುಭ್ರವಾಗಿದ್ದ ಎರಡು ಹೊದಿಕೆಗಳಿದ್ದುವು. ಮಂಚದ ಮೇಲಿನ ಹಾಸಿಗೆಯೊಳಗೆ ಇದೇ ಹೊಸದಾಗಿ ಒಣಹುಲ್ಲು ತುಂಬಿಸಿದಂತೆ ಕಾಣುತಿತ್ತು. ಎಡಗಡೆಯಲ್ಲಿದ್ದ ಕೈ ತೊಳೆಯುವ ಬೋಗುಣಿಗೆ ಮುಚ್ಚಳ ಇರಲಿಲ್ಲವಾದರೂ ನಲ್ಲಿ ಕೆಲಸ ಮಾಡುತಿತ್ತು. ಅದರ ಪಕ್ಕದಲ್ಲೇ ಇದ್ದ ಕ್ಯಾನನ್ನು ಆಗತಾನೇ ಕ್ರಿಮಿನಾಶಕದಿಂದ ತೊಳೆದಿದ್ದುದರಿಂದ ಅದರಲ್ಲಿ ದುರ್ಗಂಧವಿರಲಿಲ್ಲ. ಇಕ್ಕಡೆಯ ಗೋಡೆಗಳನ್ನೂ ಗಟ್ಟಿಯಾಗಿ ಇಟ್ಟಿಗೆಯಿಂದ ಕಟ್ಟಿದುದರಿಂದ ಬಡೆದರೂ ಅದರಲ್ಲಿ ಸಪ್ಪಳ ಬರುವಂತಿರಲಿಲ್ಲ, ಆದರೆ ಕೊಠಡಿಯನ್ನು ಬೆಚ್ಚಗಿರಿಸುವ ನಳಿಗೆಯೂ, ಕೊಳೆನೀರನ್ನೊಯ್ಯುವ ನಳಿಗೆಯೂ ಅದನ್ನು ಭೇದಿಸುವಲ್ಲಿ, ಗಾರೆ ಹಾಕಿದ್ದು ಚೆನ್ನಾಗಿ ಶಬ್ದವಾಗುತಿತ್ತು. ಸಾಲದ್ದಕ್ಕೆ ಆ ಬೆಚ್ಚಗಿನ ನಳಿಗೆ ಕೂಡ ಶಬ್ದವಾಹಕವಾಗಿತ್ತು. ಕಣ್ಣಿನ ಮಟ್ಟದಲ್ಲಿ ಕಿಟಕಿಗಳು ಆರಂಭವಾಗಿದ್ದುವು. ಕಿಟಕಿಯ ಸರಳುಗಳಿಗೆ ಜೋಲದೆಯೆ ಹೊರಗಿನ ಅಂಗಳವನ್ನು ಕಾಣಲು ಸಾಧ್ಯವಿತ್ತು. ಅಂತೂ ಅಷ್ಟರವರೆಗೆ ಎಲ್ಲವೂ ಕ್ರಮಬದ್ಧವಾಗಿತ್ತು.

ಒಂದು ಆಕಳಿಕೆ ತೆಗೆದು ಅವನು ಕೋಟು ಕಳಚಿದನು. ಅದನ್ನು ಸುತ್ತಿ ಸುರುಳಿ ಮಾಡಿ ಹಾಸಿಗೆಯ ಮೇಲೆ ತಲೆದಿಂಬಿನ ಸ್ಥಳದಲ್ಲಿ ಇರಿಸಿದನು. ಹೊರ ಅಂಗಳದ ಕಡೆಗೆ ನೋಡಿದನು. ಚಂದ್ರ

ಪ್ರಕಾಶವೂ ವಿದ್ಯುದ್ದೀಪದ ಬೆಳಕೂ ಸೇರಿ ಹೊರಗಿನ ಹಿಮದಲ್ಲಿ ಹಳದಿ ಛಾಯೆಯನ್ನು ಹರಡಿದ್ದುವು. ಅಂಗಳದ ಸುತ್ತಲೂ ಗೋಡೆಯ ಅಂಚಿನಲ್ಲಿ ಕೈದಿಗಳ ಪ್ರತಿದಿನದ ಕವಾಯತಿಗೋಸ್ಕರ ಅಗಲಕಿರಿದಾದ ಒಂದು ಹಾದಿಯನ್ನು ಬಿಡಿಸಿದ್ದರು. ಇನ್ನೂ ನಸುಕು ಹರಿದಿರಲಿಲ್ಲ. ವಿದ್ಯುದ್ದೀಪಗಳು ಉರಿಯುತ್ತಿದ್ದರೂ, ನಕ್ಷತ್ರಗಳು ಶುಭ್ರವಾಗಿ ಪ್ರಕಾಶಿಸುತ್ತಿದ್ದುವು—ಕಾರಾಗೃಹದ ಹೊರಗೋಡೆಯ ಮೇಲಿನ ದಿಬ್ಬವು ರುಬಷೊವನ ಕೊಠಡಿಗೆ ಎದುರಿನಲ್ಲಿತ್ತು; ಅಲ್ಲಿ ಬಂದೂಕನ್ನು ಹೆಗಲಿಗಾನಿಸಿಕೊಂಡು ಒಬ್ಬ ಸೈನಿಕನು ಆಚೆ ಈಚೆ ಶತಪಥ ತುಳಿಯುತಿದ್ದನು. ಮೆರವಣಿಗೆ ಮಾಡುವಾಗ, ಸೈನಿಕರು ನೆಲವನ್ನು ಗಟ್ಟಿಯಾಗಿ ತುಳಿಯುವಂತೆ ಆತನು ಹೆಜ್ಜೆ ಹಾಕುತಿದ್ದನು. ಲಾಂದರಗಳ ಹಳದಿ ಪ್ರಕಾಶವು ಆಗಿಂದಾಗ ಅವನ ಬಂದೂಕಿನ ತುದಿಯಲ್ಲಿದ್ದ ಕಠಾರಿಯಲ್ಲಿ ಮಿಂಚುತಿತ್ತು.

ರುಬಷೊವ ತನ್ನ ಬೂಟುಗಳನ್ನು ಕಿಟಕಿಯ ಬಳಿ ನಿಂತಿದ್ದಲ್ಲಿಂದಲೇ ಕಳಚಿದನು. ಸಿಗರೇಟನ್ನು ನಂದಿಸಿ, ಅದರ ತುಕಡಿಯನ್ನು ಮಂಚದ ಹತ್ತಿರ ನೆಲದಲ್ಲಿ ಬಿಸುಟು, ಹಾಸಿಗೆಯ ಮೇಲೆ ಕೆಲವು ಮಿನಿಟು ಕೂತುಕೊಂಡನು. ಮತ್ತೊಮ್ಮೆ ಕಿಟಕಿಯ ಬಳಿ ಹೋಗಿ ಹೊರಗೆ ದೃಷ್ಟಿ ಹಾಯಿಸಿದನು. ಅಂಗಳವು ನೀರವವಾಗಿತ್ತು; ಕಾವಲಿನ ಸೈನಿಕ ನೂರು ಹೆಜ್ಜೆ ಹಾಕಿ ತಿರುಗುತ್ತಿದ್ದನು; ತೋಫಖಾನೆಯ ಗೋಪುರದ ಮೇಲ್ಗಡೆ ತಾರಾಪಥದ ಒಂದು ರೇಖೆ ಕಾಣಿಸುತಿತ್ತು.

ಮಂಚದ ಮೇಲೆ ಕಾಲು ಚಾಚಿ ರುಬಷೊವ ತಲೆಸಂದಿನ ಹೊದಿಕೆಯಿಂದ ಮೈ ಹೊದ್ದುಕೊಂಡನು. ಐದು ಗಂಟೆಯಾಗಿತ್ತಷ್ಟೆ. ಚಳಿಗಾಲದಲ್ಲಿ ಇಲ್ಲಿ ಏಳು ಗಂಟೆಗೆ ಮುಂಚಿತವಾಗಿ ಯಾರು ಎದ್ದಾರು ಎಂದು ಆತ ಯೋಚಿಸಿದನು. ನಿದ್ದೆಯೂ ಚೆನ್ನಾಗಿ ಬರುವ ಹಾಗಿತ್ತು. ಮೂರು ನಾಲ್ಕು ದಿನಗಳ ವರೆಗೆ ತನ್ನನ್ನು ವಿಚಾರಣೆಗೆ ಒಯ್ಯುವ ಸಂಭವವಿಲ್ಲವೆಂದು ಆತ ಒಂದು ರೀತಿ ತನ್ನಲ್ಲೇ ತಾನು ತೀರ್ಮಾನಿಸಿ, ಕನ್ನಡಕವನ್ನು ತೆಗೆದು ಸಿಗರೇಟ ತುಂಡಿನ ಬಳಿಯಲ್ಲಿ ಸಾವಕಾಶವಾಗಿ ಇಟ್ಟು, ಒಂದು ಮುಗುಳ್ನಗು ನಕ್ಕು ಕಣ್ಣೆವೆಗಳನ್ನು ಮುಚ್ಚಿದನು.

ಹೊದಿಕೆ ಬೆಚ್ಚಗಿದ್ದುದರಿಂದ ಸುಖವಾಗಿತ್ತು; ಹಲವು ತಿಂಗಳುಗಳಲ್ಲಿ ಹೆದರುತಿದ್ದ ಆತನು, ಅಂದು ಮೊದಲ ಬಾರಿ, ತನ್ನ ಕನಸುಗಳಿಗೆ ಹೆದರಲಿಲ್ಲ.

ಕೆಲವು ಮಿನಿಟುಗಳಾದ ತರುವಾಯ ಪಹರೆಯವನು ಬಂದು, ವಿದ್ಯುದ್ದೀಪವನ್ನು ನಂದಿಸಿ, ಬಾಗಿಲ ತೂತಿನಿಂದ ಒಳಗೆ ನೋಡಿದಾಗ ಮಾಜಿ 'ಜನತೆಯ ಕಮಿಸ್ಸಾರ' ರುಬಷೋವ ಗೋಡೆಗೆ ಬೋರಿ ಹಾಕಿ ಎಡತೋಳಿನ ಮೇಲೆ ತಲೆಯನ್ನಿಟ್ಟು ನಿದ್ದೆ ಹೋಗಿದ್ದನು. ಮಂಚದ ಹೊರಗೆ ಹರಡಿದ್ದ ಅವನ ಕೈಯ ಬೆರಳುಗಳು ನಿದ್ರೆಯಲ್ಲಿ ತಮ್ಮಿಂದ ತಾವೇ ಮುದುಡಿಕೊಳ್ಳುತ್ತಿದ್ದುವು.

## ೨

ಅದಕ್ಕೂ ಒಂದು ತಾಸು ಮುಂಚೆ, ಸರಕಾರದ ಗೃಹಶಾಖೆಯ ಇಬ್ಬರು ಅಧಿಕಾರಿಗಳು ರುಬಷೋವನನ್ನು ಕೈದು ಮಾಡುವುದಕ್ಕೋಸ್ಕರ ಅವನ ಮನೆ ಬಾಗಿಲು ಬಡಿಯುತ್ತಿದ್ದಾಗ, ಅವನು ತನ್ನನ್ನು ಯಾರೋ ಕೈದು ಮಾಡಿದರೆಂದು ಕನಸು ಕಾಣುತ್ತಿದ್ದನು.

ಬಾಗಿಲು ಬಡಿಯುವ ಸಪ್ಪಳವು ಜೋರಾದಂತೆ ರುಬಷೋವ ಏಳುವ ಪ್ರಯತ್ನ ಮಾಡಿದನು. ಕೆಟ್ಟ ಕನಸುಗಳಿಂದ ಬಿಡಿಸಿಕೊಳ್ಳುವುದು ಅವನಿಗೇನೂ ಹೊಸತಾಗಿರಲಿಲ್ಲ. ತನ್ನನ್ನು ಕೈದು ಮಾಡುವ ಕನಸು ಅವನಿಗೆ ಬರಲು ಹತ್ತಿ ಹಲವು ವರ್ಷಗಳಾಗಿದ್ದುವು, ಕಾಲ ಕಾಲಕ್ಕೆ ಅದೇ ಕನಸು ಮರುಕಳಿಸುತಿತ್ತು; ಅದು ಗಡಿಯಾರದ ಮುಳ್ಳುಗಳು ತಿರುಗುವಂತೆ ಕ್ರಮವಾಗಿ ಮುಂದುವರಿಯುತ್ತಿತ್ತು. ಹಲವು ಸರ್ತಿ ಮನಸ್ಸನ್ನು ದೃಢಪಡಿಸಿ ಕನಸಿನ ನಿಯೋಜಿತ ಅನುಕ್ರಮದ ಹಿಡಿತದಿಂದ ತನ್ನ ಸ್ವಂತ ಪ್ರಯತ್ನದಿಂದ ಬಿಡಿಸಿಕೊಳ್ಳುತಿದ್ದನು. ಆದರೆ ಈ ಸರ್ತಿ ಅವನ ಪ್ರಯತ್ನ ಯಶಸ್ವಿಯಾಗಲಿಲ್ಲ; ಈಗ ಕೆಲವು ವಾರಗಳಿಂದ ಅವನಿಗೆ ದೇಹಾಯಾಸ ಅತಿಯಾಗಿತ್ತು,

ನಿದ್ರೆಯಲ್ಲಿ ಜೀವರು ಬರುತ್ತಿತ್ತು, ಉಸಿರು ಕಟ್ಟಿದ ಹಾಗಾಗುತಿತ್ತು; ಕನಸು ಗಡಿಯಾರದ ಮುಳ್ಳುಗಳು ತಿರುಗುವಂತೆ ಕ್ರಮವಾಗಿ ಮುಂದು ವರಿಯುತಿತ್ತು.

ಬಾಗಿಲನ್ನು ಯಾರೋ ಬಡಿಯುತಿದ್ದಾರೆ; ಮೂವರು ಹೊರಗಡೆ ನಿಂತಿದ್ದಾರೆ; ಕೈದು ಮಾಡಲು ಕಾಯುತ್ತಿದ್ದಾರೆ ಎಂದು ಎಂದಿನಂತೆ ಇಂದೂ ಅವನು ಕನಸು ಕಾಣುತ್ತಿದ್ದನು. ಇಕ್ಕಿದ ಬಾಗಿಲಿನ ಆಚೆ ಯಲ್ಲಿ ಬಾಗಿಲು ಬಡೆಯುವ ಅವರು ಈತನಿಗೆ ಸ್ಪಷ್ಟವಾಗಿ ಕಾಣು ತ್ತಿದ್ದರು. ಅವರು ಧರಿಸಿಕೊಂಡ ಜತೆಗಟ್ಟಿನ ವಸ್ತ್ರ ಅಚ್ಚ ಹೊಸದಾಗಿದ್ದುವು; ಜರ್ಮನ್ ಸರ್ವಾಧಿಕಾರದ ರಕ್ಷಕದಳದ ಸೈನಿಕರಿಗೆ ಹೇಳಿಸಿದ ಉಡುಪು; ಟೊಪ್ಪಿಯ ಮೇಲೂ, ಅಂಗಿಯ ತೋಳಿನಲ್ಲಿಯೂ ಅಧಿಕಾರದ ಬಿರುದುಗಳಿದ್ದುವು. ಅವರು ದೊಡ್ಡ ಪಿಸ್ತೂಲುಗಳನ್ನು ಹಿಡಿದುಕೊಂಡಿದ್ದರು. ಅವರ ಚರ್ಮದ ಲಾಡಿ ಮತ್ತು ಅಲಂಕಾರದ ಉಡುಪುಗಳಿಂದ ಹೊಸ ಚರ್ಮದ ವಾಸನೆ ಬರುತ್ತಿತ್ತು. ಅವರು ರುಬಷೊವನ ಕೊಠಡಿಯೊಳಗೆ ಬಂದರು, ಅವನ ಹಾಸಿಗೆಯ ಬಳಿ ನಿಂತರು. ಇಬ್ಬರು ದಪ್ಪ ತುಟಿಯ, ಮೀನಿನಂಥ ಕಣ್ಣಿನ, ಬಲವಾಗಿ ಬಳೆದ, ರೈತ ಯುವಕರು; ಮೂರನೆಯವನು ಗಿಡ್ಡವಾಗಿ ದಪ್ಪಗಿದ್ದನು. ಅವರು ಹಾಸಿಗೆಯ ಪಕ್ಕದಲ್ಲೇ ನಿಂತು ಪಿಸ್ತೂಲನ್ನು ಕೈಯಲ್ಲೇ ಹಿಡಿದು ಅವನೆಡೆಗೇ ಗಟ್ಟಿಯಾಗಿ ಉಸುರ್ಗರೆಯುತ್ತಿದ್ದರು. ಆ ಗಿಡ್ಡ ದಪ್ಪ ನೆಯ ಮನುಷ್ಯನ ಉಬ್ಬಸದಿಂದಾಗುವ ಶಬ್ದವನ್ನು ಬಿಟ್ಟರೆ ಇಡೀ ಕೋಣೆಯು ಶಾಂತವಾಗಿತ್ತು. ಮೇಲಿನ ಮಾಳಿಗೆಯ ಕೋಣೆಯಲ್ಲಿ ಯಾರೋ ಮುಚ್ಚಳವನ್ನು ತೆಗೆದರು. ರುಬಷೊವನ ಕೋಣೆಯ ಗೋಡೆಗಳಿಗೆ ಹೊಂದಿಕೊಂಡಿದ್ದ ಎಲ್ಲ ನಳಿಗೆಗಳಲ್ಲೂ ಸಮಾನವಾಗಿ ನೀರು ಜರಜರನೆ ಬರಲಾರಂಭಿಸಿತು.

ಕನಸಿನ ವೇಗವು ಕಡಿಮೆಯಾಗುತ್ತಿತ್ತು. ಬಾಗಿಲು ಬಡಿತ ಅಧಿಕವಾಗುತ್ತಿತ್ತು; ರುಬಷೊವನನ್ನು ಕೈದು ಮಾಡಲು ಬಂದಿದ್ದ ಆ ಇಬ್ಬರು ಸರದಿ ಪ್ರಕಾರ ತಮ್ಮ ಹೆಪ್ಪುಗಟ್ಟಿದ ಕೈಗಳಿಂದ ಬಾಗಿಲಿಗೆ ಹೊಡೆಯುತ್ತಿದ್ದರು. ಭಯಂಕರ ಸಂಕಟಕ್ಕೆ ಕಾರಣ

ವಾಗುವ ದೃಶ್ಯವು ಇದೇ ಈಗ ಆರಂಭವಾಗುವುದೆಂದು ಆತನಿಗೆ ತಿಳಿದಿದ್ದರೂ ಆತ ಮಲಗಿರುವಲ್ಲಿಂದ ಏಳಲಾರ. ಆ ಮೂವರು ಇನ್ನೂ ಅವನ ಮಂಚದ ಬಳಿಯೇ ನಿಂತಿದ್ದರು. ಅವರಿದ್ದಂತೆಯೆ ಆತ ಗವನು ಹಾಕಿಕೊಳ್ಳಲು ಪ್ರಯತ್ನಿಸುತ್ತಾನೆ. ಆದರೆ ಮಾಡುವು ದೇನು ತೋಳು ತಿರುವು ಮುರವಾಗಿದೆ, ಏನು ಮಾಡಿದರೂ ಕೈಗಳು ಗವನಿನ ಕೈಯೊಳಗೆ ಸೇರಿಕೊಳ್ಳವು. ಪ್ರಯತ್ನವು ನಿಷ್ಫಲವಾದಂತೆ ಅವನಿಗೆ ಪಕ್ಷವಾತ ಹಿಡಿದ ಅನುಭವವಾಗುತ್ತದೆ. ಆತ ಇದ್ದಲ್ಲಿಂದ ಕದಲಲಾರ, ತೋಳಿನೊಳಗೆ ಸರಿಯಾಗಿ ಕೈ ಸೇರಿಸಿ ಸಮಯಕ್ಕೆ ಸರಿ ಯಾಗಿ ಏಳುವುದರಲ್ಲಿ ಅವನ ಭವಿಷ್ಯವೆಲ್ಲವೂ ಅವಲಂಬಿಸಿದ್ದರೂ ಕೂಡ ಆತ ಒಂದಿಷ್ಟು ಚಲಿಸಲಾರ. ಎಷ್ಟೋ ಸೆಕೆಂಡುಗಳ ವರೆಗೆ ಈ ವೇದನೆ ನಿಸ್ಸಹಾಯತೆ ಮುಂದುವರಿಯುತ್ತದೆ. ಆಗ ರುಬಷೊವ ನರಳುತ್ತಾನೆ. ಅವನ ಹಣೆ ಒದ್ದೆಯಾಗಿ ಚಳಿಯ ಅನುಭವವಾಗುತ್ತದೆ. ಅತಿ ದೂರದಿಂದ ಬಡಿಯುವ ಡೋಲಿನ ಸಪ್ಪಳದಂತೆ ಬಾಗಿಲ ಬಡಿತವು ಅವನ ನಿದ್ರೆಯನ್ನು ಭೇದಿಸುತ್ತದೆ. ತಲೆದಿಂಬಿನ ಅಡಿಯಲ್ಲಿದ್ದ ಅವನ ತೋಳು ಗವನಿನ ತೋಳನ್ನು ಸೇರುವ ಪರಮ ಪ್ರಯತ್ನದಿಂದ ತನಗೆ ತಾನೇ ಕೊಡಹಿಕೊಳ್ಳುತ್ತದೆ, ಕಟ್ಟಕಡೆಗೆ ಅವನ ಕಿವಿಯ ಮೇಲೆ ಪಿಸ್ತೂಲಿನ ಬುಡದಿಂದ ಬೀಳುವ ಬಲವಾದ ಹೊಡೆತದಿಂದಾಗಿ, ಅವನಿಗೆ ಆ ಕನಸಿ ನಿಂದ ಬಿಡುಗಡೆಯಾಗುತ್ತದೆ.

ಕಿವಿಯ ಮೇಲೆ ಬೀಳುವ ಹೊಡೆತದ ಅನುಭವ ನಿನ್ನೆ ಮೊನ್ನೆಯ ದಲ್ಲ. ಈಗಾಗಲೇ ನೂರಾರು ಬಾರಿ ಆತ ಆ ನೋವನ್ನು ಅನುಭವಿಸಿ ದ್ದನು. ಮೊದಲ ಅನುಭವದಲ್ಲಿ ಆತನ ಕಿವಿ ಕಿವುಡಾದ್ದು ಇಂದಿಗೂ ಸರಿಯಾಗಲಿಲ್ಲ. ಸಾಧಾರವಾಗಿ ಪಿಸ್ತೂಲಿನ ಹೊಡೆತದಿಂದ ಅವನು ಎಚ್ಚರವಾಗುತಿದ್ದನು. ಸ್ವಲ್ಪ ಹೊತ್ತು ಅವನ ಮೈಯಲ್ಲಿ ನಡುಕ ವಿರುತ್ತಿತ್ತು, ಗವನಿನ ತೋಳಿನೊಳಗೆ ಕೈಸೇರಿಸುವ ಪ್ರಯತ್ನ ಮತ್ತೆ ಸ್ವಲ್ಪ ಹೊತ್ತು ಸಾಗುತ್ತಿತ್ತು. ಸಂಪೂರ್ಣ ಎಚ್ಚರವಾಗುವುದಕ್ಕೆ ಸ್ವಲ್ಪ ಮೊದಲಿನ ಸ್ಥಿತಿ ಅತ್ಯಂತ ವೇದನಾಮಯವಾದುದು. ಆ ಸ್ಥಿತಿ ಯಲ್ಲಿ ಈ ಎಚ್ಚರವೇ ನಿಜವಾದ ಕನಸೆಂಬ ಅಸ್ಪಷ್ಟ, ನಿರಾಕಾರ ಭಾವನೆ

ಯೊಂದು ಮನಸ್ಸಿನಲ್ಲಿ ಸುಳಿಯುವುದು. ಎದ್ದರೂ ತಾನಿನ್ನೂ ಕತ್ತಲು ಕೋಣೆಯ ತಣ್ಣಸಿನ ಕಲ್ಲು ನೆಲದಲ್ಲಿ ಮಲಗಿರುವೆನೆಂದೂ, ಕಾಲ ಬಳಿ ಕ್ಯಾನು ತಲೆಯ ಬಳಿ ನೀರಿನ ಹೂಜೆ ಮತ್ತು ರೊಟ್ಟಿಯ ಚೂರು ಬಿದ್ದಿರುವ ಚಿತ್ರವೇ ವಾಸ್ತವವಾದುದೆಂದೂ ಭಾಸವಾಗುವುದು........

ಕತ್ತಲಿನಲ್ಲಿ ತಡಕುವ ಕೈಗೆ ಕ್ಯಾನ್ ಸಿಗುತ್ತದೋ ಅಥವಾ ದೀಪದ ಸ್ವಿಚ್ಚು ಸಿಗುತ್ತದೋ ಎಂಬ ಬುದ್ಧಿ ಮಂಕಾಗುವ ಸ್ಥಿತಿ ಈ ಸರ್ತಿಯೂ ಕೆಲ ಸೆಕೆಂಡುಗಳ ತನಕ ಮುಂದುವರಿಯಿತು. ಆ ಮೇಲೆ ಒಮ್ಮೆಲೆ ಎಲ್ಲವೂ ಜಗ್ಗನೆ ಬೆಳಗಿತು, ದೀಪದ ಪ್ರಕಾಶದಲ್ಲಿ ಮಬ್ಬು ತೊಲಗಿತು. ರುಬಷೊವ ಉದ್ದವಾಗಿ ಅನೇಕ ಸರ್ತಿ ಉಸಿರೆಳೆದನು. ರೋಗವಿಮುಕ್ತರಾದವರಂತೆ, ಕೈಗಳನ್ನು ಎದೆಯಮೇಲೆ ಇರಿಸಿಕೊಂಡು ಸ್ವಾತಂತ್ರ್ಯ ಮತ್ತು ಸುರಕ್ಷೆಯ ಮೋಹಕ, ಮಾದಕ ಭಾವದಲ್ಲಿ ಸುಖಿಸಿದನು. ಹಣೆಯನ್ನೂ ಹಿಂದಲೆಯ ಬೋಳು ಜಾಗವನ್ನೂ ಹೊದಿಕೆಯಿಂದ ಒರೆಸಿಕೊಂಡು ವ್ಯಂಗ್ಯವಿನೋದದಿಂದ ಕೋಣೆಯ ಗೋಡೆಯಲ್ಲಿ ತೂಗಹಾಕಿದ್ದ ಪಕ್ಷದ ನಂಬರ ೧ ನಾಯಕನ ಬಣ್ಣದ ಚಿತ್ರವನ್ನು ದಿಟ್ಟಿಸಿದನು. ನಂಬರ ೧, ನಾಯಕನ ಚಿತ್ರ ಅವನ ಕೋಣೆಯಲ್ಲಿ ಮಾತ್ರವೇ ಅಲ್ಲ ಅವನ ಪಕ್ಕದ ಕೋಣೆಗಳಲ್ಲಿ, ತಲೆಯಮೇಲಿನ, ಕಾಲಕೆಳಗಿನ ಕೋಣೆಗಳಲ್ಲಿ, ಸರ್ವತ್ರ ಮನೆಯ ಗೋಡೆಗಳಲ್ಲಿ, ಊರಿನ ಗೋಡೆಗಳಲ್ಲಿ, ಯಾವ ದೇಶಕ್ಕೋಸ್ಕರ ರುಬಷೊವ ಕಷ್ಟ ನಷ್ಟಗಳನ್ನನುಭವಿಸಿ ಹೋರಾಡಿದ್ದನೋ ಯಾವ ದೇಶವು ಅವನನ್ನು ಈಗ ಸೆರೆಮನೆಯ ಮಡಿಲಲ್ಲಿ ಸೇರಿಸಿಕೊಂಡಿತೋ ಆ ದೇಶದಲ್ಲಿ ಎಲ್ಲೆಲ್ಲೂ ರಾರಾಜಿಸುತಿತ್ತು. ರುಬಷೊವನಿಗೆ ಈಗ ಪೂರ್ಣ ಎಚ್ಚರ; ಆದರೂ ಬಾಗಿಲ ಬಡಿತ ನಿಂತಿರಲಿಲ್ಲ.

೩

ರುಬಷೊವನನ್ನು ಸೆರೆಹಿಡಿಯಲು ಬಂದಿದ್ದ ಇಬ್ಬರು ಉಪ್ಪರಿಗೆಯ ಕತ್ತಲು ತುಂಬಿದ ಜಗಲಿಯಲ್ಲಿ ಗುಸುಗುಸು ವಿಚಾರ ವಿನಿಮಯ ಮಾಡಿ

ಕೊಂಡರು. ಅವರಿಗೆ ಉಪ್ಪರಿಗೆಯ ದಾರಿ ತೋರಿಸಿದ ಪಹರೆಯ ವಾಸ್ಸಿಲಿ ಲಿಫ್ಟಿನ ತೆರೆದ ಬಾಗಿಲಲ್ಲಿ ನಿಂತು ಭಯದಿಂದ ದೀರ್ಘ ಶ್ವಾಸೋಚ್ಛ್ವಾಸ ಬಿಡುತ್ತಿದ್ದನು. ಆವನೊಬ್ಬ ತೆಳ್ಳನೆಯ ಮುದುಕ; ಅಂಗಿಯ ಮೇಲೆ ಆತ ಧರಿಸಿದ್ದ ಮಿಲಿಟರಿ ಓವರ್ಕೋಟಿನ ಹರಿದ ಕಾಲರಿನ ಮೇಲ್ಭಾಗದಲ್ಲಿ ಕೆಂಪಾದ ಗಾಯದ ಕಲೆ ಗಂಡಮಾಲೆಯಂತೆ ಎದ್ದು ತೋರುತಿತ್ತು. ಯಾವದೋ ಕಲಹದಲ್ಲಿ ರುಬಷೊವನ ಪಾರ್ಟಿ ಸಾನ್ ದಳದಲ್ಲಿ ಹೋರಾಡುತ್ತಿದ್ದ ಸಂದರ್ಭದಲ್ಲಿ ಅವನ ಕತ್ತಿನಲ್ಲಾದ ಗಾಯದ ಕುರುಹು ಅದು. ಅದಾದ ಮೇಲೆ ರುಬಷೊವನನ್ನು ಪರದೇಶಗಳಿಗೆ ಕಳಿಸಿದುದರಿಂದ ವಾಸ್ಸಿಲಿಗೆ ಅವನ ಸಂಪರ್ಕ ಹೆಚ್ಚಾಗಿ ಉಳಿಯಲಿಲ್ಲ; ಆದರೆ ಸಂಜೆಯ ಹೊತ್ತು ಆತನ ಮಗಳು ವರ್ತಮಾನ ಪತ್ರಗಳಿಂದ ರುಬಷೊವನು ಪಾರ್ಟಿ ಕಾಂಗ್ರೆಸುಗಳಲ್ಲಿ ಮಾಡುತ್ತಿದ್ದ ಭಾಷಣಗಳನ್ನು ಓದಿ ಹೇಳುತಿದ್ದಳು. ಆ ಭಾಷಣಗಳು ದೀರ್ಘವಾಗಿದ್ದು ಅರ್ಥವಾಗಲು ಕಷ್ಟವಾಗಿದ್ದುವು. ಕಿರಿದಾದ ಗಡ್ಡವಿಟ್ಟುಕೊಂಡು, ಕಸಾನಿನ ಮರಿಯನ್ನು ಕೂಡ ನಗುವಂಥ ಆಣೆಗಳನ್ನಿಡುತ್ತಿದ್ದ ತನ್ನ ದಳದ ಸೇನಾನಿ ರುಬಷೊವನ ಧ್ವನಿಯನ್ನೂ, ಜಾಪನ್ನೂ ಆ ಭಾಷಣ ಗಳಲ್ಲಿ ಕಾಣಲಾಗುತ್ತಿರಲಿಲ್ಲ. ಆ ಭಾಷಣಗಳ ನಡುವೆ ವಾಸ್ಸಿಲಿಗೆ ನಿದ್ದೆ ಬರುವುದು. ಭಾಷಣದ ಕೊನೆಯಲ್ಲಿ ಚಪ್ಪಾಳೆಗಳ ಪರ್ವ ಬರುತ್ತಲೇ ಮಗಳು ಓದುವ ದನಿಯನ್ನೇರಿಸಿದಾಗ ಮತ್ತೆ ವಾಸ್ಸಿಲಿ ನಿದ್ದೆಯಿಂದ ಎಚ್ಚರವಾಗುತ್ತಿದ್ದನು. ಪ್ರತಿಯೊಂದು ಬಾರಿಯೂ 'ಇಂಟರ್‌ನ್ಯಾಷನಲ್ ಜಿಂದಾಬಾದ್! ಮಹಾಕ್ರಾಂತಿ ಜಿಂದಾಬಾದ್! ನಂಬರ ೧ ಜಿಂದಾಬಾದ್!' ಎನ್ನುವಾಗಲೆಲ್ಲ ವಾಸ್ಸಿಲಿ ಮಗಳಿಗೆ ಕೇಳಿಸ ದಷ್ಟು ಮೆಲುದನಿಯಲ್ಲಿ 'ಅಮೆನ್' •(ತಥಾಸ್ತು) ಎಂದು ಹೃತ್ಪೂರ್ವಕ ವಾಗಿ ಉಸುರುವನು. ತನ್ನ ಜಾಕಿಟನ್ನು ಕಳಚಿ, ಗುಟ್ಟಿನಲ್ಲಿ ಎದೆಯ ಮೇಲೆ ಕೈಯಿಂದ ಕ್ರಾಸಿನ ಸಂಕೇತವನ್ನು ಬರೆದು ಮಲಗಲು ತೆರಳು ವನು. ಅವನ ಹಾಸಿಗೆಯ ತಲೆಪಕ್ಕದಲ್ಲಿ ಒಂದನೆಯ ನಂಬರಿನವನ ಚಿತ್ರಪಟವೂ, ಅದರ ಬಳಿಯೆ ಪಾರ್ಟಿಸಾನ ಸೇನಾನಿ ರುಬಷೊವನ ಪಟವೂ ತೂಗುತಿದ್ದುವು. ಆ ಪಟವು ಎಲ್ಲಾದರೂ ಕಣ್ಣಿಗೆ ಬಿದ್ದರೆ

ತನಗೂ ಸೆರೆಮನೆಯ ಗತಿಯಾಗುವುದೋ ಎಂದು ವಾಸ್ಸಿಲಿ ಚಿಂತಾ ತುರನಾದನು.

ಉಪ್ಪರಿಗೆಯ ಮೆಟ್ಟಿಲಿನಲ್ಲಿ ತಣ್ಣಸವೂ, ಕತ್ತಲೂ, ಮೌನವೂ ಆವರಿಸಿದ್ದುವು. ಸರಕಾರದ ಗೃಹ ಶಾಖೆಯಿಂದ ಬಂದವರಲ್ಲಿ ಕಿರಿಯ ವನು ಬಾಗಿಲಿನ ಚಿಲಕವನ್ನು ಗುಂಡು ಹೊಡೆದು ಮುರಿಯಬೇಕೆಂದು ಸೂಚಿಸಿದನು. ವಾಸ್ಸಿಲಿ ಬಾಗಿಲಿನ ಮೇಲೆ ತನ್ನ ಭಾರವನ್ನು ಹಾಕಿ ನಿಂತನು; ಬೂಟನ್ನು ಸರಿಯಾಗಿ ಹಾಕಿಕೊಳ್ಳುವಷ್ಟು ಅವನಿಗೆ ಅವಕಾಶ ವಿರಲಿಲ್ಲ, ಕೈಗಳು ಬಹಳ ನಡುಗುತ್ತಿದ್ದುದರಿಂದ ಬೂಟಿನ ನೂಲನ್ನು ಕಟ್ಟಲು ಅವನಿಗೆ ಸಾಧ್ಯವಾಗಲಿಲ್ಲ. ಗೃಹಶಾಖೆಯ ಹಿರಿಯವನಿಗೆ ಗುಂಡು ಹಾಕಿ ಸಪ್ಪಳ ಮಾಡುವುದು ಇಷ್ಟವಾಗಿರಲಿಲ್ಲ, ಬಹಳ ಜಾಗ ರೂಕತೆಯಿಂದ ಕೈದಿನ ಕೆಲಸ ನಡೆಯಬೇಕಾಗಿತ್ತು. ಮರಗಟ್ಟಿದ ಕೈಯ ಮೇಲೆ ಸ್ವಲ್ಪ ಹೊತ್ತು ಬಿಸಿಯುಸಿರನ್ನು ಊದಿ ಬಾಗಿಲ ಮೇಲೆ ಪುನಃ ಬಡೆಯಲು ಆರಂಭಿಸಿದರು, ಕಿರಿಯವನು ತನ್ನ ಪಿಸ್ತೂಲಿನ ತುದಿಯಿಂದ ಬಾಗಿಲು ಬಡಿಯುತ್ತಿದ್ದನು. ಕೆಳಗಿನ ಯಾವುದೋ ಒಂದು ಮಾಳಿಗೆ ಯಿಂದ ಹೆಂಗಸೊಬ್ಬಳು ಚೀರುವ ಸದ್ದನ್ನು ಕೇಳಿ ಕಿರಿಯವನು ವಾಸ್ಸಿ ಲಿಗೆ 'ಅವಳ ಬಾಯಿ ಮುಚ್ಚಿಸು' ಎಂದು ಆಜ್ಞೆ ಮಾಡಿದನು. 'ಸುಮ್ಮಗಿರು, ಇಲ್ಲಿ ಅಧಿಕಾರಿಗಳು ಇದ್ದಾರೆ' ಎಂದು ವಾಸ್ಸಿಲಿ ಬೊಬ್ಬಿ ಟ್ಟನು. ಹೆಂಗಸಿನ ಬೊಬ್ಬೆ ತಟ್ಟನೆ ನಿಂತು ಹೋಯಿತು. ಅಷ್ಟರಲ್ಲಿ ಕಿರಿಯವನು ಕಾಲಿನ ಬೂಟುಗಳಿಂದ ಬಾಗಿಲನ್ನು ತುಳಿಯಲಾರಂಭಿಸಿ ಸಿದನು. ತುಳಿಯುವ ಸಪ್ಪು ಮೆಟ್ಟಲಲ್ಲಿ ತುಂಬಿತು, ಅಂತೂ ಹೇಗೋ ಕೊನೆಗೆ ಬಾಗಿಲು ತೆರೆಯಿತು.

ಮೂವರೂ ರುಬಷೊವನ ಹಾಸಿಗೆಯ ಬಳಿ ಬಂದರು. ಕಿರಿಯ ವನು ಪಿಸ್ತೂಲನ್ನು ಕೈಯಲ್ಲಿ ಹಿಡಿದುಕೊಂಡೇ ಇದ್ದನು. ಹಿರಿಯವನು ಕವಾಯತಿಗೆ ನಿಲ್ಲುವಂತೆ ನೆಟ್ಟಗೆ ನಿಂತಿದ್ದನು. ಅವರಿಗೆ ಸ್ವಲ್ಪ ದೂರದಲ್ಲಿ ಗೋಡೆಗೆ ಒರಗಿಕೊಂಡು ವಾಸ್ಸಿಲಿ ನಿಂತಿದ್ದನು. ತನ್ನ ಹಿಂದಲೆಯ ಬೆವರನ್ನು ಇನ್ನೂ ಒರಸಿಕೊಳ್ಳುತ್ತಲೇ ಇದ್ದ ರುಬಷೊವ ಅವರೆಲ್ಲ ರನ್ನೂ ನಿದ್ದೆಯ ಕಣ್ಣುಗಳಲ್ಲಿ ಸಮೀಪದೃಷ್ಟಿಯಿಂದ ನೋಡಿದನು

‘ಸಿಟಿಜನ್ ರುಬಷೊವ ನಿಕಲಸ್ ಸಲ್ಮನೊವಿಚ್, ನಿಮ್ಮನ್ನು ಸರಕಾರದ ಕಾನೂನು ಪ್ರಕಾರ ನಾವು ಕೈವಶಗೊಳಿಸಿದ್ದೇವೆ’ ಎಂದು ಕಿರಿಯವನು ಹೇಳಿದನು. ತಲೆದಿಂಬಿನ ಅಡಿಯಲ್ಲಿದ್ದ ತನ್ನ ಕನ್ನಡಕವನ್ನು ಹುಡುಕಿ ತೆಗೆದು ರುಬಷೊವ ಸ್ವಲ್ಪ ನೆಟ್ಟಗಾದನು. ಕನ್ನಡಕವನ್ನು ಧರಿಸಿದ ಮೇಲೆ ವಾಸ್ಸಿಲಿ ಮತ್ತು ಹಿರಿಯವನು ಹಲವು ಬಾರಿ ಕಂಡಿದ್ದ ರುಬಷೊವನ ವರ್ಣಚಿತ್ರ ಮತ್ತು ಫೋಟೋಗಳ ಮುಖಲಕ್ಷಣವೇ ಪ್ರತ್ಯಕ್ಷವಾಗಿ ರುಬಷೊವನ ಮುಖದಲ್ಲಿ ಮೂಡಿದುದನ್ನು ಅವರು ಕಂಡರು. ಅಷ್ಟು ಕಾಣುತ್ತಲೇ ಹಿರಿಯ ಅಧಿಕಾರಿಯು ಮತ್ತಷ್ಟು ನೆಟ್ಟಗಾದನು; ಹೊಸ ನಾಯಕರ ಧುರೀಣತ್ವದಲ್ಲಿ ಬಳೆದ ಕಿರಿಯವನು ಹಾಸಿಗೆಗೆ ಮತ್ತೊಂದು ಹೆಜ್ಜೆ ಹತ್ತಿರ ಬಂದನು; ಉಳಿದ ಮೂವರಿಗೂ ಈತ ಎಡವಟ್ಟಿನಲ್ಲಿ ಏನಾದರೂ ಮಾಡಬಾರದ ಪಾಶವೀಕೃತ್ಯವನ್ನು ಮಾಡುವನೆಂಬುದು ಖಚಿತವಾಯಿತು.

‘ಆ ಪಿಸ್ತೂಲು ಆಚೆಗಿಡು, ಕಾಮ್ರೇಡ್. ನಾನೇನು ಮಾಡಬೇಕೋ ಅದನ್ನು ಹೇಳು.’ ಎಂದು ರುಬಷೊವ ಹೇಳಿದನು.

ಅದಕ್ಕೆ ಆ ಹುಡುಗನು ‘ನಿನ್ನನ್ನು ನಾವು ಕೈದುಮಾಡಿರುತ್ತೇವೆಂಬುದು ತಿಳಿಯಿತಲ್ಲವೇ, ಇನ್ನು ಬಾಯಿ ಮುಚ್ಚಿ ನಮ್ಮ ಜತೆಗೆ ಉಡುಪು ತೊಟ್ಟು ಹೊರಡು’ ಎಂದನು.

‘ನಿಮ್ಮ ಹತ್ತಿರ ವಾರಂಟಿದೆಯೆ?’ ಎಂದು ರುಬಷೊವ ಕೇಳಿದನು.

ಹಿರಿಯವನು ಜೇಬಿನಿಂದ ಒಂದು ಕಾಗದವನ್ನು ಹೊರಕ್ಕೆಳೆದು ರುಬಷೊವನ ಕೈಗೆ ಅದನ್ನು ದಾಟಿಸಿ ಮರಳಿ ನೆಟ್ಟಗೆ ನಿಂತನು.

ರುಬಷೊವ ಅದನ್ನು ಧ್ಯಾನವಿಟ್ಟು ಓದಿ ‘ಸರಿ, ಇದರಿಂದ ಏನು ತಿಳಿಯುತ್ತದೆ, ತಿಳಿದು ಆಗ ಬೇಕಾದ್ದೇನು? ನಿಮ್ಮ ಇಷ್ಟವಿದ್ದಂತಾಗಲಿ’ ಎಂದನು.

‘ಉಡುಪನ್ನು ಧರಿಸಿ ಬೇಗನೆ ಹೊರಡು’ ಎಂದನು ಕಿರಿಯವನು. ಪಶುತ್ವವೂ ಕ್ರೌರ್ಯವೂ ಆತನಲ್ಲಿ ಸೋಗಾಗಿರಲಿಲ್ಲ, ಸ್ವಭಾವವೇ ಆಗಿದ್ದುವು. ಒಳ್ಳೆಯ ಮುಂದಿನ ಜನಾಂಗವನ್ನು ಸೃಷ್ಟಿಸಿದ್ದೇವೆ ಎಂದು ರುಬಷೊವ ತನ್ನಲ್ಲೇ ಯೋಚಿಸಿದನು. ಗೋಡೆಗೆ ಹಚ್ಚುತ್ತಿದ್ದ ಪ್ರಚಾರ

ಪ್ರಕಟನೆಗಳಲ್ಲಿ ಸದಾ ನಗುನಗುವಂತೆ ತೋರಿಸಲ್ಪಡುತ್ತಿದ್ದ ತರುಣರ ಮುಖಗಳನ್ನು ಈಗ ರುಬಷೊವ ಸ್ಮರಿಸಿಕೊಂಡನು. ಅವನ ಮೇಲೆ ಆಯಾಸವು ಕವಿಯಿತು. 'ಪಿಸ್ತೂಲ್ ಹಿಡಿದು ಚಡಪಡಿಸುವುದರ ಬದಲು ನನ್ನ ಗವಸನ್ನು ಈಚೆಗೆ ಕೊಡು' ಎಂದು ಕಿರಿಯವನಿಗೆ ರುಬ ಷೊವ ಹೇಳಿದನು. ಆ ತರುಣ ಕೆಂಪಾದನು. ಆದರೆ ರುಬಷೊವನ ಮಾತಿ ನಂತೆ ನಡೆಯಲಿಲ್ಲ. ಹಿರಿಯವನೇ ಗವಸನ್ನು ರುಬಷೊವನಿಗೆ ಕೊಂಡು ಹೋಗಿ ಕೊಟ್ಟನು. ರುಬಷೊವ ತನ್ನ ತೋಳನ್ನು ಅದರಲ್ಲಿ ಸಿಕ್ಕಿಸುತ್ತ 'ಸರಿ ಈ ಬಾರಿಯಾದರೂ ಇದು ಸರಿಯಾಗಿ ಹೋಗುತ್ತದಲ್ಲಾ' ಎಂದು ಪ್ರಯತ್ನ ವಶ ನಕ್ಕು ನುಡಿದನು. ಉಳಿದ ಮೂವರಿಗೆ ಈ ಮಾತಿನ ಅರ್ಥವಾಗದುದರಿಂದ ಅವರು ಪ್ರತಿ ಮಾತಾಡಲಿಲ್ಲ; ಅವನು ನಿಧಾನ ವಾಗಿ ಹಾಸಿಗೆಯಿಂದ ಎದ್ದು ಮುದ್ದೆಯಾದ ಬಟ್ಟೆಗಳನ್ನು ಕೂಡಿಡುವು ದನ್ನು ಅವರು ನೋಡುತ್ತ ನಿಂತರು.

ಆ ಹೆಂಗಸಿನ ಚೀರಾಟವು ನಿಂತ ಮೇಲೆ ಕಟ್ಟಡದಲ್ಲಿ ಸರ್ವತ್ರ ಮೌನವು ಆವರಿಸಿತ್ತಾದರೂ ಅದರೊಳಗೆ ವಾಸವಾಗಿದ್ದ ಜನರೆಲ್ಲರೂ ತಂತಮ್ಮ ಹಾಸಿಗೆಯಲ್ಲಿ ಉಸಿರು ಹಿಡಿದುಕೊಂಡು ಎಚ್ಚತ್ತಿರಬೇಕೆಂಬ ಭಾವನೆಯು ಅವರೆಲ್ಲರಿಗೂ ತೋಚಿತು.

ಮೇಲಿನ ಉಪ್ಪರಿಗೆಯಲ್ಲಿ ಅಷ್ಟರಲ್ಲಿ ಯಾರೋ ನಲ್ಲಿಯ ಮುಚ್ಚ ಳವನ್ನು ತೆರೆದುದರಿಂದಾಗಿ ನೀರು ನಳಿಗೆಗಳಲ್ಲಿ ಏಕಪ್ರಕಾರವಾಗಿ ಇಳಿ ಯತೊಡಗಿತು.

೪

ಕಟ್ಟಡದ ಮುಂಬಾಗಿಲಲ್ಲಿ ಅಧಿಕಾರಿಗಳು ಬಂದಿದ್ದ ಅಮೇರಿಕನ್ ತಯಾರಿಯ ಕಾರು ನಿಂತಿತ್ತು. ಕತ್ತಲು ಕಡಮೆಯಾಗಿರಲಿಲ್ಲ. ಕಾರಿನ ಸೋಫರ ಕಾರಿನ ತಲೆದೀಪಗಳನ್ನು ಬೆಳಗಿಸಿದನು. ಇಡಿ ಬೀದಿಯೇ ನಿದ್ರಿಸುವಂತೆ ಅಥವಾ ನಿದ್ರಿಸುವ ನಟನೆ ಮಾಡುವಂತೆ ತೋರಿತು. ಮೊದಲು ಕಿರಿಯವನು, ಆ ಮೇಲೆ ರುಬಷೊವ.

ಮೂರನೆಯದಾಗಿ ಹಿರಿಯವನು ಒಬ್ಬೊಬ್ಬರಾಗಿ ಕಾರಿನೊಳಗೆ ಪ್ರವೇಶಿಸಿದರು. ಜತೆಗಟ್ಟಿನ ವಸ್ತ್ರ ಧರಿಸಿದ ಷೋಫರನು ಕಾರನ್ನು ಹೊರಡಿಸಿದನು. ಆ ಬೀದಿಯ ಮೂಲೆಗೆ ತಾರು ರಸ್ತೆ ಮುಗಿಯುವುದು. ಸುತ್ತುಮುತ್ತಲೂ ಒಂಭತ್ತು ಹತ್ತು ಮಹಡಿಯ ಆಧುನಿಕ ಭವ್ಯ ಕಟ್ಟಡಗಳೇ ನಿಂತಿದ್ದರೂ ಕೆಳಗಿರುವ ರಸ್ತೆ ಮಾತ್ರ ಹೆಪ್ಪುಗಟ್ಟಿದ ಕೆಸರಿನ ಹಳ್ಳಿಯ ರಸ್ತೆಯೇ ಆಗಿತ್ತು. ರಸ್ತೆಯ ಬಿರುಕುಗಳ ನಡುವೆ ಹಿಮವು ಹಿಟ್ಟುಹಿಟ್ಟಾಗಿ ಸೇರಿಕೊಂಡಿತ್ತು. ಷೋಫರ ನಡೆಯುವಷ್ಟೇ ನಿಧಾನವಾಗಿ ಆ ರಸ್ತೆಯ ಮೇಲೆ ಕಾರನ್ನು ಓಡಿಸುವಾಗ ನಾಜೂಕಾದ ಸ್ಪ್ರಿಂಗುಳ್ಳ ಮೋಟರ ಕಾರು ಎತ್ತಿನ ಗಾಡಿಯಂತೆಯೇ ಏದುತ್ತ ಏದುತ್ತ ಮುಂದೆ ಸಾಗಿತು.

'ಜೋರಾಗಿ ಓಡಿಸು' ಎಂದು ಕಾರಿನೊಳಗಿನ ಮೌನವನ್ನು ತಡೆಯಲಾರದ ಕಿರಿಯವನು ಷೋಫರನಿಗೆ ಅಪ್ಪಣೆ ಮಾಡಿದನು.

ಷೋಫರ ಹಿಂದೆ ನೋಡದೆ ಹೆಗಲು ಎಗುರಿಸಿದನು. ರುಬಷೊವ ಕಾರಿನೊಳಗೆ ಹೋಗುವಾಗ ಈ ಷೋಫರ ಅವನನ್ನು ನೋಡಿದ ದೃಷ್ಟಿಯಲ್ಲಿ ತಾತ್ಸಾರವಿತ್ತು, ಹಗೆಯೂ ಇತ್ತು. ರುಬಷೊವ ಒಂದೊಮ್ಮೆ ಅಪಘಾತಕ್ಕೆ ತುತ್ತಾಗಿ ಎಂಬ್ಯುಲೆನ್ಸ್ ಕಾರಿನಲ್ಲಿ ಹೋಗುತ್ತಿದ್ದಾಗ ಇಂಥದೇ ದೃಷ್ಟಿಯುಳ್ಳ ಡ್ರೈವರನನ್ನು ಕಂಡಿದ್ದನು. ಮೃತಪ್ರಾಯವಾದ ಬೀದಿಗಳಲ್ಲಿ ಓರೆಕೋರೆಯಾಗಿ ದೀಪ ಹಾಯಿಸುತ್ತ ಮೈಯೆಲ್ಲ ಕುಲುಕಿಸಿಕೊಂಡು ಸಾಗುವುದು ಕಷ್ಟವಾಗಿತ್ತು. 'ಎಷ್ಟು ದೂರ ಇದೆ?' ಎಂದು ತನ್ನ ಸಂಗಾತಿಗಳ ಮೋರೆ ನೋಡದೆಯೆ ರುಬಷೊವ ಪ್ರಶ್ನಿಸಿದನು. ಕೂಡಲೆ "ಆಸ್ಪತ್ರೆಗೆ" ಎಂದು ಕೂಡಿಸಿದನು. ಹಿರಿಯ ಸಮವಸ್ತ್ರ ಧಾರಿ 'ಇನ್ನು ಗಟ್ಟಿ ಅರ್ಧ ತಾಸಿದೆ' ಎಂದನು. ರುಬಷೊವ ಜೇಬಿನಿಂದ ಸಿಗರೇಟನ್ನು ಹುಡುಕಿ ತೆಗೆದು ಒಂದನ್ನು ತನ್ನ ಬಾಯಲ್ಲಿಟ್ಟು ಅಭ್ಯಾಸವಶಾತ್ ಪ್ಯಾಕೆಟನ್ನು ಸಂಗಾತಿಗಳಿಗೆ ಕೊಟ್ಟನು. ಕಿರಿಯವನು ತನಗೆ ಬೇಡವೆಂದನು, ಹಿರಿಯವನು ಎರಡು ಸಿಗರೇಟ ತೆಗೆದು ಒಂದನ್ನು ಷೋಫರಿಗೆ ದಾಟಿಸಿದನು. ಷೋಫರ ಗೌರವಾರ್ಥವಾಗಿ ಟೊಪ್ಪಿಯನ್ನು ಮುಟ್ಟಿ ಒಂದು

ಕೈಯಲ್ಲಿ ಸ್ಟೇರಿಂಗನ್ನು ಹಿಡಿದುಕೊಂಡು ಇನ್ನೊಂದರಲ್ಲಿ ಸಿಗರೇಟ ಹತ್ತಿಸುವ ದೀಪವನ್ನು ಎಲ್ಲರಿಗೂ ಹಿಡಿವನು. ರುಬಷೊವನ ಎದೆ ಸ್ವಲ್ಪ ಹಗುರವಾದರೂ ಅವನ ಅಸಮಾಧಾನ ಕಡಿಮೆಯಾಗಲಿಲ್ಲ. ಭಾವನಾ ಪರವಶನಾಗಲು ಒಳ್ಳೆಯ ಸಮಯ ಎಂದುಕೊಂಡನು. ಆದರೂ ಒಂದು ಒಳ್ಳೆಯ ಮಾತು ಹೇಳಿ ಕಾರಿನೊಳಗೆ ಸ್ವಲ್ಪ ಮನುಷ್ಯಸಹಜ ವಾತಾವರಣವನ್ನೂ, ಉಲ್ಲಾಸವನ್ನೂ ಹುಟ್ಟಿಸಬೇಕೆಂದು ಬಗೆದು 'ಅಯ್ಯೋ ಕಾರಿನ ಗತಿಯೇ, ಈ ವಿದೇಶೀಯ ಕಾರುಗಳೇ ಹೀಗೆ. ದುಡ್ಡೇನೋ ಧಾರಾಳವಾಗಿ ಚೆಲ್ಲಬೇಕು. ಆದರೂ ನಮ್ಮ ರಸ್ತೆಗಳಲ್ಲಿ ಆರು ತಿಂಗಳು ಓಡಾಡಿದರೆ ಅವುಗಳ ಅವಸ್ಥೆ ತೀರುತ್ತದೆ. ಎಂದನು.

'ನೀವು ಹೇಳಿದ್ದು ಅಕ್ಷರಶಃ ಸರಿ. ರಸ್ತೆಗಳ ಮಟ್ಟಿಗೆ ನಾವು ಬಹಳ ಹಿಂದೆ.' ಎಂದು ಹಿರಿಯುವನು ರುಬಷೊವನ ಮಾತಿಗೆ ಸೈಗುಟ್ಟಿದನು. ಅವನ ಮಾತಿನ ಧ್ವನಿಯಲ್ಲಿ ಅವನು ಉಪಾಯವಿಲ್ಲದೆ ಮಾತನಾಡುವಂತೆ, ಹಸಿದ ನಾಯಿಗೆ ಒಂದು ತುಂಡೆಲುಬನ್ನು ಎಸೆಯು ವಂತೆ, ರುಬಷೊವಗೆ ಭಾಸವಾಯಿತು. ಆ ಬಳಿಕ ಅವನು ಮಾತಿನ ಪ್ರಯತ್ನ ಮಾಡಲಿಲ್ಲ.

ಹಠಾತ್ತಾಗಿ ಆಕ್ರಮಣದ ಸ್ವರದಲ್ಲಿ ಕಿರಿಯುವನು, 'ಬಂಡವಾಳ ಶಾಹಿ ರಾಷ್ಟ್ರಗಳಲ್ಲಿ ಇದಕ್ಕಿಂತ ಒಳ್ಳೆಯ ರಸ್ತೆಗಳಿಲ್ಲಿವೆ?' ಎಂದು ಕೇಳಿದನು.

ರುಬಷೊವ ನಕ್ಕು 'ನೀನು ದೇಶಬಿಟ್ಟು ಎಂದಾದರೂ ಹೊರಗೆ ಹೋಗಿರುವಿಯಾ?' ಎಂದು ಕೇಳಿದನು........

ಆಗ ಕಿರಿಯನು 'ಹೋಗದಿದ್ದರೂ ನನಗೆಲ್ಲಾ ಗೊತ್ತಿದೆ. ನೀನು ಅಲ್ಲಿಯ ವಿಷಯ ಕಥೆಕಟ್ಟಿ ವರ್ಣಿಸುವುದು ಬೇಡ' ಎಂದನು.

'ನಾನು ಯಾರೆಂದು ನೀನು ಎಣಿಸಿದ್ದೀಯಾ?' ಎಂದು ರುಬಷೊವ ಮೆಲ್ಲಗೆ ತರುಣನನ್ನು ಪ್ರಶ್ನಿಸಿದನು. ಮತ್ತು ತಡೆಯಲಾರದೆ, 'ನೀನು ಪಕ್ಷದ ಇತಿಹಾಸವನ್ನು ಚೆನ್ನಾಗಿ ಒಮ್ಮೆ ಓದುವುದು ಒಳ್ಳೆಯದು.' ಎಂದು ಸೇರಿಸಿದನು.

ತರುಣ ಮೌನವಾಗಿ ನೆಟ್ಟದೃಷ್ಟಿಯಿಂದ ಡ್ರೈವರನ ಬೆನ್ನನ್ನೇ ನೋಡಹತ್ತಿದನು. ಮೂರನೆಯ ಸಲ ಡ್ರೈವರ ಚೋಕನ್ನೆಳೆದು ಶಪಿಸುತ್ತ ಅದನ್ನು ಬಿಟ್ಟನು. ಅಮರುತ್ತಾ ಕಾರು ಉಪನಗರದ ಬೀದಿಗಳಲ್ಲಿ ಮುಂದೆ ಚಲಿಸಿತು. ದಾರಿಯಲ್ಲಿದ್ದ ಮರದ ಮನೆಗಳಲ್ಲಿ ಏನೂ ಪರಿವರ್ತನೆಯಾದಂತೆ ತೋರಲಿಲ್ಲ. ಆ ಮನೆಗಳ ಓರೆಕೋರೆ ನೆರಳಿನ ಮೇಲ್ಗಡೆ ಮಂದ ಪ್ರಕಾಶವನ್ನು ಬೀರುತ್ತಿದ್ದ ಚಂದ್ರನ ಮೋರೆ ಸಣ್ಣಗಾಗಿತ್ತು.

೫

ನವೀನ ಮಾದರಿಯ ಕಾರಾಗೃಹದ ಮುಂದಿನ ಪ್ರತಿಯೊಂದು ನಡವೆಯಲ್ಲಿಯೂ ವಿದ್ಯುದ್ದೀಪ ಉರಿಯುತಿತ್ತು. ಕಬ್ಬಿಣದ ಕಟಾಂಜನದ ಮೇಲೂ, ಸುಣ್ಣ ಬಳಿದ ಬೋಳು ಗೋಡೆಯ ಮೇಲೂ, ಹೆಸರಿನ ಕಾರ್ಡು ಹಚ್ಚಿದ ಕೋಣೆಯ ಬಾಗಿಲುಗಳ ಮೇಲೂ, ಬಾಗಿಲಲ್ಲಿರುವ ಕಿರಿ ತೂತಿನ ಮೇಲೂ ದೀಪದ ಪ್ರಕಾಶವು ಬೀಳುತಿತ್ತು. ವರ್ಣವಿಹೀನವಾದ ಈ ದೀಪದ ಬೆಳಕೂ ಪ್ರತಿನುಡಿಯುವ ಅವರ ಪದಘಾತದ ಧ್ವನಿಯೂ ರುಬಸೊವಗೆ ಚಿರಪರಿಚಯದವುಗಳಾದುದರಿಂದ ಒಂದೆರಡು ಸೆಕೆಂಡುಗಳ ತನಕ ಆತ ತಾನು ಇನ್ನು ಸ್ವಪ್ನ ರಾಜ್ಯದಲ್ಲೇ ಇದ್ದೇನೆಂದು ಭಾವಿಸಯತ್ನಿಸಿದನು. ಇದು ವರೆಗೆ ನಡೆದುದೆಲ್ಲವೂ ಭ್ರಾಂತಿ, ನಿಜವಲ್ಲವೆಂದು ಊಹಿಸಲು ಪ್ರಯತ್ನಿಸಿದನು. ತಾನು ಕಾಣುತ್ತಿರುವುದು ಕನಸೆಂದು ತನಗೆ ನಂಬಿಕೆ ಹುಟ್ಟಿದರೆ ಅದು ನಿಜಕ್ಕೂ ಕನಸಾಗುವುದೆಂದು ಆತ ಯೋಚಿಸಿದನು.

ಯತ್ನಪೂರ್ವಕವಾಗಿ ಯೋಚಿಸುತ್ತ ಯೋಚಿಸುತ್ತ ದಣಿದು ಕಣ್ಣು ಕತ್ತಲೆ ಬಂದಂತಾಯಿತು. ಮರುಕ್ಷಣ ನಾಚಿಕೆಯ ಒಂದು ತೆರೆ ಅವನ ಹೃದಯದಲ್ಲಿ ಎದ್ದು ಅಪ್ಪಳಿಸಿತು. ಅನುಭವಿಸಿಯೇ ತೀರಬೇಕಾದ್ದು, ಕೊನೆಯವರೆಗೂ ಅನುಭವಿಸತಕ್ಕದ್ದು ಎಂಬ ವಿಚಾರ ಆತನ ತಲೆಯಲ್ಲಿ ಸುಳಿಯಿತು. ೪೦೪ನೆಯ ನಂಬರಿನ ಕೋಣೆ

ಬಂದಿತು. ಬಾಗಿಲಿನ ತೂತಿನ ಮೇಲ್ಗಡೆ ನಿಕಲಸ್ ಸಲ್ಮನೊವಿಚ್ ರುಬಷೊವ ಎಂದು ಅವನ ಹೆಸರಿನ ಕಾರ್ಡು ಹಚ್ಚಿದ್ದರು. ಕಾರ್ಡಿನಲ್ಲಿ ತನ್ನ ಹೆಸರನ್ನು ನೋಡಿ ವ್ಯವಸ್ಥೆ ಎಲ್ಲಾ ಚೆನ್ನಾಗಿಯೇ ಇದೆ ಎಂದು ರುಬಷೊವ ತನ್ನ ಮನಸ್ಸಿನಲ್ಲೇ ಅಂದುಕೊಂಡನು. ಕಾವಲುಗಾರನೊಡನೆ ತನಗೆ ಇನ್ನೊಂದು ಹೊದಿಕೆ ಕೊಡಬೇಕೆಂದು ಕೇಳುವ ಮೊದಲೇ ಕೋಣೆಯ ಬಾಗಿಲು ಇಕ್ಕಿಕೊಂಡಿತು.

## ೬

ರಾತ್ರಿ ಎಲ್ಲ ಕಾವಲುಗಾರನು ಬಾಗಿಲ ತೂತಿಗೆ ಕಣ್ಣಿಟ್ಟು ರುಬಷೊವನ ಕೋಣೆಯನ್ನು ಆಗಾಗ ಪರೀಕ್ಷಿಸುತ್ತಿದ್ದನು. ಮಲಗಿದ ರುಬಷೊವ ಅತ್ತಿತ್ತ ಒಂದಿಷ್ಟೂ ಅಲುಗಿರಲಿಲ್ಲ, ಅವನ ಕೈಗಳು ಮಾತ ನಿದ್ದೆಯಲ್ಲಿ ಆಗಾಗ ಮಡಚಿಕೊಳ್ಳುತಿದ್ದುವು. ಮಂಚದ ಬಳಿ ಅವನ ಕನ್ನಡಕವೂ, ನೆಲದ ಮೇಲೆ ಸಿಗರೇಟಿನ ತುಂಡೂ ಬಿದ್ದಿದ್ದುವು.

ಮುಂಜಾನೆ ಏಳು ಗಂಟೆಗೆ— ೪೦೪ನೆಯ ಕೋಣೆಗೆ ಆತ ಕಾಲಿಟ್ಟ ಎರಡು ತಾಸುಗಳ ತರುವಾಯ—ತುತೂರಿಯ ಸದ್ದಿನಿಂದಾಗಿ ರುಬಷೊವಗೆ ಎಚ್ಚರವಾಯಿತು. ನಿದ್ದೆಯಲ್ಲಿ ಎಂದಿನಂತೆ ಕನಸು ಕಾಣದೆ ಮಲಗಿದುದರಿಂದಾಗಿ ಅವನ ಮನಸ್ಸು ಪ್ರಸನ್ನವಾಗಿತ್ತು. ತುತೂರಿ ಮೂರುಸಲ ಒಂದೇ ರಾಗದಲ್ಲಿ ಕೂಗಿತು. ಅದರ ನಡುಗುಧ್ವನಿ ಪ್ರತಿಧ್ವನಿಯನ್ನು ಹುಟ್ಟಿಸಿ ಮಾಯವಾಯಿತು. ಆ ಮೇಲೆ ಉಳಿದುದು ಕಾರಾಗೃಹದ ಪರಿಸರದ ದುರ್ಮೌನ ಮಾತ್ರ.

ಬೆಳಕಿನ್ನೂ ಸರಿಯಾಗಿ ಹರಿದಿರಲಿಲ್ಲ. ಕ್ಯಾನ್ ಮತ್ತು ವಾಶ್‌ಬೇಸಿನ್ನಿನ ಅಂಚುಗಳಿನ್ನೂ ಸ್ಪಷ್ಟವಾಗಿ ತೋರುತ್ತಿರಲಿಲ್ಲ. ಮಬ್ಬುಹಿಡಿದ ಗಾಜಿಗೆ ಇದಿರಾಗಿ ನೆಟ್ಟ ಕಿಟಕಿಯ ಕಬ್ಬಿಣದ ಸರಳುಗಳು ಕರಿನೆರಳಿನಂತೆ ಕಾಣುತಿದ್ದುವು. ಮೇಲಿನ ಒಂದು ಗಾಜು ಒಡೆದು ಹೋದಲ್ಲಿ ವರ್ತಮಾನಪತ್ರದ ಹಾಳೆಯನ್ನು ಅಂಟಿಸಿದ್ದರು. ರುಬಷೊವ ಎದ್ದುಕೂತು ಕನ್ನಡಕವನ್ನೂ ಸಿಗರೇಟ

ತುಂಡನ್ನೂ ಎಳೆದುಕೊಂಡು ಮತ್ತೆ ಮಲಗಿದನು. ಕನ್ನಡಕವನ್ನು ಇಟ್ಟುಕೊಂಡು ಕಷ್ಟದಿಂದ ಸಿಗರೇಟಚೂರಿಗೆ ಬೆಂಕಿ ಹಚ್ಚಿದನು. ಮೌನ ಮುಂದುವರಿಯಿತು. ಈ ಕಾಂಕ್ರೀಟಿನ ಜೇನುಗೂಡಿನಲ್ಲಿ ಸುಣ್ಣ ಮೆತ್ತಿದ ಎಲ್ಲ ಕೋಣೆಗಳಲ್ಲಿಯೂ ಕೈದಿಗಳು ಏಕಕಾಲಕ್ಕೆದ್ದು ಏಕ ಕಾಲದಲ್ಲಿ ನೆಲವನ್ನು ತಡಕುತ್ತ ಶಪಿಸುತ್ತ ಇರುವರಾದರೂ ರುಬಷೊವನನ್ನು ಹಾಕಿದ ಒಂಟಿಕೋಣೆಯಲ್ಲಿ ಹೊರಗಿನ ಉದ್ದವಾದ ಜಗಲಿಯ ಮುಖಾಂತರ ಹಿಂತೆರಳುವ ಹೆಜ್ಜೆಗಳ ಸದ್ದಿನ ಹೊರತು ಬೇರಾವುದೂ ಕೇಳಿಸುವಂತಿರಲಿಲ್ಲ. ತಾನಿರುವ ಒಂಟಿಕೋಣೆ ತನ್ನನ್ನು ಗುಂಡುಹಾಕಿ ಕೊಲ್ಲುವವರೆಗೆ ತನ್ನ ಆಶ್ರಯಸ್ಥಾನವೆಂದು ರುಬಷೊವಗೆ ತಿಳಿದಿತ್ತು. ಚೂಪಾದ ಗಡ್ಡವನ್ನು ಬೆರಳಿಂದ ತಿಕ್ಕುತ್ತ, ಸಿಗರೇಟನ್ನು ಸೇದುತ್ತ ರುಬಷೊವ ಮಂಚದ ಮೇಲೆ ಅಲುಗಾಡದೆ ಬಿದ್ದುಕೊಂಡು ಯೋಚಿಸುತ್ತಿದ್ದನು.

ಇನ್ನೇನು ನಾನು ಗುಂಡಿನ ಬಾಯಿಗೆ ಆಹುತಿಯಾದಂತೆಯೇ ಎಂದು ಆತ ಯೋಚಿಸಿದನು. ಕಾಲಿನ ಹೆಬ್ಬೆರಳು ಹಾಸಿಗೆಯ ತುತ್ತ ತುದಿಯಲ್ಲಿ ನೆಟ್ಟಗೆ ನಿಂತುದನ್ನು ಪಿಳಿ ಪಿಳಿ ಕಣ್ಣಿನಿಂದ ನೋಡಿದನು. ಮೈಗೆ ಬೆಚ್ಚಗೆ ಅನಿಸಿತು, ಜೀವಕ್ಕೇನೋ ಭದ್ರತೆಯ ಭಾವ ತುಂಬಿತು, ಆದರೂ ಆಯಾಸ ಕಡಿಮೆಯಾಗಲಿಲ್ಲ. ಆ ಬೆಚ್ಚಗಿನ ಹೊದಿಕೆಯೊಳಗಿಂದ ಈಗಿಂದೀಗ ನಿದ್ರೆಯಲ್ಲಿಯೇ ಮೃತ್ಯುಮುಖವನ್ನು ಪ್ರವೇಶಿಸಲು ಅವನು ಸಿದ್ಧನಾಗಿದ್ದನು. 'ಸರಿ ಮತ್ತೇನು, ನಿನಗೆ ಅವರು ಗುಂಡು ಹಾಕುತ್ತಾರೆ' ಎಂದು ಹೇಳಿಕೊಂಡನು. ಕಾಲುಚೀಲದೊಳಗಿಂದಲೇ ಬೆರಳುಗಳನ್ನು ಬಗ್ಗಿಸುತ್ತಿರುವ ರುಬಷೊವಗೆ ಕ್ರಿಸ್ತನ ಪಾದಗಳಿಗೆ ಮುಳ್ಳು ಪೊದರಿನಲ್ಲಿ ಒದ್ದಾಡುವ ಬಿಳಿ ಜಿಂಕೆಯ ಉಪಮೆಯನ್ನು ಕೊಟ್ಟ ಯಾವುದೋ ಒಂದು ಕವಿತೆಯ ಸಾಲು ನೆನಪಾಯಿತು. ಬೆಚ್ಚಗಿನ ಹೊದಿಕೆಯೊಳಗಿರುವಷ್ಟು ಕಾಲ ತಾನು ಪರಮಸುಖಿ, ಎದ್ದು ತಿರುಗಾಡುವುದಷ್ಟೆ ತಾಪತ್ರಯವೆಂದು ಆತ ಭಾವಿಸಿದನು. 'ವಿನಾಶಕಾಲ ಸಮೀಪಿಸಿತು' ಎಂದು ಸಾಧಾರಣ ಗಟ್ಟಿಯಾಗಿಯೇ ಅಂದು ಮತ್ತೊಂದು ಸಿಗರೇಟನ್ನು ಹಚ್ಚಿದನು. ಮೂರು ಸಿಗ

ರೇಟ ಮಾತ್ರ ಉಳಿದಿದ್ದುವು; ಹಸಿ ಹೊಟ್ಟೆಗೆ ಸಿಗರೇಟು ಸೇದಿದರೆ ಆವ ನಿಗೆ ಅಮಲೇರಿದಂತೆ ಭಾಸವಾಗುವ ರೂಢಿ ಇತ್ತು. ಅಲ್ಲದೆ ತಾನು ಮೃತ್ಯುವಿಗೆ ಸಮೀಪದಲ್ಲಿರುವೆನೆಂಬ ಅನುಭವವು ಅವನಿಗೆ ಹೊಸದಾಗಿ ರಲಿಲ್ಲವಾದರೂ, ಈಗ ಅದರ ಉದ್ವೇಗವೂ ಅಮಲಿನೊಡನೆ ಸೇರಿ ಕೊಂಡಿತು. ಇಂಥ ಸ್ಥಿತಿ ಘೃಣಾಸ್ಪದ, ಒಂದು ರೀತಿಯಲ್ಲಿ ನೋಡಿದರೆ ಅಶಕ್ಯ. ಆದರೂ ಕೋಣೆಯಲ್ಲಿರುವಾಗ ಹಾಗೆ ಯೋಚಿಸಬಾರದು, ಬದಲು ಕಾಲ್ಬೆರಳುಗಳು ಕಾಲುಚೀಲದೊಳಗೆ ಕೂಡುವ ಆಟ ನೋಡು ವುದೇ ಚೆನ್ನ. ಸರ್ವಸಾಧಾರಣವಾಗಿ ಆತನಿಗೆ ತನ್ನ ದೇಹದ ಮೇಲೆ ಮಮತೆ ಇರಲಿಲ್ಲವಾದರೂ ಆ ಗಳಿಗೆಯಲ್ಲಿ ತನ್ನದೇಹದ ಮೇಲಣ ಸಹಾ ನುಭೂತಿಯ ಸುಖೋಷ್ಣ ತರಂಗವೊಂದು ಅವನ ವ್ಯಕ್ತಿತ್ವವನ್ನು ವ್ಯಾಪಿ ಸಿತು. ಸನ್ನಿಹಿತ ವಿನಾಶದ ಹೊಸಲಲ್ಲಿ ತನಗೆ ತಾನೇ ಕನಿಕರಪಡುವಾಗ ಉಂಟಾಗುವ ಆನಂದಾನುಭವವು ಹಿತಕರವಾಯಿತು. 'ಹಳೆಯ ಹುದ್ದೆ ರಿಗಳ ಕಾಲ ಮುಗಿಯಿತು' ಎಂದು ಆತ ಹೇಳಿಕೊಂಡನು. 'ನಾವೇ ಕೊನೆಯವರು'. 'ನಮ್ಮ ಕಥೆ ಇನ್ನೇನು ಮುಗಿದ ಹಾಗೆಯೇ' ಎಂದು ಗೊಣಗಿದನು. 'ಚಿನ್ನದ ಬಾಲಕ ಬಾಲಿಕೆಯರಿಗಾಗಿ ಎಲ್ಲರೂ ಮಣ್ಣು ಮುಕ್ಕಬೇಕು' ಎಂಬರ್ಥದ ಒಂದು ಹಳೆಯ ಶಿಶುಗೀತದ ರಾಗವನ್ನು ನೆನಪಿಗೆ ತರಲು ರುಬಶೊವ ಪ್ರಯತ್ನಿಸಿದನು, ಸಾಧ್ಯವಾಗಲಿಲ್ಲ. 'ಹಳೆಯ ನಾಯಕ ವರ್ಗ ಮಣ್ಣು ಮುಕ್ಕಿತು' ಎಂದು ಮತ್ತೊಮ್ಮೆ ಹೇಳಿ ಮಣ್ಣು ಮುಕ್ಕಿದ ಆ ಮಹನೀಯರ ಮೋರೆಗಳನ್ನೆಲ್ಲ ಜ್ಞಾಪಕಕ್ಕೆ ತರಲು ಯತ್ನಿಸಿದನು. ಆದರೆ ಎಷ್ಟೋ ಮರವೆಯಾಗಿದ್ದುವು. ದೇಶ ದ್ರೋಹಿಯೆಂದು ಫಾಶಿಗೆ ಗುರಿಯಾಗಿದ್ದ 'ಇಂಟರ್‌ನ್ಯಾಷನಲ್'ನ ಪ್ರಥಮ ಅಧ್ಯಕ್ಷನ ವೈಸ್ಟ್ ಕೋಟ್ ಮತ್ತು ಉರುಟಾದ ಹೊಟ್ಟೆಯು ಹೊರತು ಎಷ್ಟು ಶ್ರಮಪಟ್ಟರೂ ಮುಖವು ನೆನಪಿಗೆ ಬರಲೊಲ್ಲದು. ಕ್ರಾಂತಿಯುತ ರಾಷ್ಟ್ರದ ಉಪಪ್ರಧಾನಸಚಿವನು ಕೊನೆಯ ಕ್ಷಣದಲ್ಲಿ ಉಗುರು ಕಚ್ಚಿದ ನೆನಪು ರುಬಶೊವನ ಸ್ಮರಣೆಗೆ ಬಂತು...........
........................ಅಷ್ಟೇನೂ ನಂಬಿಕೆ ಇರಲಿಲ್ಲವಾದರೂ, ಚಿಂತಿಸ ಬೇಡ. ನಿನ್ನನ್ನು ಇತಿಹಾಸವು ಪುನರ್‌ಪ್ರತಿಷ್ಠೆ ಮಾಡುವುದು ಎಂದು

ರುಬಷೊವ ಆ ಮಹನೀಯನ ಕುರಿತು ಯೋಚಿಸಿದನು. ಉಗುರು ಕಚ್ಚುವ ವಿಷಯ ಇತಿಹಾಸಕ್ಕೆ ಏನು ತಿಳಿದಿದೆ? ಸಿಗರೇಟು ಸೇದುತ್ತ ಹಳೆಯ ನಾಯಕರನ್ನೂ ಅವರು ಮೃತ್ಯು ಪೂರ್ವದಲ್ಲಿ ಅನುಭವಿಸಿದ ಅವಮಾನ ಹೀನಾಯಗಳನ್ನೂ ರುಬಷೊವ ಸ್ಮರಿಸಿದನು. ಆದರೂ ಒಂದನೆಯ ನಂಬರಿನವನನ್ನು ದ್ವೇಷಿಸಲು ರುಬಷೊವಗೆ ಸಾಧ್ಯವಾಗಲಿಲ್ಲ. ಹಾಸಿಗೆಯ ಮೇಲೆ ತೂಗುತ್ತಿದ್ದ ಒಂದನೆಯ ನಂಬರಿನವನ ಚಿತ್ರಪಟವನ್ನು ನೋಡುತ್ತ ಅದನ್ನು ದ್ವೇಷಿಸಬೇಕೆಂದು ರುಬಷೊವ ಮನಃಪೂರ್ವಕ ಯೋಚಿಸಿದ್ದುಂಟು. ರುಬಷೊವ ಮತ್ತು ಅವನ ಗೆಳೆಯರು ಪಕ್ಷದಲ್ಲಿರುವಾತನಿಗೆ ಏನೇನೋ ಹೆಸರುಗಳನ್ನು ಹಚ್ಚುವುದಿತ್ತು; ಆ ಪೈಕಿ ದೃಢವಾಗಿ ಹಿಡಿದ ಹೆಸರೆಂದರೆ ಒಂದನೆಯ ನಂಬರ. ಆತ ಮಾಡಿದ್ದೆಲ್ಲವೂ ಸರಿ ಎಂಬ ಸಾಧ್ಯತೆಯನ್ನು ಅಂಗೀಕರಿಸಬೇಕಾದುದು ಆತನ ಅತ್ಯಂತ ಭಯಾನಕ ಸ್ವರೂಪವೆನ್ನಬಹುದು. ಗುಂಡಿನ ಗೋಲಿ ಕೊರಳಿನ ನೇರದಲ್ಲಿರುವಾಗಲೂ ಸಹಿತ ಒಂದನೆಯ ನಂಬರಿನವನ ಕೃತ್ಯಗಳು ನಿರ್ದೋಷವೆಂದೂ ಅವನ ಮಾರ್ಗವೇ ಸರಿಯಾದ ಮಾರ್ಗವೆಂದೂ ನಂಬಲಾಗದ ಒಂದು ನಂಬಿಕೆಯ ಕರಿನೆಳಲಿನ ಮೇಲೆ ಮೃತ್ಯು ತನ್ನ ಅವಗುಂಠನವನ್ನು ಆಚ್ಛಾದಿಸಬೇಕಾಗಿತ್ತು. ಇದರಲ್ಲಿ ಯಾವುದು ಸರಿಯೋ ಯಾವುದು ತಪ್ಪೋ, ಯಾರದು ಸತ್ಯವೋ ಯಾರದು ಸುಳ್ಳೋ ಎಂಬುದನ್ನು ತಿಳಿಯಬೇಕಾದರೆ ಇತಿಹಾಸವೆಂಬ ವಿಡಂಬನಕಾರನ ಹತ್ತಿರ ಹುಯ್ಯಲಿಡಬೇಕಂತೆ. ಆದರೆ 'ಇತಿಹಾಸ'ದ ತೀರ್ಪು ಬರುವ ಮುನ್ನ ದೂರು ಕೊಟ್ಟವನು ಮಣ್ಣುಪಾಲಾಗಿರುತ್ತಿದ್ದನು.

ಬಾಗಿಲ ತೂತಿನಿಂದ ಯಾರೋ ತನ್ನನ್ನೆ ಪರಿಶೀಲಿಸುವಂತೆ ರುಬಷೊವಗೆ ಅನುಭವವಾಯಿತು. ಆ ಕಡೆ ನೋಡದೆಯೂ ಅವನಿಗೆ ತೂತಿನ ಹಿಂದಿರುವ ಕಣ್ಣುಗುಡ್ಡೆಯ ಪ್ರಖರ ನೋಟದ ಅರಿವಾಯಿತು. ಒಂದು ಕ್ಷಣ ಬಿಟ್ಟು ಬೀಗದೊಳಗೆ ಕೈ ತಿರುಗುವ ಶಬ್ದ ಹೊರಟಿತು. ಚಪ್ಪಲಿ ಹಾಕಿಕೊಂಡ ವೃದ್ಧ ಕಾವಲುಗಾರ ಹೊಸಲಲ್ಲಿ ನಿಂತು

‘ಇನ್ನೂ ಏಳಲಿಲ್ಲವೇ?’ ಎಂದು ಕೇಳಿದನು. ‘ಮೈ ಚೆನ್ನಾಗಿಲ್ಲ’ ಎಂದು ರುಬಷೊವ ಉತ್ತರವಿತ್ತನು.

‘ಏನಾಗಿದೆ? ಏನೇ ಆದರೂ ಡಾಕ್ಟರರನ್ನು ನೋಡುವುದು ನಾಳೆಯೇ ಆಯಿತು’

‘ಹಲ್ಲು ನೋವು’ ಎಂದ ರುಬಷೊವ,

‘ಹಲ್ಲುನೋವೆ?’ ಎಂದು ಹೇಳಿ ಕಾವಲುಗಾರ ಕದವಿಕ್ಕಿಕೊಂಡು ಹೊರನಡೆದನು.

ಸುಮ್ಮನೆ ಬಿದ್ದುಕೊಂಡಿದ್ದರಾಯಿತು ಎಂಬ ಯೋಚನೆಯಲ್ಲಿ ರುಬಷೊವಗೆ ವಿಶೇಷ ಸುಖ ಕಾಣಲಿಲ್ಲ. ಹೊದಿಕೆಯ ಕಾವು ಹಳಸಿ ಹೋದುದರಿಂದ ಅವನು ಹೊದಿಕೆಯನ್ನು ಬಿಸುಟು ಕಾಲ್ಬೆರಳಿನ ಆಟವನ್ನು ನೋಡಹತ್ತಿದನು. ಕಾಲುಚೀಲದ ತೂತುಗಳನ್ನು ಹೊಲಿಯಲು ವಾರ್ಡರನ ಕೈಯಲ್ಲಿ ಸೂಜಿನೂಲು ಕೇಳೋಣವೆಂದು ಯೋಚಿಸಿದರೂ ಎದ್ದು ಆತನನ್ನು ಯಾರು ಕೂಗುತ್ತಾರೆ, ಕೂಗಿದರೂ ಆತ ಸೂಜಿಯನ್ನಂತೂ ಕೊಡುವುದಷ್ಟರಲ್ಲೇ ಇದೆ ಎಂದುಕೊಂಡನು. ಒಮ್ಮೆಲೆ ಆತನಿಗೆ ವರ್ತಮಾನ ಪತ್ರಿಕೆ ಓದಬೇಕೆಂಬ ತೀವ್ರ ಅಭಿಲಾಷೆಯುಂಟಾಯಿತು. ಹೊಸ ಮಸಿಯ ವಾಸನೆ ಅವನ ಮೂಗಿಗೆ ಬರಹತ್ತಿತು; ಕಾಗದಗಳು ಪರಪರ ಮುರಿಯುವ ಶಬ್ದ ಕೇಳಿಸಹತ್ತಿತು. ನಿನ್ನೆ ಏನಾದರೂ ದೊಡ್ಡ ಕ್ರಾಂತಿ ನಡೆಯಿತೋ ಏನೋ, ಯಾವುದಾದರೂ ರಾಜ್ಯದಲ್ಲಿ ರಾಷ್ಟ್ರಪತಿಯನ್ನು ಕೊಲೆಮಾಡಿರಬಹುದೋ ಏನೋ, ಗುರುತ್ವಾಕರ್ಷಣ ಶಕ್ತಿಯನ್ನು ವಿರೋಧಿಸುವ ಸಂಶೋಧನೆಯಲ್ಲಿ ಯಾರಾದರೂ ಅಮೇರಿಕನ್ ವಿಜ್ಞಾನಿಯು ಜಯಶೀಲನಾದನೋ ಏನೋ! ಇಷ್ಟೆಲ್ಲ ಇದ್ದರೂ ತನ್ನನ್ನು ಸೆರೆಹಿಡಿದ ಸುದ್ದಿ ಅದರಲ್ಲಿ ಬರಲಾರದು. ದೇಶದೊಳಗಂತೂ ಅದು ಸಾಧ್ಯವಾದಷ್ಟು ಕಾಲ ಗುಪ್ತವಾಗಿಯೇ ಇರುವುದಾದರೂ ಹೊರದೇಶಗಳಲ್ಲಿ ಗುಟ್ಟು ರಟ್ಟಾಗದಿರುವುದೇ? ಹೊರಬಿದ್ದ ತಕ್ಷಣ ಹಳೆಯ ಫೈಲುಗಳಲ್ಲಿನ ತನ್ನ ಫೋಟೊವನ್ನು ಹುಡುಕಿ ತೆಗೆದು ರುಬಷೊವ ಮತ್ತು ಒಂದನೆಯ ನಂಬರಿನವನ ಕುರಿತು ಅಲ್ಲಸಲ್ಲದ ಆರೋಪಗಳೂ. ಸುದ್ದಿಗಳೂ ಪ್ರಕಟವಾಗದಿರುವುವೆ?

ಈ ಯೋಚನೆಯ ನಡುವೆ ವರ್ತಮಾನಪತ್ರದ ಅಭಿಲಾಷೆ ಇಂಗಿ, ರುಬಷೊವನಿಗೆ ಒಂದನೆಯ ನಂಬರಿನವನು ಈಗೇನು ಯೋಚಿಸುತ್ತಿರಬಹುದು ಎಂಬ ಊಹೆ ಬಲವತ್ತರವಾಯಿತು. ಡೆಸ್ಕಿನ ಮೇಲೆ ಮೊಣಕೈಯೂರಿಕೊತು ನಿಧಾನವಾಗಿ ಸ್ಟೆನೊಗ್ರಾಫರನಿಗೆ ಹೇಳಿಕೆಯನ್ನು ಕೊಡುತ್ತಿದ್ದ ಒಂದನೆಯ ನಂಬರಿನವನ ಚಿತ್ರ ಆತನ ಕಣ್ಣಿನ ಮುಂದೆ ನಿಂತಿತು. ಅತ್ತಿತ್ತ ನಡೆದುಕೊಂಡು, ಸಿಗರೇಟಿನ ಹೊಗೆಯಲ್ಲಿ ಚಕ್ರಗಳನ್ನು ರಚಿಸುತ್ತ ಅಥವಾ ರೂಲರನ್ನು ಕೈಯಲ್ಲಿ ತಿರುಗಿಸುತ್ತ ಹೇಳಿಕೆ ಬರೆಯಿಸುವ ರೂಢಿ ಹೆಚ್ಚು ಜನಕ್ಕೆ. ಆದರೆ ಒಂದನೆಯ ನಂಬರ ಅತ್ತಿತ್ತ ತಿರುಗಾಡನು, ರೂಲರಿನಲ್ಲಿ ಆಟವಾಡನು, ಹೊಗೆಯ ಚಕ್ರ ತಿರುಗಿಸನು...........ಕಳೆದ ಐದು ಮಿನಿಟು ತಾನು ಆಚೆ ಈಚೆ ನಡೆಯುತ್ತಿದ್ದೇನೆಂಬ ಅರಿವೂ, ತನಗೆ ಗೊತ್ತಿಲ್ಲದೆಯೇ ಹಾಸಿಗೆ ಬಿಟ್ಟೆದ್ದಿರುವೆನೆಂಬ ಅರಿವೂ, ರುಬಷೊವನಿಗೆ ಒಮ್ಮಿಂದೊಮ್ಮೆ ಉಂಟಾಯಿತು. ಹಾಸುಗಲ್ಲಿನ ಅಂಚನ್ನು ಬಿಟ್ಟು ನಡೆಯುವುದು ಆತನ ಮಟ್ಟಿಗೆ ರೂಢಿಯೊಂದೇ ಅಲ್ಲ ವಿಧಿಯೂ ಆಗಿತ್ತು; ಆದುದರಿಂದ ಅದರ ಅಂಚು ಬಿಟ್ಟು ವಿಧಿವಿಹಿತವಾಗಿ ನಡೆಯಲು ಆತ ಆರಂಭಿಸಿದನು. ಆದರೂ ಅವನ ಯೋಚನೆ ಒಂದನೆಯ ನಂಬರಿನವನನ್ನು ಬಿಟ್ಟು ಕದಲಲಿಲ್ಲ; ಡೆಸ್ಕಿನ ಮೇಲೆ ಕೈಯೂರಿದ ಚಿತ್ರವು ದೇಶದಲ್ಲೆಲ್ಲ ಸರ್ವವ್ಯಾಪಿಯಾದ ವರ್ಣಚಿತ್ರವಾಗಿ ಪರಿವರ್ತನೆಗೊಂಡರೂ ಕೂಡ ಯೋಚನೆ ಒಂದನೆಯ ನಂಬರಿನವನದೇ.

ಬಾಗಿಲಿಂದ ಕಿಟಕಿಯ ತನಕ, ಮಂಚ, ವಾಶ್‌ಬೇಸಿನ್ ಮತ್ತು ಒಕೆಟುಗಳ ನಡುವೆ ಆರೂವರೆ ಹೆಜ್ಜೆ ಮುಂದೆ, ಆರೂವರೆ ಹಿಂದೆ, ರುಬಷೊವ ನಡೆಯಲು ಸುರುಮಾಡಿದನು. ಬಾಗಿಲ ಹತ್ತಿರ ಬಲಕ್ಕೂ, ಕಿಟಕಿಯ ಹತ್ತಿರ ಎಡಕ್ಕೂ ತಿರುಗುತ್ತಿದ್ದನು: ಅದೊಂದು ಜೈಲಿನ ಹಳೇ ಅಭ್ಯಾಸ. ಒಂದೇ ದಿಕ್ಕಿಗೆ ತಿರುಗಿದರೆ ತಲೆಸುತ್ತಿ ಬರುವುದಷ್ಟೆ. ಒಂದನೆಯ ನಂಬರಿನವನ ಮಿದುಳಿನೊಳಗೆ ಏನು ಕುಟ್ಟುತ್ತಿರಬಹುದು? ಎಂದು ಯೋಚಿಸಿದ ಹಾಗೆ ಗುಂಡು ಸೂಜಿಗಳಿಂದ ಪಟ್ಟಿಗೆ ಅಂಟಿಸಿದ ಡ್ರಾಯಿಂಗ

ಹಾಳೆಯಲ್ಲಿ ಕಂದು ಬಣ್ಣದಲ್ಲಿ ಬರೆದ ಮಿದುಳಿನ ಅಡ್ಡಕೊಯ್ತದ ನೋಟವನ್ನು ರುಬಷೊವ ಕಲ್ಪಿಸಿಕೊಂಡನು. ಕಂದು ಬಣ್ಣದ ವಸ್ತು ಕರುಳಿನ ಜೋಮಾಲೆಯ ರೂಪವನ್ನು ತಾಳಿ ಒಂದರೊಳಗೊಂದು ಸ್ನಾಯು ಸರ್ಪಗಳಂತೆ ಗಂಟುಹಾಕಿಕೊಂಡಿತು; ಸ್ವಲ್ಪ ಹೊತ್ತಿನಲ್ಲಿ ಅಸ್ಪಷ್ಟವಾಗಿ ಮಬ್ಬಾಗಿ ಖಗೋಲಶಾಸ್ತ್ರದ ನಕಾಶೆಗಳಲ್ಲಿರುವ ನೀಹಾರಕದ ಆವರ್ತಗಳಂತೆ ತೋರಲಾರಂಭವಾಯಿತು...........ಊದಿಕೊಂಡಂತೆ ಕಾಣುವ ಕಂದು ಬಣ್ಣದ ಆ ಮುದ್ದೆಯ ಒಳಗಡೆ ಎಂಥ ಕಾರ್ಯ ಜರಗುತ್ತಿರಬಹುದೋ. ಅತಿದೂರದ ತಾರಾನಿವಹದ ನೀಹಾರಕಗಳ ವಿಷಯ ನಮಗೆಷ್ಟು ತಿಳಿದರೂ ಕಂದು ಬಣ್ಣದ ಮುದ್ದೆಯ ಆಂತರ್ಯವು ತಿಳಿಯದು. ಇತಿಹಾಸವೆಂಬುದು ವಿಜ್ಞಾನದ ಸಾಲಿಗೆ ಸೇರದೆ ಕೇವಲ ಭವಿಷ್ಯಕಥನವಾಗಿರಲು ಪ್ರಾಯಶಃ ಇದೇ ಕಾರಣವೋ ಏನೋ. ಇನ್ನು ಸ್ವಲ್ಪಕಾಲ, ಅಲ್ಲ, ಬಹಳಕಾಲ ಕಳೆದ ಮೇಲೆ ಸಂಖ್ಯೆಗಳ ಯಾದಿಯ ಮೂಲಕವಾಗಿಯೋ, ಅಂಗರಚನಾ ಶಾಸ್ತ್ರದ ನಕಾಶೆಗಳ ನೆರವಿನಿಂದಲೋ ಇತಿಹಾಸವನ್ನು ಕಲಿಸಬೇಕಾದ ದಿನವೂ ಬರಬಹುದು. ಒಂದು ವಿಶಿಷ್ಟ ರಾಷ್ಟ್ರವು ವಿಶಿಷ್ಟವಾದೊಂದು ಕಾಲದಲ್ಲಿ ಬದುಕುತ್ತಿದ್ದ ಜೀವನ ಸ್ಥಿತಿಯನ್ನು ಪ್ರತಿನಿಧಿಸುವ ಬೀಜ ಗಣಿತದ ಸೂತ್ರವನ್ನು ಉಪಾಧ್ಯಾಯನು ಕರಿ ಹಲಗೆಯ ಮೇಲೆ ಬಿಡಿಸಿ 'ನಾಗರಿಕರೇ, ಐತಿಹಾಸಿಕ ಪ್ರಕ್ರಿಯೆಯನ್ನು ನಿಯಂತ್ರಿಸಿದ ವಸ್ತುನಿಷ್ಠ ಅಂಶಗಳನ್ನು ನೀವಿಲ್ಲಿ ನೋಡಬಹುದು' ಎಂದು ಹೇಳುವ ಕಾಲ ಬರಬಹುದು. ನಂಬರ ಒಂದನೆಯಾತನ ಮಸ್ತಿಷ್ಕದೊಳಗೆ ಎರಡನೆ ಮತ್ತು ಮೂರನೆ ಹಾಲೆಯ ನಡುವಣ ಮಸಕು ಮಸಕಾದ ಸ್ಥಳವನ್ನು ರೂಲಿನಿಂದ ತೋರಿಸುತ್ತ: 'ಇಲ್ಲಿ ಈಗ ನೀವು ನೋಡಬೇಕಾದ್ದು ಈ ವಸ್ತುನಿಷ್ಠ ಅಂಶಗಳ ವ್ಯಕ್ತಿನಿಷ್ಠ ಪ್ರತಿಬಿಂಬವನ್ನು. ಇಪ್ಪತ್ತನೆಯ ಶತಮಾನದಲ್ಲಿ ಎರಡೂವರೆ ದಶಕಗಳ ತರುವಾಯ ಪೂರ್ವ ಯುರೋಪಿನಲ್ಲಿ ಸರ್ವಾಧಿಕಾರಿ ರಾಷ್ಟ್ರತತ್ತ್ವವು ಅಸಮಾನ ವಿಜಯವನ್ನು ಸಂಪಾದಿಸಲು ಕಾರಣವಾದ ಈ ಜಾಗವನ್ನು ಜಾಗ್ರತೆಯಾಗಿ ಪರಿಶೀಲಿಸಿ' ಎನ್ನಬಹುದು. ಇತಿಹಾಸವು ಈ ಸರ್ವಾಧಿಕಾರಿ ಮಜಲನ್ನು ತಲಪುವವರೆಗೆ ರಾಜನೀತಿಯು ಶ್ರೀಮಂತರ ವಿಲಾಸ

ಸಾಧನವೋ, ಕುರುಡು ನಂಬಿಕೆಯೋ ಅಥವಾ ಇಂದ್ರಜಾಲವೋ ಆಗಿದ್ದು ಅತಿ ನಿಮ್ನ ಅವಸ್ಥೆಯಲ್ಲಿರುವುದು.

ಕೋಣೆಯ ಹೊರಗಡೆ ಹಲವು ಜನ ಕ್ರಮವಾಗಿ ನಡೆಯುತ್ತ ಹೋಗುವ ಸದ್ದು ರುಬಷೊವಗೆ ಕೇಳಿಸಿತು. ಇನ್ನು ಹೊಡೆಯಲು ಆರಂಭವಾಗುತ್ತದೆ ಎಂದು ಆತ ಮೊದಲು ಯೋಚಿಸಿದನು. ಕೋಣೆಯ ನಡುವೆ ನಿಂತು, ಗಲ್ಲವೆತ್ತಿ, ತುಸು ಹೊತ್ತು ಆಲಿಸಿದನು. ಪದಘಾತಗಳು ಅವನ ಕೋಣೆಯ ಸನಿಹದ ಇನ್ನೊಂದು ಕೋಣೆಯ ಇದಿರು ಗಕ್ಕನೆ ನಿಂತುವು. ಚಿಕ್ಕದೊಂದು ಅಪ್ಪಣೆ ಕೇಳಿಸಿತು. ಬೀಗದ ಕೈಗಳು ಒಂದಕ್ಕೊಂದು ತಿಕ್ಕುವ ಸದ್ದಾಯಿತು. ಆ ಮೇಲೆ ಮರಳಿ ಮೌನ.

ಮಂಚಕ್ಕೂ ಜಕೆಟಿಗೂ ನಡುವೆ ನಿಂತ ರುಬಷೊವ ಉಸಿರು ಹಿಡಿದು ಪ್ರಥಮ ಚೀರಾಟವನ್ನು ಕೇಳುವ ಉದ್ವೇಗದಿಂದ ಆಲಿಸು ತ್ತಿದ್ದನು. ಶಾರೀರಿಕ ನೋವಿಗಿಂತಲೂ ಕಡುಭೀತಿಯಿಂದ ಉತ್ಪನ್ನ ವಾಗುವ ಪ್ರಥಮ ಚೀರಾಟದಷ್ಟು ಕಷ್ಟವಾದ್ದು ಬೇರಿಲ್ಲವೆಂದು ರುಬ ಷೊವಗೆ ತಿಳಿದಿತ್ತು. ಪ್ರಥಮ ಚೀರಾಟವು ಮುಗಿದ ಮೇಲೆ ಬರುವ ಕೂಗುಗಳನ್ನು ಹೇಗೂ ಸಹಿಸಬಹುದು, ಅಲ್ಲದೆ ಆ ಕೂಗುಗಳ ಮೇಲಿಂದಲೇ ಯಾವ ತರದ ಯಾತನೆಯನ್ನು ಕೊಡುತ್ತಿದ್ದಾರೆಂದೂ ಊಹಿಸಬಹುದು. ಕೂಗಾಟದ ಕೊನೆಯಲ್ಲಿ ಎಲ್ಲರ ಧ್ವನಿಯೂ ಒಂದೇ ಆಗಿರುತ್ತಿತ್ತು, ಸಸ್ವರವಾಗಿ ಬಿಕ್ಕಲಿನಲ್ಲಿ ಪರ್ಯವಸಾನವಾಗುತಿತ್ತು. ಅಷ್ಟು ಹೊತ್ತಿಗೆ ಕದವು ಇಕ್ಕಿಕೊಳ್ಳುವುದು. ಬೀಗದ ಕೈಗೊಂಚಲು ಮತ್ತೊಮ್ಮೆ ಸದ್ದು ಮಾಡುವುದು. ಇನ್ನೊಂದು ಕೋಣೆಯ ಬಾಗಿಲು ತೆರೆಯುವುದು. ಈ ಸಲ ಸೆರೆಯಾಳಿನ ಪ್ರಯತ್ನದ ಮೊದಲೇ, ಸಿಪಾಯಿಗಳನ್ನು ಬಾಗಿಲಲ್ಲಿ ಕಂಡೇ, ಚೀರಾಟ ತೊಡಗುವುದು.

ಪ್ರಥಮ ಚೀರಾಟವನ್ನು ಕೇಳಲು ಕಿವಿಗೊಟ್ಟು ನಿಂತಿದ್ದ ರುಬಷೊವ. ಕನ್ನಡಕದ ಗಾಜುಗಳನ್ನು ಅಂಗಿಯ ತೋಳಿನಿಂದ ಒರಸುತ್ತ ಏನೇ ಆದರೂ ಈ ಬಾರಿ ತಾನು ಚೀರುವುದಿಲ್ಲವೆಂದು ನಿರ್ಧರಿಸಿದನು. 'ಚೀರುವುದಿಲ್ಲ' ಎನ್ನುವ ಮಾತನ್ನು ಮಂತ್ರ ಹೇಳುವ

ರೀತಿಯಲ್ಲಿ ಪುನಃ ಪಠಿಸಿದನು. ಎಷ್ಟು ಕಾದರೂ ಚೀರುವ ಸದ್ದು ಮಾತ್ರ ಬರಲಿಲ್ಲ. ಪಾತ್ರೆಯ ಸಪ್ಪಳ, ಯಾರೋ ಒಬ್ಬನ ಗೊಣಗಾಟ, ಅದಾದ ಮೇಲೆ ಹೆಜ್ಜೆಗಳು ಮುಂದಿನ ಕೋಣೆಗೆ ತೆರಳುವ ಸದ್ದು—ಕೇಳಿಸಿದ್ದು ಇಷ್ಟೆ.

ರುಬಷೊವ ಬಾಗಿಲ ತೂತಿನಿಂದ ಹೊರಗೆ ನೋಡಿದಾಗ ಅವನ ಕೋಣೆಗೆ ಸಾಧಾರಣ ಎದುರಿಗಿದ್ದ ೪೦೭ನೆಯ ಕೋಣೆಯ ಮುಂದುಗಡೆ ಸಿಪಾಯಿಗಳು ನಿಂತಿದ್ದರು. ಮುದಿ ಕಾವಲುಗಾರನು ಎರಡು ಜನ ಸೇವಕರ ಸಹಾಯದಿಂದ ಚಹದ ಚರಿಗೆಯನ್ನು ನೆಲದಲ್ಲಿ ಎಳೆದುಕೊಂಡು ಬರುತ್ತಿದ್ದರು. ಮೂರನೆಯ ಸೇವಕನೊಬ್ಬ ಒಂದು ಬುಟ್ಟಿಯಲ್ಲಿ ಕರಿ ಬ್ರೆಡ್ಡಿನ ತುಂಡುಗಳನ್ನು ಹೊತ್ತು ತರುತ್ತಿದ್ದನು. ಪಿಸ್ತೂಲ ಹಿಡಿದುಕೊಂಡ ಇಬ್ಬರು ಸಮವಸ್ತ್ರಧಾರಿಗಳೂ ಅವರ ಜತೆಗಿದ್ದರು. ಇದು ಹೊಡೆತ-ಬಡೆತ ಯಾವುದೂ ಅಲ್ಲ, ಮುಂಜಾನೆಯ ಊಟ ಎಂಬುದು ರುಬಷೊವಗೆ ಆಗ ತಿಳಿಯಿತು.

೪೦೭ನೆಯ ನಂಬರದ ಕೈದಿಗೆ ಬ್ರೆಡ್ ಕೊಡುತ್ತಿದ್ದರು. ರುಬಷೊವಗೆ ಅವನನ್ನು ನೋಡಲಾಗುತ್ತಿದ್ದಿಲ್ಲ. ಅವನು ಪ್ರಾಯಶಃ ಶಿಸ್ತಿನಂತೆ ಬಾಗಿಲಿಗೆ ಒಂದು ಮಾರು ಹಿಂದೆ ನಿಂತಿರಬೇಕು. ರುಬಷೊವಗೆ ಕಾಣುತ್ತಿದ್ದುದು ಮೊಣಕೈವರೆಗಿನ ಆತನ ಹಸ್ತಗಳು ಮಾತ್ರ. ಮೊಣಕೈಯ ಕೆಳಗೆ ಅಂಗಿ ಇರಲಿಲ್ಲ. ಅವನ ಕೈ ಕಡ್ಡಿಯಂತೆ ಸೊರಗಿದುದನ್ನು ಕಾಣಬಹುದಿತ್ತು. ಸಮಾನಾಂತರವಾಗಿ ಇರಿಸಲ್ಪಟ್ಟ ಎರಡು ಕಡ್ಡಿಗಳಂತೆ ಆ ಕೈಗಳು ಕೋಣೆಯಿಂದ ಹೊರಟು ಬಾಗಿಲನ್ನು ದಾಟುವ ತವಕದಲ್ಲಿರುವಂತೆ ತೋರಿತು. ಅವನ ಅಂಗೈ ಬೋಗುಣಿಯಂತೆ ಮೇಲ್ಮುಖವಾಗಿ ಬಗ್ಗಿತ್ತು. ಬ್ರೆಡ್ ಸಿಕ್ಕಿದ ಕೂಡಲೇ ಅವನ ಕೈಗಳು ಅದನ್ನು ಅಮುಕಿಹಿಡಿದು ಕೋಣೆಯ ಅಂಧಕಾರದಲ್ಲಿ ಅದೃಶ್ಯವಾದುವು. ಬಾಗಿಲು ಇಕ್ಕಿಕೊಂಡಿತು.

ರುಬಷೊವ ಬಾಗಿಲ ತೂತನ್ನು ಬಿಟ್ಟು ತಿರುಗಾಟವನ್ನು ಪುನಃ ಪ್ರಾರಂಭಿಸಿದನು. ಕನ್ನಡಕದ ಗಾಜನ್ನು ಅಂಗಿಯ ತೋಳಿಂದ ಒರಸುವುದನ್ನು ಬಿಟ್ಟು ದೀರ್ಘ ನಿಶ್ವಾಸವನ್ನು ಬಿಟ್ಟನು. ಬಾಯಿಯಲ್ಲಿ ಒಂದು

ರಾಗವನ್ನು ಸಿಳ್ಳು ಹಾಕುತ್ತ ತನ್ನ ಪಾಲಿನ ಊಟಕ್ಕೋಸ್ಕರ ಕಾದು ಕೂತನು. ಆ ಸಪೂರವಾದ ಕೈಗಳನ್ನು, ಮುರುಟಿ ಹೋದ ಅಂಗೈಗಳನ್ನು ತಾನೆಲ್ಲಿಯೋ ಕಂಡ ಹಾಗೆ ಅವನಿಗೆ ಭಾಸವಾಯಿತು. ಅಂಥವೇ ಕೈಯ ರೇಖೆ, ಅದರಿಂದ ಬಿದ್ದ ನೆರಳು ರೇವುಪಟ್ಟಣದ ಒಂದು ಇಕ್ಕಟ್ಟಿನ ಬೀದಿಯಂತೆಯೂ, ಮರೆತು ಹೋದ ಒಂದು ಹಳೆಯ ರಾಗದಂತೆಯೂ ಏನನ್ನೋ ನೆನಪು ಹುಟ್ಟಿಸಿದುವು.

## ೨

ಸಾಲಾಗಿದ್ದ ಎಷ್ಟೋ ಬಾಗಿಲುಗಳನ್ನು ತೆರೆದು ಇಕ್ಕಿ ಮುಂತೆರಳಿದ ಸಿಪಾಯಿಗಳ ಮೆರವಣಿಗೆ ರುಬಷೊವನ ಬಾಗಿಲ ಬಳಿ ಇನ್ನೂ ಬಂದಿರಲಿಲ್ಲ: ಕಡೆಗೂ ಬರುತ್ತಾರೋ ಇಲ್ಲವೋ, ನೋಡೋಣ ಎಂದು ರುಬಷೊವ ತೂತಿಗೆ ಕಣ್ಣಿಟ್ಟು ನೋಡಿದನು. ಅವನಿಗೆ ಬಿಸಿ ಬಿಸಿ ಚಹ ಬೇಕೆಂದು ಅನಿಸಿತು. ಚರಿಗೆಯಲ್ಲಿ ಬಿಸಿ ಆವಿ ಬರುವುದನ್ನೂ, ಚಹದ ಮೇಲೆ ಲಿಂಬೆ ಹುಳಿಯ ಹೋಳು ತೇಲುತ್ತಿರುವುದನ್ನೂ ನೋಡಿ ಆತಗೆ ಬಾಯಿ ನೀರೂರಿತು. ತೂತಿನಿಂದ ಅವನು ನಾಲ್ಕು ಕೋಣೆಗಳಷ್ಟು ದೂರ ಕಾಣಲು ಸಾಧ್ಯವಿತ್ತು—೪೦೧ರಿಂದ ೪೦೭. ಮೆರವಣಿಗೆಯು ಈಗ ಬಲಗಡೆಯಿಂದ ಬರುತ್ತಿತ್ತು, ಪ್ರಾಯಶಃ ಅವರು ವಿಷಮಸಂಖ್ಯೆಯ ಕೋಣೆಗಳನ್ನು ಮುಗಿಸಿ ಆ ಮೇಲೆ ಸಮಸಂಖ್ಯೆಯವನ್ನು ಸಂದರ್ಶಿಸುವ ಪಾಠ ಇಟ್ಟುಕೊಂಡಿರಬೇಕು. ಈಗವರು ೪೦೫ರ ಮುಂದೆ ಇದ್ದರು. ರಿವಾಲ್ವರ್ ಬೆಲ್ಟಿನ ಸಮವಸ್ತ್ರಧಾರಿಗಳು ಮಾತ್ರ ರುಬಷೊವನ ದೃಷ್ಟಿಪಥದಲ್ಲಿದ್ದರು, ಉಳಿದವರು ಮರೆಯಾಗಿದ್ದರು. ಬಾಗಿಲು ಬಿತ್ತು. ಮೆರವಣಿಗೆ ೪೦೭ಕ್ಕೆ ಬಂತು. ಆವಿ ಬರುತ್ತಿರುವ ಚರಿಗೆಯನ್ನೂ, ಬರಿದಾಗುತ್ತ ಬರುತ್ತಿದ್ದ ಬುಟ್ಟಿಯನ್ನೂ ರುಬಷೊವ ಪುನಃ ಕಂಡನು. ೪೦೭ನೆಯ ಕೋಣೆಯಲ್ಲಿ ಯಾರೂ ಇರಲಿಲ್ಲವಾದ್ದರಿಂದ ಬಾಗಿಲು ತಕ್ಷಣ ಇಕ್ಕಿಕೊಂಡಿತು. ಮೆರವಣಿಗೆಯು ರುಬಷೊವನ ಕೋಣೆಯ ಇದಿರು ನಿಲ್ಲದೆಯೇ ೪೦೯ನೆಯ ನಂಬರಿಗೆ ಮುಂದೆ ಸಾಗಿತು.

ರುಬಷೊವ ತನ್ನ ಮುಷ್ಟಿಯಿಂದ ಬಾಗಿಲಿಗೆ ಗುದ್ದತೊಡಗಿದನು. ಚರಿಗೆ ಹಿಡಿದುಕೊಂಡ ಸೇವಕರು ಒಬ್ಬರನ್ನೊಬ್ಬರು ನೋಡಿಕೊಂಡು ತರುವಾಯ ಸದ್ದು ಬರುವ ಬಾಗಿಲಿನ ಕಡೆ ನೋಟ ಹರಿಸಿದರು. ೪೦೭ನೆಯ ನಂಬರಿನ ಬೀಗ ತೆರೆಯುತ್ತಿದ್ದ ಕಾವಲುಗಾರನು ಗುದ್ದುವ ಸದ್ದು ಕೇಳದವನಂತೆ ನಟಿಸಿದನು. ೪೦೭ನೆಯ ನಂಬರಿಗೂ ಬ್ರೆಡ್ ಕೊಟ್ಟ ಮೇಲೆ ಮೆರವಣಿಗೆ ಯಥಾಪ್ರಕಾರ ಮುಂದರಿಯಿತು. ರುಬಷೊವನ ಗುದ್ದಾಟವು ಜೋರಾಯಿತು. ಆತ ಒಂದು ಬೂಟನ್ನು ಕಳಚಿ ಅದರಿಂದ ಗಟ್ಟಿಯಾಗಿ ಬಾಗಿಲು ಗುದ್ದಲುಆರಂಭಿಸಿದನು.

ಸಮವಸ್ತ್ರಧಾರಿಗಳಲ್ಲಿ ಹಿರಿಯವನು ತಿರುಗಿ, ಶೂನ್ಯ ಮುಖ ಮುದ್ರೆಯಿಂದ ರುಬಷೊವನ ಬಾಗಿಲಿನ ಕಡೆಗೆ ನೋಡಿ ಬೆನ್ನು ತೋರಿಸಿದನು. ೪೦೭ರ ಬಾಗಿಲೂ ಇಕ್ಕಿಕೊಂಡಿತು. ಚಹದ ಚರಿಗೆ ಹಿಡಿದ ಸೇವಕರು ಕಿಂಕರ್ತವ್ಯವಿಮೂಢರಾಗಿ ಒಂದರೆಕ್ಷಣ ನಿಂತರು. ರುಬಷೊವನ ಬಾಗಿಲಿನ ಕಡೆ ತಿರುಗಿ ನೋಡಿದ ಸಮವಸ್ತ್ರಧಾರಿ ಕಾವಲುಗಾರನಿಗೆ ಏನೋ ಹೇಳಿದನು. ಕಾವಲುಗಾರನು ಮುದಿಯ ರುಬಷೊವನ ಬಾಗಿಲಿಗೆ ಬಂದನು. ಚರಿಗೆಯ ಸೇವಕರೂ ಅವನ ಹಿಂದೆಯೇ ಬಂದರು. ಬ್ರೆಡ್ ಬುಟ್ಟಿಯವನು ೪೦೭ರವನಿಗೆ ಬಾಗಿಲ ತೂತಿನಿಂದ ಏನೋ ಪಿಸುಗುಟ್ಟಿದನು.

ರುಬಷೊವ ಬಾಗಿಲಿಂದ ಒಂದು ಹೆಜ್ಜೆ ಹಿಂಜರಿದು ಅದು ತೆರೆಯುವುದನ್ನು ನಿರೀಕ್ಷಿಸುತ್ತ ನಿಂತನು. ಅವನ ಮನಸ್ಸಿನ ಚಂಡಿತನ ಒಮ್ಮೆಲೆ ಮಾಯವಾಯಿತು; ಚಹ ಕೊಡಲಿ ಬಿಡಲಿ ಒಂದೇ ಎಂಬ ಭಾವ ಮೊಳೆಯಿತು. ಹಿಂದೆ ಬರುವಾಗ ಚರಿಗೆಯಲ್ಲಿ ಆವಿ ತೋರುತ್ತಿರಲಿಲ್ಲ, ಲಿಂಬೆಹುಳಿಯ ತುಂಡಿನಲ್ಲಿ ಬರೀ ತೊಗಟೆ ಮಾತ್ರ ಇದ್ದಂತೆ ಕಾಣುತ್ತಿತ್ತು.

ಬಾಗಿಲಿನ ಬೀಗದ ಕೈ ಸುತ್ತಿತು, ತೂತಿನಲ್ಲೊಂದು ಕಣ್ಣು ಬಂದೆರಗಿ ಕೂಡಲೆ ಹಿಂದೆ ಹೋಯಿತು. ಬಾಗಿಲು ತೆರೆದಾಗ ರುಬಷೊವ ಹಾಸಿಗೆಯ ಮೇಲೆ ಕೂತು ಬೂಟು ಸೇರಿಸುತ್ತಿದ್ದನು. ಸಮವಸ್ತ್ರಧಾರಿ ಹಿರಿಯವನ ಪ್ರವೇಶಕ್ಕನುಕೂಲವಾಗುವಂತೆ ಕಾವಲುಗಾರನು

ಬಾಗಿಲನ್ನು ತೆರೆದು ಹಿಡಿದನು. ಹಿರಿಯವನ ತಲೆ ಬಕ್ಕ ಬೋಳಾಗಿತ್ತು. ಅವನ ಮುಖದಲ್ಲಿ ಭಾವನೆಯ ಸುಳಿವೇ ಸಿಗಲೊಲ್ಲದು. ಅವನ ಸಮವಸ್ತ್ರವೂ ಬೂಟುಗಳೂ ಚರ್‌ಚುರ್ ಎಂದು ಶಬ್ದ ಮಾಡುತ್ತಿದ್ದುವು. ಅವನ ರಿವಾಲ್ವರ್ ಬೆಲ್ಟಿನ ಚರ್ಮದ ವಾಸನೆ ರುಬಷೊವನ ಮೂಗಿಗೆ ಹತ್ತುವಂತಿತ್ತು. ಬಕೆಟಿಗೆ ಸಮೀಪದಲ್ಲಿ ನಿಂತು ಹಿರಿಯವನು ಕೋಣೆಯ ಸುತ್ತಲೂ ಪರೀಕ್ಷಾರ್ಥವಾಗಿ ಕಣ್ಣನ್ನು ಹಾಯಿಸುತಿದ್ದಾಗ ಅವನ ಎತ್ತರ, ತೋರದ ದೆಸೆಯಿಂದ ಕೋಣೆಯೇ ಚಿಕ್ಕದಾದಂತೆ ತೋರುತಿತ್ತು.

'ನಿನ್ನ ಕೋಣೆಯನ್ನು ನೀನಿನ್ನೂ ಗುಡಿಸಿಯೇ ಇಲ್ಲ. ನಿನಗೆ ಇಲ್ಲಿನ ಶಿಸ್ತು ಗೊತ್ತಿಲ್ಲವೋ, ಹೇಗೆ?' ಎಂದು ರುಬಷೊವನನ್ನು ಕೇಳಿದನು.

ಅಧಿಕಾರಿಯನ್ನು ಕನ್ನಡಕದ ಮೂಲಕ ಪರೀಕ್ಷಿಸುತ್ತ ರುಬಷೊವ 'ನನಗೆ ಊಟವೇಕೆ ಬರಲಿಲ್ಲ?' ಎಂದು ಕೇಳಿದನು.

'ನನ್ನ ಹತ್ತಿರ ವಾದಮಾಡುವ ಇಚ್ಛೆ ಇರುವುದಾದರೆ ನಿಂತು ವಾದಮಾಡು' ಎಂದನು ಆ ಅಧಿಕಾರಿ.

'ನಿಮ್ಮ ಹತ್ತಿರ ವಾದ ಮಾಡುವುದೂ, ಮಾತನಾಡುವುದೂ ನನಗೆ ಬೇಡವಾಗಿದೆ' ಎಂದು ರುಬಷೊವ ಹೇಳಿದನು.

'ಹಾಗಾದರೆ ಇನ್ನು ಬಾಗಿಲು ಗುದ್ದುವ ಕೆಲಸ ಮಾಡಬೇಡ. ಮಾಡಿದರೆ ನಿನ್ನ ಮೇಲೆ ಶಿಸ್ತಿನ ಕ್ರಮ ಕೈಗೊಳ್ಳಬೇಕಾದೀತು' ಎಂದು ರುಬಷೊವಗೆ ಹೇಳಿ ಅಧಿಕಾರಿಯು ಕೋಣೆಯ ಸುತ್ತ ಕಣ್ಣು ಹಾಯಿಸಿ 'ಇಲ್ಲಿ ಕೈದಿಗೆ ಶುದ್ಧದ ಅರಿವೆಯೇ ಕಾಣುವುದಿಲ್ಲ'ವೆಂದು ಎಚ್ಚರಿಸಿದನು. ಬ್ರೆಡ್ ಹಿಡಿದ ಸೇವಕನಿಗೆ ಕಾವಲುಗಾರನು ಏನೋ ಪಿಸುಗುಟ್ಟಿದನು, ಕೂಡಲೆ ಆತ ಅದನ್ನು ತರಲು ಓಡಿಹೋದನು. ಉಳಿದ ಇಬ್ಬರು ಸೇವಕರು ಕುತೂಹಲದಿಂದ ಕೋಣೆಯ ಬಾಗಿಲಲ್ಲಿ ನಿಂತಿದ್ದರು. ಎರಡನೆಯ ಅಧಿಕಾರಿ ಕೋಣೆಗೆ ಬೆನ್ನು ಹಾಕಿ ನಿಂತಿದ್ದನು.

ಬೂಟಿನ ನೂಲನ್ನು ಕಟ್ಟುತ್ತ ರುಬಷೊವ 'ಕೈದಿಗೆ ಊಟದ ಬಟ್ಟಲನ್ನೂ ಕೊಟ್ಟಿಲ್ಲ' ಎಂದು ಹೇಳಿ, 'ನಾನು ಅನ್ನಸತ್ಯಾಗ್ರಹದ

ತೊಂದರೆಗೀಡಾಗಬಾರದೆಂದು ನಿಮ್ಮ ಪ್ರಯತ್ನ ಇರುವಂತೆ ತೋರು ತ್ತದೆ. ನಿಮ್ಮ ಹೊಸ ತಂತ್ರಗಳನ್ನು ನಾನು ಮೆಚ್ಚಿದೆ.' ಎಂದು ಮಾತು ಮುಂದುವರಿಸಿದನು.

ಶೂನ್ಯ ಮುಖ ಮುದ್ರೆಯಿಂದ ಅಧಿಕಾರಿ ರುಬಷೊವನನ್ನು ನೋಡಿ 'ನಿನ್ನ ಎಣಿಕೆ ಸರಿಯಲ್ಲ' ಎಂದನು. ಜೋಳಾಗಿ ಕ್ಷೌರ ಮಾಡಿದ ಅವನ ತಲೆಯ ಮೇಲೆ ಗಾಯದ ಕಲೆ ಇತ್ತು. ಎದೆಯ ಮೇಲೆ ಕ್ರಾಂತಿ ಪಥಕದ ಸಂಕೇತವು ವಿಜೃಂಭಿಸುತ್ತಿತ್ತು. ಓಹೋ ಈತನೂ 'ಯಾದವೀ ಯುದ್ಧ'ದ ಸೈನಿಕನೋ ಎಂದುಕೊಂಡ ರುಬಷೊವ. ಆದರೆ ಮರುಕ್ಷಣ ಅದು ನಡೆದು ಯುಗವೇ ಕಳೆದು ಹೋಯಿತು, ಈಗ ಅದನ್ನು ಯಾರು ಕೇಳುತ್ತಾರೆ.....ಎಂದು ನಿರಾಶನಾದನು.

'ನಿನ್ನ ಎಣಿಕೆ ಏಕೆ ಸರಿಯಲ್ಲ ಗೊತ್ತೆ? ಪೈ ಚೆನ್ನಾಗಿಲ್ಲವೆಂದು ನೀನು ವರದಿಮಾಡಿದ್ದರಿಂದ ನಿನಗೆ ಊಟ ಕೊಡದೆ ಇರಬೇಕಾಯಿತು.

'ಹೌದು, ಹಲ್ಲುನೋವಂತೆ' ಎಂದು ಬಾಗಿಲಿಗೆ ಒರಗಿನಿಂತ ಕಾವ ಲುಗಾರನು ಹೇಳಿದನು. ಅವನು ಇನ್ನೂ ಚಪ್ಪಲಿ ತೊಟ್ಟೇ ಇದ್ದನು. ಸಮವಸ್ತ್ರವು ಮುದ್ದೆ ಮುದ್ದೆಯಾಗಿ ಅಲ್ಲಿ ಇಲ್ಲಿ ಅದರಲ್ಲಿ ಜರ್ಬಿಯ ಕಲೆಗಳಿದ್ದುವು.

'ನಿಮ್ಮ ಇಷ್ಟ' ಎಂದ ರುಬಷೊವನಿಗೆ ಪೈ ಚೆನ್ನಾಗಿಲ್ಲದವರಿಗೆ ಕಡ್ಡಾಯವಾಗಿ ಉಪವಾಸದ ಚಿಕಿತ್ಸೆ ನೀಡುವುದು ಆಧಿಪತ್ಯದ ಇತ್ತೀಚೆಗಿನ ಯಶಸ್ವಿ ಪ್ರಯೋಗವೋ ಎಂದು ಕೇಳುವ ಇಚ್ಛೆ ನಾಲಗೆಯ ತುದಿಯ ವರೆಗೆ ಬಂದು ಒಳಸೇರಿತು. ಒಟ್ಟು ದೃಶ್ಯವೇ ರುಬಷೊವಗೆ ತಲೆಚಿಟ್ಟು ಹಿಡಿಸುವಂತಿತ್ತು.

ಜ್ರೆಡ್ ಸೇವಕನು ಹರಕು ಚೀಡಿಯೊಂದನ್ನು ಹಿಡಿದು ಧಾವಿಸಿ ಕೊಂಡು ಬಂದನು. ಅದನ್ನು ಕಾವಲುಗಾರನು ಅವನ ಕೈಯಿಂದ ತೆಗೆದುಕೊಂಡು ಬಕೆಟಿನ ಪಕ್ಕಕ್ಕೆ ಎಸೆದನು.

'ಇನ್ನೇನಾದರೂ ಕೇಳಬೇಕಾದ್ದುಂಟೇ ನಿನಗೆ?' ಎಂದು ಅಧಿಕಾ ರಿಯು ನಿರ್ವ್ಯಾಜವಾಗಿ ಕೇಳಿದನು.

ರುಬಷೊವ ಅವಕ್ಕೆ 'ಈ ಪ್ರಹಸನವನ್ನು ಇಲ್ಲಿಗೇ ನಿಲ್ಲಿಸಿ ನನ್ನನ್ನು ನನ್ನ ಪಾಡಿಗೆ ಬಿಟ್ಟುಬಿಡಿ' ಎಂದನು. ಅಧಿಕಾರಿಯೂ, ವಾರ್ಡರನೂ ಹೊರಡಲನುವಾದರು. ರುಬಷೊವ ಕಿಟಕಿಯ ಬಳಿ ಹೋಗಿ ಅವರಿಗೆ ಬೆನ್ನು ಹಾಕಿ ನಿಂತನು. ಬಾಗಿಲು ಮುಚ್ಚಿದ ಕೂಡಲೇ ತನಗೆ ಬೇಕಾದ ಮುಖ್ಯ ವಿಷಯವನ್ನೇ ಅಧಿಕಾರಿಗೆ ತಿಳಿಸಲಿಲ್ಲವೆಂದು ಬಾಗಿಲಿಗೆ ಧಾವಿಸಿ ತೂತಿನ ಮುಖಾಂತರ 'ಕಾಗದ ಮತ್ತು ಪೆನ್ಸಿಲ್ ಬೇಕು' ಎಂದು ಬೊಬ್ಬಿರಿದನು. ಕನ್ನಡಕವನ್ನು ತೆಗೆದು ಕಣ್ಣನ್ನು ಆ ತೂತಿಗಂಟಿಸಿ ಹೋದವರಲ್ಲಿ ಯಾರಾದರೂ ಹಿಂತಿರುಗಿದರೇ ಎಂದು ಪರೀಕ್ಷಿಸಿದನು. ಆತ ಬಲು ಗಟ್ಟಿಯಾಗಿ ಕೂಗಿದರೂ ಮೆರವಣಿಗೆಯವರಿಗೆ ಅದು ಕೇಳಿಸಲಿಲ್ಲವೆಂಬಂತೆ ಅವರು ಮುಂದೆ ಸಾಗುತ್ತಿದ್ದರು. ಬೋಳು ತಲೆಯ ಅಧಿಕಾರಿಯ ಬೆನ್ನೂ, ರಿವಾಲ್ವರಿನ ಬೆಲ್ಟೂ ರುಬಷೊವಗೆ ಮೆರವಣಿಗೆಯ ಕೊನೆ ನೋಟದಂತಾಯಿತು.

## ೮

ಆರೂವರೆ ಹೆಜ್ಜೆ ಕಿಟಕಿಯ ಕಡೆಗೆ ಆರೂವರೆ ಹೆಜ್ಜೆ ಹಿಂದಕ್ಕೆ ರುಬಷೊವ ಕೋಣೆಯೊಳಗೆ ಸಂಚರಿಸ ತೊಡಗಿದನು. ಇದೀಗ ಮರೆಯಾದ ದೃಶ್ಯವನ್ನು, ತನ್ನ ಮನಸ್ಸನ್ನು ಉದ್ರೇಕಿಸಿದ ಆ ಪ್ರಸಂಗವನ್ನು ವಿವರ ವಿವರವಾಗಿ ಜ್ಞಾಪಕಕ್ಕೆ ತರುವ ಪ್ರಯತ್ನದಲ್ಲಿ ಕನ್ನಡಕದ ಗಾಜನ್ನು ಉಜ್ಜ ತೊಡಗಿದನು. ಗಾಯದ ಕಲೆಯುಳ್ಳ ಆ ಅಧಿಕಾರಿಯ ಮೇಲೆ ಸ್ವಲ್ಪ ಹೊತ್ತು ತನಗೆ ಉಂಟಾದ ದ್ವೇಷದ ಭಾವನೆಯನ್ನು ಸ್ಥಿರಗೊಳಿಸಿಕೊಂಡರೆ ಮುಂದೆ ಬರಲಿರುವ ಹೋರಾಟಕ್ಕೆ ಅನುಕೂಲವಾಗಬಹುದೆಂದು ಕಳೆದು ಹೋದ ದೃಶ್ಯವನ್ನು ಮೆಲುಕು ಹಾಕಲು ಯತ್ನಿಸಿದನು. ಆದರೆ ಅದರಲ್ಲಿ ಆತ ಸಫಲನಾಗಲಿಲ್ಲ. ತನ್ನ ವಿರೋಧಿಯ ಸ್ಥಾನದಲ್ಲಿ ನಿಂತು, ಇನ್ನೊಬ್ಬರ ಕಣ್ಣಿಂದ ದೃಶ್ಯವನ್ನು ನೋಡುವ ಮಾರಕ ಅಭ್ಯಾಸಕ್ಕೆ ಅವನು ಬಲಿಯಾದನು. ಅಲ್ಲಿ, ಆ ಸಂಜೆಯ ವೇಳೆ, ಗಡ್ಡ ಬಿಟ್ಟುಕೊಂಡ ಆ ಸಣ್ಣ

ಮನುಷ್ಯ, ಅಹಂಕಾರದ ಮೂಟೆಯಂತೆ, ಕಂಡವರಿಗೆ ಕೋಪ ಉಕ್ಕೇರುವ ಭಂಗಿಯಲ್ಲಿ, ಬೆವರುನಾರುವ ಕಾಲು ಚೀಲಕ್ಕೆ ಬೂಟನ್ನು ಸೇರಿಸಿ ಕೊಳ್ಳುತ್ತ, ಕೂತಿದ್ದಾನೆ. ರುಬಷೊವನ ಯೋಗ್ಯತೆ, ಕೀರ್ತಿ ದೊಡ್ಡದು: ಅವನ ಇತಿಹಾಸ ಮಹತ್ತಾದ್ದು. ಸರಿಯೇ, ಆದರೇನುಮಾಡೋಣ ಕಾಂಗ್ರೆಸಿನ ವೇದಿಕೆಗಳ ಮೇಲೆ ಆತ ವಿರಾಜಮಾನನಾಗಿದ್ದರೆ ಒಂದು ರೀತಿ, ಸೆರೆಮನೆಯ ಒಣಹುಲ್ಲಿನ ಹಾಸಿಗೆಯ ಮೇಲೆ ಉಪಸ್ಥಿತನಾಗಿದ್ದರೆ ಬೇರೊಂದೆ ರೀತಿ. ಶೂನ್ಯ ಮುಖಮುದ್ರೆಯ ಅಧಿಕಾರಿಯ ಕಣ್ಣಿನಿಂದ ತನ್ನನ್ನು ತಾನೇ ನೋಡಿಕೊಳ್ಳುತ್ತ ರುಬಷೊವ ಯೋಚಿಸಿದನು: ಪ್ರಖ್ಯಾತ ರುಬಷೊವ ಎಂದರೆ ಈತನೇ ಏನು? ಸಾಲೆ ಹುಡುಗರಂತೆ ಊಟಕ್ಕೋಸ್ಕರ ನಾಚಿಕೆ ಇಲ್ಲದೆ ಅಳುವವನು? ಕೋಣೆಯನ್ನು ತೊಳೆ ಯದೆ ಬಿಟ್ಟಿರುವವನು? ಕಾಲುಚೀಲವೆಲ್ಲ ತೂತಾಗಿರುವವನು? ಜಗಳ ಕೆರೆಯುವ ಬುದ್ಧಿಜೀವಿ. ಶಾಸನಕ್ಕೂ ಆಧಿಪತ್ಯಕ್ಕೂ ವಿರುದ್ಧವಾಗಿ ವರ್ತಿಸಿದವನು. ಹೀಗೆ ಏತಕ್ಕೆ ಮಾಡಿದನು—ದುಡ್ಡಿಗೋಸ್ಕರವೋ ತತ್ತ್ವ ಕ್ಕೋಸ್ಕರವೋ ಎಂಬುದು ಗೌಣ ವಿಚಾರ. ನಾವು ಕ್ರಾಂತಿಯನ್ನು ಸೃಷ್ಟಿಸಿದ್ದು ಇಂಥ ಅರೆಹುಚ್ಚರಿಗಾಗಿ ಅಲ್ಲ. ಅವನೂ ಕ್ರಾಂತಿಸೃಷ್ಟಿಗೆ ಸಹಾಯ ಮಾಡಿದುದು ನಿಜ; ಆಗ ಅವನೊಬ್ಬ ಮನುಷ್ಯನಾಗಿದ್ದ: ಈಗ ಮುದುಕನಾಗಿದ್ದಾನೆ, ತನಗೆ ಕಂಡದ್ದೇ ಸರಿ ಎನ್ನುವ ಹಠವಾದಿಯಾಗಿ ದ್ದಾನೆ, ಅಂದರೆ ನಿರ್ನಾಮಕರಣಕ್ಕೆ ಅರ್ಹನಾಗಿದ್ದಾನೆ. ಕ್ರಾಂತಿಯ ಕಾಲದಲ್ಲೂ ಈತ ಹೀಗೆಯೇ ಇದ್ದಿರಬೇಕು, ಇರಬೇಕು. ಆ ಮೇಲಿ ಒಡೆದ ಸಾಬೂನಿನ ಗುಳ್ಳೆಗಳನ್ನೆಷ್ಟೋ ನಾವು ನೋಡಿದ್ದೇವೆ. ಅವನಲ್ಲಿ ಆತ್ಮಗೌರವವು ಲೇಶಮಾತ್ರವಾದರೂ ಉಳಿದಿದ್ದರೆ ಅವನು ಕೋಣೆ ಯನ್ನು ತೊಳೆದು ಸ್ವಚ್ಛವಾಗಿಡಬೇಕಾಗಿತ್ತು.

ನೆಲದ ಮೇಲೆ ಹಾಸಿದ ಕಲ್ಲುಗಳನ್ನು ಚಿಂದಿಯಿಂದ ಉಜ್ಜಲೇ ಎಂದು ಒಂದೆರಡು ಕ್ಷಣ ರುಬಷೊವ ಯೋಚಿಸುತ್ತಿರುವಂತೆ ಕಂಡಿತು. ಕೋಣೆಯ ನಡುವೆ ಸಂದಿಗ್ಧ ಮನಸ್ಸಿನಿಂದ ಆತ ನಿಂತಿದ್ದನು. ತರು ವಾಯ ಕನ್ನಡಕವನ್ನು ಹಾಕಿಕೊಂಡು ಕಿಟಿಕಿಯ ಬಳಿ ಹೋಗಿ ನಿಂತನು.

ಅಂಗಳದಲ್ಲಿ ಈಗ ಸೂರ್ಯ ಪ್ರಕಾಶವು ತುಂಬಿತ್ತು, ಕಂದು ಹಳದಿ ಬಣ್ಣದ ಆ ಬೆಳಕು ಬರಲಿರುವ ಹಿಮವರ್ಷದ ಮುನ್ಸೂಚನೆಯನ್ನು ನೀಡುತ್ತಿತ್ತು. ಸಾಧಾರಣ ಎಂಟು ಗಂಟೆಯಾಗಿರಬಹುದು-ಅವನು ಆ ಕೋಣೆಗೆ ಕಾಲಿಟ್ಟು ಮೂರು ತಾಸುಗಳಾದುವಷ್ಟೆ. ಪ್ರತಿ ಕಿಟಕಿಗೂ ಮುಂದೆ ಕಬ್ಬಿಣದ ಸರಳುಗಳಿದ್ದುದರಿಂದಲೂ, ಕೋಣೆಯ ಒಳಗಡೆ ಕತ್ತಲು ಕವಿದಿದ್ದುದರಿಂದಲೂ ಕಿಟಕಿಯ ಬಳಿ ಯಾರಾದರೂ ನಿಂತು ಹೊರಗಿನ ಅಂಗಳವನ್ನು ತನ್ನ ಹಾಗೆ ನೋಡುತ್ತಿರಬಹುದು ಎಂಬ ಸೂಚನೆ ಹೊರಗಿಂದ ಯಾರಿಗೂ ಸಿಗುವಂತಿರಲಿಲ್ಲ. ಅಂಗಳದಲ್ಲಿ ಬಿದ್ದ ಹಿಮವರ್ಷವು ಗಡ್ಡೆಯಾಗಿತ್ತು; ಯಾರಾದರೂ ನಡೆದರೆ ಗಡ್ಡೆ ಒಡೆದು ಪುಡಿ ಪುಡಿಯಾದೀತು. ಅಂಗಳದ ಗೋಡೆಯ ಸುತ್ತಲೂ ಎಳೆದಿದ್ದ ಕಾಲ್ದಾರಿಯ ಇಕ್ಕಡೆಗಳಲ್ಲಿ ಹಿಮದ ಗೋಡೆಯನ್ನು ಕಟ್ಟಿದಂತೆ ತೋರುತಿತ್ತು. ದೂರದ ಗೋಡೆಯ ದಿಬ್ಬದ ಮೇಲೆ ಕಾವಲಿನ ಸಿಪಾಯಿ ಗಸ್ತು ಹೊಡೆಯುವುದು ಕಾಣುತಿತ್ತು. ಕಿಟಕಿಯಿಂದ ತಿರುಗುವಾಗ ಒಂದು ಸಲ ರುಬಷೊವ ಕೆಳಗಿನ ಹಿಮದ ಮೇಲೆ ಉಗುಳಿ ಅದು ಎಲ್ಲಿ ಬಿತ್ತು, ಎಷ್ಟು ಗಟ್ಟಿಯಾಯಿತು ಎಂದು ಪರೀಕ್ಷಿಸಿದನು.

ಅದೇ ಹಳೆಯ ರೋಗ ಎಂದು ಆತ ಯೋಚಿಸಿದನು. ಕ್ರಾಂತಿಕಾರಿ ವ್ಯಕ್ತಿ ಇತರರ ತಲೆಯಿಂದ ಯೋಚಿಸಬಾರದು ಎಂದುಕೊಂಡನು.

ಹಾಗೆ ಯೋಚಿಸಿದರೇನಂತೆ? ಯೋಚಿಸಲೇ ಬೇಕಲ್ಲವೆ?

ಎಲ್ಲರೂ ಒಂದೇ ಎಂದು ಎಲ್ಲರೊಡನೆಯೂ ತಾದಾತ್ಮ್ಯವನ್ನು ಪಡೆಯುವಾತನು ಪ್ರಪಂಚವನ್ನು ಪಲ್ಲಟಿಸಬಲ್ಲನೇ?

ಹಾಗಾದರೆ ಪ್ರಪಂಚವನ್ನು ಮಾರ್ಪಡಿಸುವ ದಾರಿ ಯಾವುದು?

ಎಲ್ಲವನ್ನೂ ತಿಳಿವಳಿಕೆಯಿಂದ ಗ್ರಹಿಸಿ, ಎಲ್ಲವನ್ನೂ ಕ್ಷಮಿಸುವ ಹೃದಯವುಳ್ಳವನಿಗೆ ಆಚರಣೆಗೆ, ಕಾರ್ಯತತ್ಪರತೆಗೆ ಬೇಕಾದ ಉದ್ದೇಶವು, ಧ್ಯೇಯವು ಎಲ್ಲಿಂದ ದೊರೆತೀತು?

ಅಥವಾ ಅವನಿಗೆ ದೊರೆಯದೆ ಹೇಗೆ ಇದ್ದೀತು?

ತನ್ನನ್ನವರು ಗುಂಡಿಟ್ಟು ಕೊಲ್ಲುವುದೇ ಸರಿ ಎಂದು ರುಬಷೊವ ಯೋಚಿಸಿದನು. ತನ್ನ ಉದ್ದೇಶಗಳನ್ನು ಅವರು ಪ್ರಾಯಶಃ ಗಮನಕ್ಕೆ

ತಾರರು. ಕಿಟಕಿಯ ಗಾಜಿಗೆ ಹಣೆಯನ್ನಿಟ್ಟು ರುಬಷೊವ ಹೊರಗೆ ನೋಡಿದನು. ಹೊರ ಅಂಗಳವು ಯಥಾಪ್ರಕಾರ ಬಿಳಿದಾಗಿ, ಮೌನವಾಗಿ, ಸ್ತಬ್ಧವಾಗಿತ್ತು.

ಆದುದರಿಂದ ನಿರ್ಯೋಚನೆಯಿಂದ ಗಾಜಿನ ತಂಪನ್ನು ಹಣೆಯಿಂದ ಸವಿಯುತ್ತ ರುಬಷೊವ ಸುಮ್ಮಗೆ ನಿಂತನು. ಕ್ರಮಶಃ ತನ್ನ ಕೋಣೆಯೊಳಗೆ ಸಣ್ಣದಾಗಿ, ಮೇಲಿಂದ ಮೇಲೆ ಟಿಕ್ ಟಿಕ್ ಎನ್ನುವ ಸದ್ದೊಂದು ಬರುತ್ತಿರುವಂತೆ ಅವನಿಗೆ ಭಾಸವಾಯಿತು. ಕಿಟಕಿಯಿಂದ ತಿರುಗಿ ರುಬಷೊವ ಸದ್ದನ್ನು ಆಲಿಸ ಹತ್ತಿದನು. ಸದ್ದು ಮಂದವಾಗಿದ್ದುದರಿಂದ ಮೊದ ಮೊದಲು ಯಾವ ಗೋಡೆಯಿಂದ ಅದು ಬರುತ್ತಿತ್ತೆಂದು ಹೇಳುವುದು ಸಾಧ್ಯವಿರಲಿಲ್ಲ. ಆದುದರಿಂದ ಅವನೇ ಸ್ವತಃ ತಟ್ಟಲಾರಂಭಿಸಿದನು: ಪ್ರಥಮತಃ ಬಕೆಟಿನ ಪಕ್ಕದ ಗೋಡೆಗೆ. ೪೦೬ನೆಯ ನಂಬರದ ಕೋಣೆಯ ದಿಕ್ಕಿಗೆ ತಟ್ಟಿದನು. ಅಲ್ಲಿಂದ ಪ್ರತ್ಯುತ್ತರ ಬರಲಿಲ್ಲ. ಮಂಚದ ಪಕ್ಕದ ಗೋಡೆ ಅವನನ್ನು ೪೦೨ನೆಯ ನಂಬರಿನ ಕೈದಿಯಿಂದ ಬೇರ್ಪಡಿಸುವುದಾಗಿತ್ತು. ಅಲ್ಲಿ ತಟ್ಟಿದಾಗ ರುಬಷೊವಗೆ ಜವಾಬು ದೊರೆಯಿತು. ಅವನು ಮಂಚದ ಮೇಲೆ ಸುಖಾಸೀನನಾಗಿ ಬಾಗಿಲ ತೂತಿನ ಕಡೆ ಒಂದು ಕಣ್ಣಿರುವ ರೀತಿಯಲ್ಲಿ ಕೂತುಕೊಂಡನು. ಪ್ರಥಮ ಪರಿಚಯ ತಾನೆ. ಅವನ ಎದೆ ವೇಗವಾಗಿ ಹೊಡೆದುಕೊಳ್ಳುತ್ತಿತ್ತು.

ನಂಬರ ೪೦೨ ಕ್ರಮಬದ್ಧವಾಗಿ ತಟ್ಟುತ್ತಿದ್ದನು. ಬೇಗ ಬೇಗನೇ ಮೂರು ಸಾರಿ, ತಟ್ಟಿ, ಮತ್ತೆ ಮೂರು ಸಾರಿ, ಇನ್ನಷ್ಟು ತಡೆದು ಪುನಃ ಮೂರು ಸಾರಿ— ಹೀಗೆ ತಟ್ಟುತಿದ್ದನು. ರುಬಷೊವ ಅದನ್ನೇ ಪ್ರತಿಮಾಡಿ ಹಿಂದೆ ಕಳಿಸಿದನು—ತನಗೆ ಕೇಳಿಸಿತೆಂಬುದನ್ನು ಆಚೆಯವನಿಗೆ ತಿಳಿಸುವುದಕ್ಕಾಗಿ. ತಟ್ಟುವ ಸಂಕೇತವು ಎಲ್ಲಿ ಆಚೆಯವನಿಗೆ ತಿಳಿಯದೆ ಹೋಗಿ ತನಗೆ ಕಲಿಸುವ ಪ್ರಸಂಗ ಬರುವುದೋ ಎಂದು ಆತ ಬಹಳ ಅಂಜಿದನು. ಗೋಡೆ ದಪ್ಪವಾಗಿದ್ದುದರಿಂದ ಗೋಡೆಗೆ ಕಿವಿಯನ್ನು ಸರಿಯಾಗಿ ಹಚ್ಚದೆ ಉಪಾಯವಿರಲಿಲ್ಲ. ಈಚೆ ಬಾಗಿಲ ತೂತಿನ ಕಡೆಗೂ ಗಮನ ಕೊಡಲೇಬೇಕಾಗಿತ್ತು. ೪೦೨ ಪೆನ್ಸಿಲಿನಂಥ ಗಟ್ಟಿಯಾದ ಯಾವುದೋ ವಸ್ತುವಿನಿಂದ ಸರಿಯಾಗಿ

ಪಾಠ ಕಲಿಯುವವನಂತೆ ಗೋಡೆ ತಟ್ಟುತ್ತಿದ್ದನು. ಇಂಗ್ಲಿಷ್ ಅಕ್ಷರ ಮಾಲೆಯ ೨೫ ಅಕ್ಷರಗಳನ್ನು ಐದೈದರ ಸಾಲಿನಂತೆ ಒಟ್ಟು ೨೫ ಅಂಕಣವುಳ್ಳ ಒಂದು ಚಚ್ಚೌಕದಲ್ಲಿ ಬರೆದಿಟ್ಟು ಅದರ ಆಧಾರದ ಮೇಲೆ ಸಾಂಕೇತಿಕ ಶಬ್ದಭಾಷೆಯ ತಂತ್ರವನ್ನು ಉಪಯೋಗಿಸಬೇಕಾಗಿತ್ತು. ಐದು ಸಲ ತಟ್ಟಿದರೆ ಐದನೇ ಸಾಲು ಎಂದಾಯಿತು; ಆ ಮೇಲೆ ಎರಡು ಸಲ ತಟ್ಟಿದರೆ ಐದನೇ ಸಾಲಿನ ಎರಡನೆಯ ಅಕ್ಷರ W ಎಂದಾಯಿತು, ಎರಡು ಸಲ ತಟ್ಟಿದ್ದರಿಂದ ಎರಡನೆಯ ಸಾಲು, ಆ ಮೇಲಿನ ಮೂರು ಬಡಿತಗಳಿಂದ ಎರಡನೆಯ ಸಾಲಿನ ಮೂರನೆಯ ಅಕ್ಷರ H. ಒಮ್ಮೆ ಮೂರು ಬಡಿತ, ಮತ್ತೆ ಐದು—ಮೂರನೆಯ ಸಾಲಿನ ಕೊನೆಯಕ್ಷರ O. ಅಲ್ಲಿಗೆ ಕುಟ್ಟುವುದು ನಿಂತಿತು.

## WHO? ಯಾರು?

ಘಾಟೀ ಮನುಷ್ಯ, ಮೊದಲೇಟಿಗೆ ತಾನು ಯಾರ ಹತ್ತಿರ ಮಾತಾಡುತ್ತಿದ್ದೇನೆಂದು ತಿಳಿಯಲು ಬಯಸಿದ್ದಾನೆ ಎಂದು ರುಬಷೊವ ಆಲೋಚಿಸಿದನು. ಕ್ರಾಂತಿಕಾರಿಗಳ ಶಿಷ್ಟಾಚಾರದಂತಾದರೆ ಆರಂಭದ ಪರಿಚಯದಲ್ಲಿ ಏನಾದರೊಂದು ರಾಜಕೀಯ ಒಗಟು ಇರಬೇಕಾಗಿತ್ತು, ಆ ಮೇಲೆ ವರ್ತಮಾನಗಳು ಆಹಾರ-ಸಿಗರೇಟಿನ ವಿಷಯ ಮಾತುಗಳು, ಈ ವಿಷಯವಾಗಿ ಹಲವು ದಿನ ಚರ್ಚಿಸಿದ ತರುವಾಯ ವ್ಯಕ್ತಿ ಪರಿಚಯದ ಘಟ್ಟ ಬರಬೇಕಾಗಿತ್ತು. ಆದರೆ ರುಬಷೊವನ ಈ ವರೆಗಿನ ಅನುಭವವು ಪಕ್ಷವು ಪೀಡಿತರ ಸ್ಥಾನದಲ್ಲಿರುವ ದೇಶಗಳಲ್ಲಿ ಮಾತ್ರ. ಎಲ್ಲಿ ಪಕ್ಷವು ಪೀಡಿತವಾಗಿತ್ತೋ ಅಲ್ಲಿಯ ವಿಷಯ ಅವನಿಗೆ ತಿಳಿಯದು. ಪೀಡಿತ ರಾಷ್ಟ್ರದಲ್ಲಾದರೆ ಒಳಸಂಚಿಗಾಗಿ ಹೆಸರೆಂದರೆ ಮನೆಯಲ್ಲಿ ಕರೆಯುವ ಹೆಸರೇ ಬಳಕೆಯಲ್ಲಿತ್ತು, ಅದೂ ಎಷ್ಟೋ ಸಲ ಸಂದರ್ಭಾನುಸಾರ ರೂಪಾಂತರವಾಗುತಿತ್ತು. ಇಲ್ಲಿ ಹೇಗೋ ಅದೂ ರುಬಷೊವಗೆ ತಿಳಿಯದು. ಯಾವ ಹೆಸರೇ ಆಗಲಿ ೪೦೨ ರವನಿಗೆ ತನ್ನ ಹೆಸರು ತಿಳಿಸಬೇಕೆ ಬೇಡವೆ ಎಂದು ರುಬಷೊವ ವಿಹ್ವಲನಾದನು. ೪೦೨ರವನಿಗೆ ಸಹನೆ ತಪ್ಪಿರಬೇಕು: ಆತ ಮತ್ತೊಮ್ಮೆ **ಯಾರು?** ಎಂದು ಗೋಡೆ ತಟ್ಟಿ ಕೇಳಿದನು.

ಹೆಸರು ಹೇಳಿಯೇ ಬಿಡುತ್ತೇನೆ, ಆದರಲ್ಲೇನಂತೆ? ಎಂದು ರುಬಷೊವ ಧೈರ್ಯತಾಳಿ ತನ್ನ ಇಡಿ ಹೆಸರನ್ನು ತಟ್ಟಿ ತೋರಿಸಿದನು: **ನಿಕಲಸ್ ಸಲ್ಮನೊವಿಚ್ ರುಬಷೊವ.** ಆಚೆಯುವನ ಮೇಲಾಗುವ ಪರಿಣಾಮಕ್ಕಾಗಿ ಕಾದು ಕೂತನು.

ಬಹಳ ಹೊತ್ತಿನವರೆಗೆ ಉತ್ತರವೇ ಇರಲಿಲ್ಲ. ಸೆರೆ ಹೊರೆಯ ವ್ಯಕ್ತಿಗೆ ತನ್ನ ಹೆಸರು ಕೇಳಿ ಎಂಥ ಪರಮಾಶ್ಚರ್ಯವಾಗಿರಬಹುದೆಂಬುದನ್ನು ಊಹಿಸಿ ರುಬಷೊವ ನಸುನಕ್ಕನು. ಒಂದು ಸಂಪೂರ್ಣ ಮಿನಿಟು ಕಳೆಯಿತು, ಎರಡನೆಯ ಮಿನಿಟೂ ಆಯಿತು. ರುಬಷೊವ ಮಂಚ ಬಿಟ್ಟೆದ್ದನು. ಕಿಟಕಿಯಿಂದ ಬಾಗಿಲವರೆಗಿನ ಅವನ ಸಂಚಾರಕ್ರಮವನ್ನಾರಂಭಿಸಿದನು. ಆದರೂ ಗೋಡೆಯ ಬಳಿ ಸದ್ದಿಗಾಗಿ ಕಾದು ನಿಲ್ಲುವನು. ಎಷ್ಟು ಹೊತ್ತು ಆಲಿಸಿದರೂ ಸುದ್ದಿಯಿಲ್ಲ. ಕನ್ನಡಕವನ್ನುಜ್ಜಿಕೊಳ್ಳುತ್ತ, ದಣಿದ ಪಾದಗಳನ್ನು · ಬಾಗಿಲಿನ ಕಡೆಗೆ ನಿಧಾನವಾಗಿ ಎಳೆದುಕೊಂಡು ರುಬಷೊವ ಬಾಗಿಲ ತೂತಿನಿಂದ ಹೊರಗೆ ಕಣ್ಣಿಟ್ಟನು.

ಹೊರಗಿನ ಮೊಗಸಾಲೆ ಶೂನ್ಯವಾಗಿತ್ತು. ವಿದ್ಯುದ್ದೀಪಗಳು ಮಂದವಾಗಿ ಮಿನುಗುತ್ತಿದ್ದುವು. ಅಲ್ಲಿ ಅತಿ ಚಿಕ್ಕ ಸದ್ದೂ ಇರಲಿಲ್ಲ. ನಂಬರ ೪೦೨ ಮೂಕನಾದನೇಕೆ?

ಬಹುಶಃ ಅವನಿಗೆ ಅಂಜಿಕೆಯಾಗಿರಬೇಕು. ರುಬಷೊವ ತನ್ನ ವಿಷಯ ದೂರು ಹೇಳಿ ತನ್ನ ಭವಿಷ್ಯವನ್ನು ಕೆಡಿಸಿದರೋ ಎಂದು ಆತ ಅಂಜಿರಬೇಕು. ಅಥವಾ ನಂಬರ ೪೦೨ ರಾಜಕೀಯಸ್ತನಲ್ಲದ ಡಾಕ್ಟರೋ ಇಂಜನಿಯರೋ ಇರಬಹುದು. ರುಬಷೊವನಂಥ ಪ್ರಚಂಡ ಹುದ್ದರಿಯ ಹೆಸರು ಕೇಳಿಯೇ ಆತ ನಡುಗಬಹುದು. ಹೌದು, ರಾಜಕೀಯದಲ್ಲಿ ನಿರನುಭವಿಯೇ ಇರಬೇಕು, ಇಲ್ಲವಾದರೆ ಮೊದಲ ಸಲಕ್ಕೇ ಹೆಸರು ಕೇಳುತ್ತಿರಲಿಲ್ಲ. ಯಾವುದೋ ಕಾರಸ್ಥಾನದ ಸಂದರ್ಭದಲ್ಲಿ ಬಲೆಗೆ ಬಿದ್ದವನಿರಬೇಕು. ಸೆರೆಮನೆಯಲ್ಲಿ ಬಹುಕಾಲದಿಂದ ಕೊಳೆತವನೋ ಏನೋ. ಆದರೂ ಚಿಂತಿಲ್ಲ. ತಟ್ಟುವ ಕಲೆಯಲ್ಲಿ ಗಟ್ಟಿಗನಾಗಿದ್ದಾನೆ. ತನ್ನ ನಿರ್ದೋಷಪತ್ರವನ್ನು ಅಧಿಪತ್ಯಕ್ಕೆ ತೀರಿಸಬೇಕೆಂದು ಎಷ್ಟು ಕಾತರನಾಗಿರುವನೋ ಏನೋ. ವ್ಯಕ್ತಿನಿಷ್ಠ ಅಪರಾಧ. ನಿರ್ದೋಷಪತ್ರ ಇದರಿಂದ

ಇತಿಹಾಸವು ಬದಲಾಗದೆಂಬುದನ್ನು ಪ್ರಾಯಃ ಈತ ತಿಳಿದವನಲ್ಲ, ಇತಿಹಾಸದ ಮಹಾಪರ್ವತದಲ್ಲಿ ವ್ಯಕ್ತಿಯು ಅಣುರೇಣುವಿನಂತೆ ನಿಕೃಷ್ಟನೆಂಬ ತತ್ತ್ವ ವಿಚಾರವನ್ನು ಬಲ್ಲವನಲ್ಲ. ಬಹುಶಃ ತನ್ನನ್ನು ಸೆರೆಹಿಡಿದ ಅಧಿಪತ್ಯದ ಆಚರಣೆಯ ವಿಷಯದಲ್ಲಿ ನೂರನೆಯ ಕಾಗದವನ್ನು ಆತ ಈಗ ಹಾಸಿಗೆಯ ಮೇಲೆ ಕೂತು ಬರೆಯುತ್ತಿರಬಹುದು.ಆದರೆ ಬಡಪಾಯಿಗೆ ಅವರು ಅದನ್ನು ಓದರೆಂಬುದು ಹೇಗೆ ತಿಳಿಯಬೇಕು. ಅಥವಾ ಅವನು ಪತ್ನಿಗೆ ನೂರನೆಯ ಪತ್ರ ಬರೆಯುತ್ತಿರಬಹುದೆ? ಯಾವ ಪತ್ರವೂ ಆಕೆಯ ಕೈಸೇರದೆಂದು ಈ ಮಹಾಶಯನಿಗೆ ತಿಳಿದಿದೆಯೋ ಇಲ್ಲವೋ? ನಿರಾಶೆಯಿಂದ ಪ್ರಷ್ಕಿನ್‌ಗಡ್ಡವನ್ನು ಬಿಟ್ಟು, ಕೋಣೆಯನ್ನು ತೊಳೆಯುವ ಅಭ್ಯಾಸವನ್ನು ವಿಸರ್ಜಿಸಿ, ಉಗುರು ಕಚ್ಚಿಕೊಂಡು, ಕಾಮಲಿಪ್ತವಾದ ಹಗಲುಗನಸುಗಳ ರಾಜ್ಯದಲ್ಲಿ ಈತ ವಿಹರಿಸುತ್ತಿರಬಹುದೇ? ಸೆರೆಮನೆಯೊಳಗೆ ನಾನು ನಿರಪರಾಧಿ ಎಂಬ ಭಾವನೆಯಷ್ಟು ಅಧೈರ್ಯದ ವಿಚಾರ ಬೇರೆ ಇಲ್ಲ. ಸೆರೆಮನೆಯ ಜೀವನಕ್ಕೆ ಹೊಂದಿಕೊಳ್ಳಲೂ, ನೈತಿಕ ದೃಢತೆಯನ್ನು ಜೀವನದಲ್ಲಿ ತುಂಬಿಕೊಳ್ಳಲೂ ಇದೊಂದು ದೊಡ್ಡ ವಿಘ್ನ........ಹಠಾತ್ತಾಗಿ ಟಿಕ್ ಟಿಕ್ ಸದ್ದು ಮರಳಿ ಆರಂಭವಾಯಿತು.

ರುಬಶೋವ ಅವಸರದಿಂದ ಮಂಚದ ಮೇಲೆ ಕುಕ್ಕರಿಸಿದನು. ಆದರೆ ಅಷ್ಟು ಹೊತ್ತಿಗೆ ಮೊದಲೆರಡು ಅಕ್ಷರಗಳು ಮುಗಿದು ಹೋಗಿದ್ದುವು. ಅಲ್ಲದೆ ೪೦೨ ಉದ್ವೇಗದಿಂದ ಉತ್ತೇಜಿತನಾಗಿ ಬಡೆಯುತ್ತಿದ್ದುದರಿಂದ ಅಕ್ಷರಗಳು ಅಸ್ಪಷ್ಟವಾಗಿಯೂ ಇದ್ದುವು. ಆದರೂ ‘**ನಿನಗೆ ಆಗ ಬೇಕಾದ್ದೇ ಆಯಿತು**’ ಎಂಬ ಪದಸಮುಚ್ಚಯವನ್ನು ಗುರುತು ಹಿಡಿಯಲು ಕಷ್ಟವಾಗಲಿಲ್ಲ.

ಇಂಥ ಮಾತನ್ನು ರುಬಶೋವ ನಿರೀಕ್ಷಿಸಿರಲಿಲ್ಲ. ೪೦೨ ಪಕ್ಕಾ ಜಮೀನ್ದಾರ ಎಂಬುದರಲ್ಲಿ ಇನ್ನು ಸಂದೇಹವೇ ಉಳಿಯಲಿಲ್ಲ. ವಿರೋಧಿಸುವವರೆಲ್ಲ ವಿದ್ರೋಹಿಗಳೆಂದೂ, ಇತಿಹಾಸವು ಕಂಬಿಯ ಮೇಲೆ ಓಡುವ ರೈಲುಗಾಡಿಯಂತೆ ಒಂದನೆಯ ನಂಬರಿನವನ ನಿರ್ದೇಶಕತ್ವದಲ್ಲಿ ಪೂರ್ವರಚಿತವಾದೊಂದು ಯೋಜನೆಯ ಪ್ರಕಾರವಾಗಿ ಮುಂದುವರಿಯುತ್ತದೆಂದೂ ದೃಢವಾಗಿ ನಂಬಿಕೆಯುಳ್ಳವನು. ಏನೋ ಒಂದು

ತಪ್ಪು ತಿಳಿವಳಿಕೆಯಿಂದಾಗಿ, ಭ್ರಮೆಯಿಂದಾಗಿ ತಾನು ಜೈಲುಸೇರ ಬೇಕಾಯಿತಷ್ಟೆ ಎಂದು ಒಂಬತ್ತರವನ ಭಾವನೆ ಇರಬೇಕು. ಅಲ್ಲದೆ ಈ ಕೆಲವು ವರ್ಷಗಳಲ್ಲಿ ಚೀನದಿಂದ ಸ್ಪೆಯಿನ್ ದೇಶದ ವರೆಗೂ, ಬರಗಾಲ ದಿಂದ ತೊಡಗಿ ಪಕ್ಷದ ಹಿರಿಹುದ್ದರಿಗಳ ನಿರ್ನಾಮಕರಣದವರೆಗೂ ನಡೆದ ಸಕಲ ಅನಾಹುತಗಳು ಒಂದೋ ಪ್ರಾಸಂಗಿಕ ಆಪತ್ತುಗಳಷ್ಟು ತುಚ್ಛವಾದುವು, ಅಥವಾ ರುಬಷೊವ ಮತ್ತು ಅವನ ಸಂಗಡದವರ ಒಳಸಂಚಿನ ಪರಿಣಾಮವಾಗಿ ನಡೆದುವು. ಒಂಬತ್ತರವನ ಪುಷ್ಕಿನ್‌ಗಡ್ಡವು ಮಾಯವಾಗಿ ಅದರ ಸ್ಥಾನದಲ್ಲಿ ಶುಭ್ರವಾಗಿ ಕ್ಷೌರಮಾಡಿದ ಮುಖವು ಬಂದು ನಿಂತಿತು. ಆ ಮುಖದಲ್ಲಿ ನಿಶ್ಚಲವಾದೊಂದು ಅಭಿಪ್ರಾಯದ ದೃಢತೆ ಇತ್ತು. ಅವನ ಕೋಣೆ ಒಮ್ಮೆಲೆ ಶಿಸ್ತಿಗೆ ಅನುಸಾರವಾದ ಸ್ವಚ್ಛತೆಯಿಂದ ಬೆಳಗಿತು. ಇಂಥವನ ಹತ್ತಿರ ವಾದಿಸುವುದು ವ್ಯರ್ಥ, ಆದರೆ ಪ್ರಪಂಚದೊಡನೆ ತನಗಿರುವ ಏಕಮೇವ ಹಾಗೂ ಕೊನೆಯ ಸಂಬಂಧವನ್ನು ಕಡಿದುಕೊಳ್ಳುವುದು ರುಬಷೊವಗೆ ಇಷ್ಟವಾಗಿರಲಿಲ್ಲ.

ಸ್ಪಷ್ಟವಾಗಿಯೂ, ನಿಧಾನವಾಗಿಯೂ ರುಬಷೊವ ಗೋಡೆಯ ಮೇಲೆ ತಟ್ಟಿದನು. **'ಯಾರು?'**

ತಡೆದು ತಡೆದು ಉತ್ತರ ಬಂದಿತು:

**'ಯಾರಾದರೆ ನಿನಗೇನು?'**

**'ನಿನ್ನಿಷ್ಟ'** ಎಂದು ಹೇಳಿ ರುಬಷೊವ ಮಾತುಮುಗಿಸಿದವನಾಗಿ ಕೋಣೆಯೊಳಗಿನ ಸಂಚಾರವನ್ನು ಉಪಕ್ರಮಿಸಿದನು. ಆದರೆ ಆಚೆಯ ಕಡೆ ಬಡಿತ ನಿಂತ ಹಾಗೆ ತೋರಲಿಲ್ಲ. ಬದಲಾಗಿ ಒಂಬತ್ತು ತನ್ನ ಬೂಟನ್ನು ಕಳಚಿ ಅದರಿಂದ ಗಟ್ಟಿಯಾಗಿ ಗೋಡೆಯ ಮೇಲೆ ತಟ್ಟುತ್ತಿದ್ದನು.

**'ನಮ್ಮನ್ನಾಳುವ ಚಕ್ರವರ್ತಿ ಬಹುಕಾಲ ಬಾಳಲಿ!'**

ಹೀಗೋ, ಈತನೊಬ್ಬ ಕ್ರಾಂತಿ ವಿರೋಧಿಯೋ? ಒಂದನೆಯ ನಂಬರಿನವನ ಯೋಜನೆಗಳೆಲ್ಲಾದರೂ ವಿಫಲವಾದಾಗ ಆತ ಸುಳ್ಳು ಸುಳ್ಳೇ ಹೊಣೆಗಾರಿಕೆಯನ್ನು ತಪ್ಪಿಸಿಕೊಳ್ಳಲು ಕ್ರಾಂತಿವಿರೋಧಿಗಳನು ಕಾಲ್ಪನಿಕವಾಗಿ ಹೆಸರಿಸುತ್ತಿದ್ದನೆಂದು ತಾನು ಯೋಚಿಸಿದ್ದು ತಪ್ಪಾಯಿ

ತೆಂದು ರುಬಷೊವ ಎಣಿಸಿದನು. ಇದ್ದಾನಲ್ಲವೇ ಇಲ್ಲೊಬ್ಬ ಚಕ್ರವರ್ತಿಯನ್ನು ಹರಸುವ ಮಹಾನುಭಾವ........

ಹಲ್ಲು ಕಿರಿದು ರುಬಷೊವ **'ತಥಾಸ್ತು'** ಎಂಬುದನ್ನು ಬಡಿದು ಕಳಿಸಿದನು.

ಇದಕ್ಕೆ ಬಂದ ಉತ್ತರವು ಇನ್ನಷ್ಟು ಗಟ್ಟಿಯಾಗಿತ್ತು:

**'ಹಂದಿ!'**

ರುಬಷೊವಗೆ ಮೋಜು ಕಂಡಿತು. ಆತ ಕನ್ನಡಕವನ್ನು ತೆಗೆದು ಅದರ ಲೋಹದ ಪಡೆಯಿಂದ ಬಡಿತದ ಸ್ವರವು ಬದಲಾಗುವಂತೆ ವಿಶೇಷ ರೀತಿಯಲ್ಲಿ **'ಸರಿಯಾಗಿ ಅರ್ಥವಾಗಲಿಲ್ಲ'** ಎಂಬುವನ್ನು ತಟ್ಟಿದನು.

೪೦೨ನೆಯಾತನ ಕೋಪ ನೆತ್ತಿಗೇರಿರಬೇಕು. 'ನಾಯಿ' ಎಂಬುವನ್ನು ಪೂರ್ತಿ ತಟ್ಟುವಷ್ಟು ಅವನಿಗೆ ಮಾನಸಿಕ ವ್ಯವಧಾನವಿರಲಿಲ್ಲ. ಅಷ್ಟರಲ್ಲಿ ಅಕಸ್ಮಾತ್ ಕೋಪವೆಲ್ಲ ಇಳಿಯಿತೋ ಏನೋ ಎಂಬ ಹಾಗೆ **'ನಿನ್ನನ್ನೇಕೆ ಇಲ್ಲಿಗೆ ತಂದರು?'** ಎಂದು ಕೇಳಿದನು.

ಅಬ್ಬಾ. ಏನು ಸರಳವಾದ ಪ್ರಶ್ನೆ.......೪೦೨ನೆಯಾತನ ರೂಪ ಪರಿವರ್ತನೆಯಾಯಿತು. ಅದೀಗ ರಕ್ಷಕದಳದ ಒಬ್ಬ ಸುಂದರ ತರುಣನ ರೂಪವನ್ನು ತಳೆಯಿತು. ಒಂಟಿಗಾಜಿನ ಕನ್ನಡಕವನ್ನು ಧರಿಸಿರಬಹುದೆನ್ನುವ ಮಟ್ಟಿಗೆ ತರುಣನ ರೂಪವು ಪರಿಪೂರ್ಣವಾಗಿ ರುಬಷೊವನ ಮುಂದೆ ನಿಂತಿತು. ಕನ್ನಡಕದಿಂದಲೇ **'ರಾಜಕೀಯ ಭಿನ್ನಾಭಿಪ್ರಾಯಗಳು'** ಎನ್ನುವ ಮಾತನ್ನು ಆತ ಆಚೆಗೆ ಅಟ್ಟಿದನು.

ಉತ್ತರ ಬರಲು ಸ್ವಲ್ಪ ತಡವಾಯಿತು. ಏನಾದರೂ ವಿಡಂಬನೆಯ ಮಾತನ್ನು ೪೦೨ ಹುಡುಕುತಿದ್ದಾನು ಎಂದು ರುಬಷೊವ ಯೋಚಿಸಿದನು. ಯೋಚಿಸಿದ್ದೇ ಬಂತು:

**'ಶಹಭಾಸ್! ತೋಳಗಳು ಒಂದನ್ನೊಂದು ಹಿಡಿದು ತಿನ್ನುವುವು'**

ರುಬಷೊವನಿಗೆ ಉತ್ತರ ಕೊಡುವುದು ಬೇಡವೆನಿಸಿತು. ಆತ ಮರಳಿ ಸಂಚಾರವನ್ನುಪಕ್ರಮಿಸಿದನು. ಆದರೆ ೪೦೨ರಲ್ಲಿದ್ದ ಅಧಿಕಾರಿಗೆ ಮಾತು ಬೇಕಾಗಿತ್ತು.

'ರುಬಷೊವ.......'

ಭಾರೀ ಹತ್ತಿರದ ಬಂಧುವಿನಂತೆ ಕರೆಯುತ್ತಿರುವನಲ್ಲಾ?

**'ಏನು?'**

೪೦೨ ಸ್ವಲ್ಪ ಹೊತ್ತು ತಡೆದಂತೆ ತೋರಿತು. ಆಮೇಲೆ ಉದ್ದವಾದೊಂದು ವಾಕ್ಯವೇ ಕೇಳಿಸಿತು:

**'ನೀನು ಹೆಂಗಸಿನೊಡನೆ ಕಡೆಯ ಸಲ ಮಲಗಿ ಎಷ್ಟು ದಿನವಾಯಿತು?'**

೪೦೨ ಕನ್ನಡಕ ಧರಿಸಿರಲೇಬೇಕು. ಅವರಿಂದಲೇ ಗೋಡೆಯನ್ನು ಬಡಿಯುತ್ತಿದ್ದುದರಿಂದ ಅವನ ಬರಿಗಣ್ಣುಗಳು ಉತ್ತರ ನಿರೀಕ್ಷೆಯಲ್ಲಿ ಎವೆಯಿಕ್ಕುತ್ತಿರಬಹುದು. ರುಬಷೊವಗೆ ಅವನು ಚಕ್ರವರ್ತಿಗಳ ಆರೋಗ್ಯಕ್ಕೆ ಹರಕೆ ಹೊರುವುದಕ್ಕಿಂತ ಈ ರೀತಿ ತನ್ನ ವಿಷಯವೇ ಮುಚ್ಚುಮರೆಯಿಲ್ಲದೆ ಹೇಳಿಕೊಳ್ಳುವುದು ಚೆನ್ನಾಗಿ ಕಂಡಿತು. ಸ್ವಲ್ಪ ಸಮಯ ಹೀಗೇ ಯೋಚಿಸಿ ಕೊನೆಗೆ **'ಮೂರು ವಾರಗಳ ಹಿಂದೆ'** ಎಂದು ರುಬಷೊವ ಉತ್ತರ ಕೊಟ್ಟನು.

ಉತ್ತರವು ಮರುಕ್ಷಣವೇ ಬಂತು;

**'ನನಗೆ ಆ ವಿಷಯ ವಿವರವಾಗಿ ಹೇಳು.'**

ಸರಿ, ಇದು ಅಧಿಕಪ್ರಸಂಗದ ಪರಮಾವಧಿಯಾಯಿತು ಎಂದು ಭಾವಿಸಿ ರುಬಷೊವ ಒಮ್ಮೆ ಮಾತನ್ನು ಇಷ್ಟಕ್ಕೆ ನಿಲ್ಲಿಸಿ ಬಿಡಲೇ ಎಂದು ಎಣಿಸಿದನು. ಆದರೆ ಎಡಗಡೆಯ ಕೋಣೆಯಲ್ಲಿ ಯಾರೂ ಇಲ್ಲವೆಂದಾದ ಬಳಿಕ ೪೦೨ ರ ಸಹಾಯವಿಲ್ಲದೆ ತಾನು ೪೦೦, ೩೯೯ ಹೀಗೆ ಬೇರೆ ಕೋಣೆಯ ಸೆರೆಯಾಳುಗಳೊಡನೆ ಸಂಪರ್ಕವಿಡುವ ಸಂಭವವೇ ಇರಲಿಲ್ಲವಾಗಿ ೪೦೨ನ್ನು ಬಿಡುವಂತಿಲ್ಲ. ಆದರೆ ಅವನ ಕೊನೆಯ ಪ್ರಶ್ನೆಗೆ ಏನು ಹೇಳಲಿ ಎಂದು ರುಬಷೊವ ತಲೆಕೆರೆದು ಎಲ್ಲೋ ಎಂದೋ ಕಂಡಿದ್ದ ಒಂದು ಕ್ಯಾಬರೆಟ್ ನೃತ್ಯದ ಹಾಡೊಂದನ್ನು ಸ್ಮರಿಸಿಕೊಂಡು ಕನ್ನಡಕದ ದಡೆಯಿಂದ ಹೀಗೆ ತಟ್ಟಿದನು;

**'ಮದ್ಯದ ಗ್ಲಾಸುಗಳೊಳಗೆ ಹಿಡಿಸುವ ಗಾತ್ರದ ಹಿಮೋಪಮ ಸ್ತನಗಳು........'**

೪೦೨ ರವನಿಗೆ ತೃಪ್ತಿಯಾಗಲಿಲ್ಲ:

**'ಸರಿ, ಮುಂದುವರಿಸು'**

೪೦೨ ಮೀಸೆ ತಿಕ್ಕಿಕೊಳ್ಳುತ್ತಿರಬಹುದೆಂದು ರುಬಷೊವ ಯೋಚಿಸಿದನು. ಆದರೆ ಎಂಥ ಪೇಚಿನಲ್ಲಿ ಸಿಕ್ಕಿಬಿದ್ದ. ಅವನನ್ನು ಅಸಮಾಧಾನಗೊಳಿಸುವಂತೆಯೂ ಇಲ್ಲ. ಸೇನಾಧಿಕಾರಿಗಳು ಭೋಜನ ಶಾಲೆಯಲ್ಲಿ ಮಾತಾಡುವ ವಿಷಯ ಯಾವುವು? ಎರಡು – ಹೆಂಗಸರು, ಕುದುರೆಗಳು. ರುಬಷೊವ ಕನ್ನಡಕವನ್ನು ತಿಕ್ಕಿ ವಿಧಿಪೂರ್ವಕವಾಗಿ,

**'ಕಾಡು ಕುದುರೆಯಂಥ ತೊಡೆಗಳು.'**

ಇಲ್ಲಿಗೆ ರುಬಷೊವನ ಪ್ರತಿಭೆ ಕುಂದಿಹೋಯಿತು. ಅವನಿಗೆ ಆಯಾಸವಾಯಿತು. ಇನ್ನೂ ಹೆಚ್ಚಾಗಿ ಮುಂದುವರಿಸುವುದು ಅವನಿಂದ ಸಾಧ್ಯವಾಗದು. ಆದರೆ ೪೦೨ ಸಂತುಷ್ಟನಾಗಿ ಹೋದನು.

**'ರುಸ್ತುಂ!'** ಎಂದ ೪೦೨. ಬಹುಶಃ ಮೀಸೆ ಹುರಿಮಾಡಿಕೊಳ್ಳುವುದಲ್ಲದೆ ಅವನೀಗ ಅಟ್ಟಹಾಸದಿಂದ ತೊಡೆಗೆ ಹೊಡೆದುಕೊಳ್ಳುತ್ತಿದ್ದನೋ ಏನೋ. ಯಾವುದೂ ರುಬಷೊವಗೆ ಕಾಣುತ್ತಿರಲಿಲ್ಲ. ನಡುವಿನಗೋಡೆಯ ಮೂಕತನವು ರೂಪಿಲ್ಲದ ಅಶ್ಲೀಲತೆಯ ಮೊತ್ತದಂತೆ ತೋರುತ್ತಿತ್ತು.

**'ಸರಿ, ಮುಂದೆ ಹೇಳು'** ೪೦೨ರವನು ಒತ್ತಾಯಪಡಿಸಿದನು.

ರುಬಷೊವಗೆ ಸಾಧ್ಯವಾಗಲಿಲ್ಲ. **'ಅಷ್ಟೇ, ಮುಗಿಯಿತು'** ಎಂದು ಬಡಿದು ಮರುಕ್ಷಣ ಪಶ್ಚಾತ್ತಾಪದಿಂದ ನೊಂದನು. ೪೦೨ ತಪ್ಪು ತಿಳಿದುಕೊಂಡರೋ ಎಂದು ಅವನಿಗೆ ಭಯವೂ ಆಯಿತು. ಆದರೆ ೪೦೨ ಹಾಗೇನೂ ಭಾವಿಸಲಿಲ್ಲ.

**'ಮುಂದುವರಿಸು, ದಯಮಾಡಿ ಮುಂದುವರಿಸು'** ಎಂದನು.

ಇಷ್ಟು ಹೊತ್ತಿಗೆ ರುಬಷೊವಗೆ ಸಂಖ್ಯೆಗಳನ್ನು ಅಕ್ಷರಗಳಾಗಿಯೂ, ಅಕ್ಷರಗಳನ್ನು ಶಬ್ದಗಳಾಗಿಯೂ ಜೋಡಿಸುವ ಕಲೆಯಲ್ಲಿ ಪ್ರಾವೀಣ್ಯವು ಸಿದ್ಧಿಯಾಗಿತ್ತು. ಈಗವನಿಗೆ ಲೆಕ್ಕ ಹಾಕುವ ಅವಶ್ಯಕತೆ ಇರಲಿಲ್ಲ. ೪೦೨ನೆಯವನ ಕಾಮುಕಥಾಶ್ರವಣಕುತೂ

ಹಲವು ಕುಂದಲಿಲ್ಲ. ಅವನು ಪುನಃ ಪುನಃ '**ದಯಮಾಡಿ ಹೇಳು**': ಎಂದು ಬೇಡಿಕೊಳ್ಳುತ್ತಿದ್ದನು.

೪೦೨ ಬಹುಶಃ ತರುಣನೇ ಇರಬೇಕು. ಸೈನಿಕಕುಟುಂಬದಲ್ಲಿ ಜನಿಸಿ ಪರದೇಶದಲ್ಲಿ ಬೆಳೆದು ಸುಳ್ಳು ಪಾಸ್‌ಪೋರ್ಟಿನ ಮೇಲಿಂದ ದೇಶ ಪ್ರವೇಶ ಮಾಡಿದವನಾಗಿರಬೇಕು. ಸುಣ್ಣ ಬಳಿದ ಬಿಳಿ ಗೋಡೆಯ ಕಡೆಗೆ ನಿರಾಶನಾಗಿ ನೋಡುತ್ತ 'ದಯಮಾಡಿ, ದಮ್ಮಯ್ಯ' ಎಂದಾತ ಹಲುಬುತ್ತಿರಬೇಕು.

**'ಇನ್ನೂ ಹೇಳು ದಮ್ಮಯ್ಯ'**

ನಿರಾಶನಾಗಿ ಗೋಡೆಯನ್ನು ವೀಕ್ಷಿಸುತ್ತಿದ್ದ ಹಾಗೆ ಗೋಡೆಯಲ್ಲಿ ಹುಟ್ಟಿದ ತೇವದ ಕಲೆಗಳು ಮದ್ಯದ ಪಾತ್ರೆಯೊಳಗೆ ಹೋಗುವಂಥ ಸ್ತನ ಮತ್ತು ಕಾಡುಕುದುರೆಯಂಥ ತೊಡೆಗಳಿರುವ ಒಬ್ಬ ಸ್ತ್ರೀಯ ಆಕಾರ ವನ್ನು ತಾಳಿ ಆ ತರುಣನನ್ನು ಬಾಧಿಸುತ್ತಿರಬಹುದು.

**'ಹೇಳಿ, ಹೇಳಿ, ದಯಮಾಡಿ ಹೇಳಿ,'**

ಮಂಚದಲ್ಲಿ ಮೊಣಕಾಲೂರಿ ೪೦೭ನೆಯ ಕೈದಿ ಬ್ರೆಡ್ ಹಿಡಿಯಲು ಕೈಯೊಡ್ಡಿದ ಹಾಗೆ ಕೈಯನ್ನು ಮುಂದೆ ಚಾಚಿ ಪ್ರಾರ್ಥನೆಯ ಭಂಗಿ ಯಲ್ಲಿ ಕೂತಿರಬಹುದು, ಪಾಪ!

ಮುಂದೆ ಚಾಚಿದ ಕೈ ಏನನ್ನು ನೆನಪಿಗೆ ತರುವಂತಿತ್ತೆಂದು ೪೦೭ನೆಯ ಕೈದಿಯ ಸೊರಗಿದ ಕೈಯ ದಾಸೋಹಭಾವದಲ್ಲಿ ಹೊಳೆಯುವ ಸಂಗತಿ ಈಗ ನೆನಪಾಯಿತು. ಸತ್ತ ಕ್ರಿಸ್ತನನ್ನು ಹಿಡಿದುಕೊಂಡಿದ್ದ ಕನ್ಯೆ. ಪೇತಾ........

## ೯

ಪೇತಾ........ದಕ್ಷಿಣ ಜರ್ಮನಿಯ ಒಂದು ಪಟ್ಟಣದ ಚಿತ್ರ ಶಾಲೆಯಲ್ಲಿ ಒಂದು ಸೋಮವಾರ ಅಪರಾಹ್ನ. ರುಬಷೊವ ಯಾರನ್ನು ಭೇಟಿಯಾಗಲು ಬಂದಿದ್ದನೋ ಆ ತರುಣ ಮತ್ತು ರುಬಷೊವ ಇವರಿ ಬ್ಬರನ್ನು ಬಿಟ್ಟು ಅಲ್ಲಿ ಬೇರೆ ಯಾರೂ ಇರಲಿಲ್ಲ. [illegible] ಕೋಣೆಯು

ಮಧ್ಯದಲ್ಲಿ ಹಾಕಿದ್ದ ಸೋಫದ ಮೇಲೆ ಅವರು ಆಸೀನರಾಗಿದ್ದರು. ಸುತ್ತಲೂ ಗೋಡೆಗಳಲ್ಲಿ ಡಚ್ ಕಲಾಕಾರರು ಬರೆದ ಸ್ತ್ರೀಯರ ಚಿತ್ರ, ಮಣಗಟ್ಟಲೆ ಮಾಂಸಖಂಡದ ನಿತಾಂತ ದೃಶ್ಯ. ಕಾಲ: ೧೯೩೩ನೆಯ ಇಸ್ವಿ, 'ಭೀಕರಕಾಲ' ಅಥವಾ ರಕ್ತಪಾತ, ಕೊಲೆ, ಸುಲಿಗೆಯ ಹಿಂಸಾ ಪರ್ವವು ಆರಂಭವಾದ ಸಮಯ, ರುಜವೊವನನ್ನು ಸೆರೆ ಹಿಡಿಯುವ ಕಿಂಚಿತ್ ಪೂರ್ವದಲ್ಲಿ. ಚಳವಳಿಯು ಅಪಮಾನಕರವಾದ ಸೋಲಿಗೀಡಾ ಗಿತ್ತು. ಅದರ ಸದಸ್ಯರನ್ನೆಲ್ಲ ನ್ಯಾಯ ಬಾಹಿರರನ್ನಾಗಿ ಸಾರಿ ಅವರನ್ನು ಬೇಟೆಯಾಡುವುದೂ, ಸಾಯುವ ವರೆಗೂ ಸದೆಬಡಿಯುವುದೂ ನಡೆದಿತ್ತು. ಪಕ್ಷವು ಆ ದೇಶದಲ್ಲಿನ ರಾಜಕೀಯ ಸಂಸ್ಥೆಯಾಗಿ ಉಳಿ ಯಲಿಲ್ಲ; ಸಹಸ್ರ ಬಾಹು ಮತ್ತು ಸಹಸ್ರಶೀರ್ಷಗಳಿಂದ ರಕ್ತಸೋರುವ ಒಂದು ಮಾಂಸದ ಮುದ್ದೆಯಾಗಿತ್ತು. ಮನುಷ್ಯರು ಸತ್ತರೂ ಅವರ ಕೂದಲು ಮತ್ತು ಉಗುರು ಬೆಳೆಯುವಂತೆ, ಸತ್ತ ಪಕ್ಷದಲ್ಲಿ ಅಲ್ಲಲ್ಲಿ, ವಿಶೇಷವಾಗಿ. ಒಂದೊಂದು ಅವಯವ, ಸ್ನಾಯು, ಅಥವಾ ಕಣಗಳಲ್ಲಿ ಜೀವಚಲನೆ ಜರಗುತ್ತಿತ್ತು. ಗಂಡಾಂತರದಲ್ಲಿ ಹೇಗೋ ಬದುಕಿ ಉಳಿದು ಭೂಗತರಾಗಿ ಒಳಸಂಚು ನಡೆಸುವ ಸದಸ್ಯರ ಕೆಲವೊಂದು ಗುಂಪುಗಳು ದೇಶದಲ್ಲಿ ಅಲ್ಲಲ್ಲಿ ಕಾರ್ಯತತ್ಪರವಾಗಿದ್ದುವು. ಮದ್ಯದಂಗಡಿಯ ಗೋದಾಮು, ಅಡವಿ, ರೈಲ್ವೇ ಸ್ಟೇಶನ್, ವಸ್ತು ಸಂಗ್ರಹಾಲಯ, ಚಿತ್ರಶಾಲೆ, ಕ್ರೀಡಾಸಂಘ – ಇವು ಸದಸ್ಯರು ಒಬ್ಬರನ್ನೊಬ್ಬರು ಭೇಟಿ ಯಾಗುತ್ತಿದ್ದ ಸ್ಥಳಗಳು. ಅವರು ಒಂದೊಂದು ದಿನ ಒಂದೊಂದು ಕಡೆ ಯಲ್ಲಿ ಮಲಗುವರು. ಹೆಸರನ್ನೂ ಚರ್ಯೆಗಳನ್ನೂ, ಆಗಾಗ ಬದಲಾಯಿ ಸುವರು. ಮನೆಯಲ್ಲಿ ಕರೆಯುವ ಹೆಸರಿನ ಹೊರತು ಅಡ್ಡ ಹೆಸರು ಏನೆಂಬುದು ಅವರಲ್ಲೊಬ್ಬರಿಗೂ ತಿಳಿಯದು, ಅವರು ಒಬ್ಬರೊಬ್ಬರ ವಿಳಾಸವನ್ನು ಕೇಳುವ ಪದ್ಧತಿಯೂ ಇರಲಿಲ್ಲ. ತಮ್ಮ ಜೀವವನ್ನು ಇನ್ನೊಬ್ಬನ ಕೈಯಲ್ಲಿ ಕೊಟ್ಟ ಹಾಗೆ, ಯಾರನ್ನೂ ಲವಲೇಶವೂ ನಂಬದೆ ಅವರ ಭೇಟಿಗಳು ಜರಗುತ್ತಿದ್ದುವು. ತಮಗೂ ಬೇರೆಯವರಿಗೂ ತಾವಿನ್ನೂ ಜೀವಹಿಡಿದುಕೊಂಡಿರುವೆವೆಂಬುದನ್ನು ಖಾತ್ರಿಪಡಿಸಲೋ ಎಂಬಂತೆ ಅವರು ಪ್ರಕಟನೆಗಳನ್ನು ಮುದ್ರಿಸಿ ಹಂಚುವರು, ರಾತ್ರಿಯ

ಹೊತ್ತು ಉಪನಗರದ ಅಗಲಕಿರಿದಾದ ಬೀದಿಗಳಲ್ಲಿ ಸಂಚರಿಸಿ ಗೋಡೆಗಳ ಮೇಲೆ ಹಳೆಯ ಘೋಷಣೆಗಳನ್ನು ಗೀಚುವರು. ಮುಂಜಾವಿನ ನಸುಕಿನಲ್ಲಿ ಕಾರ್ಖಾನೆಯ ಚಿಮಣಿಯ ಮೇಲೇರಿ ಹಳೆಯ ಧ್ವಜವನ್ನು ಅಲ್ಲಿ ನಿಲ್ಲಿಸಿ ತಾವು ಸಾಯಲಿಲ್ಲ, ತಮ್ಮ ಸಾಹಸವೂ ಸಾಯಲಿಲ್ಲವೆಂಬುದನ್ನು ಜಗತ್ತಿಗೆ ಸಾರಲು ಯತ್ನಿಸುವರು. ಅವರ ಪ್ರಕಟನೆಗಳನ್ನು ಕೈಯಲ್ಲಿ ತೆಗೆದುಕೊಂಡವರು ಭಯಭೀತರಾಗಿ, ಸತ್ತವರ ಸಂದೇಶಕ್ಕಂಜಿ, ಅವನ್ನು ಎಸೆದು ಮುಂದೆ ಸಾಗುವರು. ಗೋಡೆಗಳಲ್ಲಿ ಬರೆದ ಘೋಷಣೆಗಳೂ, ಚಿಮಣಿಯ ತುದಿಯ ಧ್ವಜಗಳೂ ಕೋಳಿ ಕೂಗುವ ಮೊದಲೇ ಮಾಯವಾಗುತ್ತಿದ್ದುವು. ಆದರೆ ಮರು ರಾತ್ರಿ ಅವು ಮರಳಿ ಪ್ರತಿಷ್ಠಿಸಲ್ಪಡುವುವು. 'ರಜೆಯಲ್ಲಿ ಬಂದ ಮೃತ ಜನರು' ಎಂದು ಹೆಸರಿಟ್ಟುಕೊಂಡ ಇಂಥ ಜನರ ಚಿಕ್ಕ ಚಿಕ್ಕ ತಂಡಗಳು ಇನ್ನೂ ಬದುಕಿದ್ದೇವೆಂಬುದನ್ನು ಸಿದ್ಧಮಾಡಿ ತೋರಿಸಲಿಕ್ಕೋಸ್ಕರ ಮಾತ್ರ ಕಾರ್ಯಪ್ರವೃತ್ತವಾಗಿರುವಂತೆ ಕಾಣುತ್ತಿತ್ತು.

ಒಂದು ತಂಡಕ್ಕೂ ಇನ್ನೊಂದು ತಂಡಕ್ಕೂ ಸಂಪರ್ಕವಿರಲಿಲ್ಲ. ಪಕ್ಷದ ನರಮಂಡಲವು ಕತ್ತರಿಸಿ ಹೋದುದರಿಂದ ಪ್ರತಿ ತಂಡವೂ ಸ್ವಸಂಪೂರ್ಣವಾಗಿ ಕೆಲಸ ಮಾಡಬೇಕಾಗಿತ್ತು: ಮೆಲ್ಲಮೆಲ್ಲನೆ ತಂಡಗಳು ಪರಿಚಯಕ್ಕೆಳಸಿ ಕೆಲಸ ಆರಂಭಿಸಿದುವು. ವಿದೇಶಗಳಿಂದ ಎರಡು ಅರೆಯುಳ್ಳ ಟ್ರಂಕುಗಳನ್ನು ಹಿಡಿದುಕೊಂಡು ಸುಳ್ಳು ಪಾಸ್‌ಪೋರ್ಟಿನಲ್ಲಿ ಸಂಚಾರಿ ವ್ಯಾಪಾರಿಗಳ ರೂಪದಲ್ಲಿ ಪಕ್ಷದ ವಾರ್ತಾವಾಹಕರು ದೇಶವನ್ನು ಪ್ರವೇಶಿಸಿದರು. ಸರ್ವಸಾಧಾರಣವಾಗಿ ಅವರು ಸೆರೆಸಿಕ್ಕಿ, ಚಿತ್ರಹಿಂಸೆಗೆ ಗುರಿಯಾಗಿಯೋ ಗುಂಡಿನ ಬಾಯಿಗೆ ಆಹುತಿಯಾಗಿಯೋ ಜೀವ ಕಳೆದುಕೊಳ್ಳುತ್ತಿದ್ದರು; ಅವರ ಸ್ಥಾನದಲ್ಲಿ ಇತರರು ಬಂದು ಸೇರುತ್ತಿದ್ದರು. ಪಕ್ಷದ ಉಸಿರು ನಿಂತಿದ್ದರೂ ಅದರ ಕೂದಲು. ಉಗುರು ಬೆಳೆಯುತ್ತಿದ್ದುವು. ವಿದೇಶಗಳಿಂದ ನಾಯಕರು ಅದರ ಜಡ ಶರೀರದೊಳಗೆ ಕಳಿಸುತ್ತಿದ್ದ ವಿದ್ಯುತ್ಪ್ರವಾಹದಿಂದಾಗಿ ಅದರ ಅವಯವಗಳಲ್ಲಿ ಸೆಡೆತ, ಚಲನೆಯ ಲಕ್ಷಣಗಳು ತೋರಿ ಬರುತ್ತಿದ್ದುವು.

ಪೇತಾ........ ನಂ. ೪೨೨ ರುಬಷೊವನ ಸ್ಮರಣಪಥದಿಂದ ಮರೆಯಾದನು. ಅತ್ತ ಇತ್ತ ಆರೂವರೆ ಹೆಜ್ಜೆ ಹಾಕುತ್ತ ಕೋಣೆಯೊಳಗೆ ತಿರುಗಾಡುತ್ತಿದ್ದ ರುಬಷೊವಗೆ ತಾನು ಜರ್ಮನ್ ಚಿತ್ರ ಶಾಲೆಯ ನಡುವಣ ಸೋಫದಲ್ಲಿ ಕೂತಂತೆ ಭಾಸವಾಯಿತು. ನೆಲವೆಲ್ಲ ಪಾಲೀಷಿನ ವಾಸನೆ ಬರುತಿತ್ತು. ಆತ ಸ್ಟೇಶನಿನಿಂದ ನೇರವಾಗಿ ಮಿಲನಸ್ಥಾನಕ್ಕೆ ಹೊತ್ತಿಗಿಂತ ಮೊದಲೇ ಬಂದು ಸೇರಿದ್ದನು. ತಾನು ಬರುವುದನ್ನು ಯಾರೂ ನೋಡಿರಲಿಕ್ಕಿಲ್ಲವೆಂದು ಭಾವಿಸಿದನು. ದಂತವೈದ್ಯರ ಸಲಕರಣೆಯಿಂದ ತುಂಬಿದ ಅವನ ಪೆಟ್ಟಿಗೆಯನ್ನು ಕ್ಲೋಕ್ ರೂಮಿನಲ್ಲಿ ಬಿಟ್ಟಿದ್ದನು. ಕನ್ನಡಕದ ಮೂಲಕ ಗೋಡೆಯ ಮಾಂಸರಾಶಿಯ ಚಿತ್ರಗಳನ್ನು ನೋಡುತ್ತ ರುಬಷೊವ ಕಾದಿದ್ದನು.

ಆ ಪಟ್ಟಣದ ಪಕ್ಷದ ಗುಂಪಿನ ನಾಯಕನಾದ ರಿಚರ್ಡ ಎಂಬ ತರುಣನು ನಿರ್ದೇಶಿತ ಸಮಯಕ್ಕೆ ಕೆಲವು ಮಿನಿಟು ತಡವಾಗಿ ಬಂದನು. ಆತನಿಗೆ ರುಬಷೊವ ಯಾರೆಂದು ತಿಳಿಯದು, ರುಬಷೊವಗೆ ಆತ ಯಾರೆಂದು ತಿಳಿಯದು. ಎರಡು ಸಾಲು ಚಿತ್ರಗಳನ್ನು ನೋಡಿಕೊಂಡು ಬರುತ್ತಿದ್ದ ಹಾಗೆ ಅವನ ದೃಷ್ಟಿ ಸೋಫದಲ್ಲಿ ಕೂತ ರುಬಷೊವನ ಮೇಲೆ ಬಿತ್ತು, ರುಬಷೊವನ ಹತ್ತಿರ ಗಯಟೆ (Goethe) ಮಹಾ ಕವಿಯ 'ಫಾವುಸ್ಟ' (Faust) ಗ್ರಂಥವಿತ್ತು. ಅದನ್ನು ನೋಡುತ್ತಲೇ ತರುಣನು ರುಬಷೊವನ ಹತ್ತಿರ ಬಂದು ಕೂತನು. ಟೊಪ್ಪಿಯನ್ನು ಮೊಣಕಾಲಲ್ಲಿರಿಸಿಕೊಂಡು ರುಬಷೊವಗೆ ಎರಡು ಅಡಿ ದೂರದಲ್ಲಿ ಸೋಫದ ಅಂಚಿನಲ್ಲಿ ನಾಚಿಕೆಯಿಂದ ರಿಚರ್ಡ ಆಸೀನನಾದನು. ಅವನು ವೃತ್ತಿಯಲ್ಲಿ ಕಮ್ಮಾರನು. ವಸ್ತು ಸಂಗ್ರಹಾಲಯದಲ್ಲಿ ಯಾರ ಕಣ್ಣಿಗೂ ಕುಕ್ಕುವಂತಿರಬಾರದೆಂದು ಭಾನುವಾರದ ಕರಿ ಉಡುಪನ್ನು ಧರಿಸಿದ್ದನು.

'ತಡವಾಯಿತು, ದಯವಿಟ್ಟು ಕ್ಷಮಿಸಿ' ಎಂಬ ಪ್ರಾರ್ಥನೆಯಿಂದ ರಿಚರ್ಡ ಮಾತು ತೊಡಗಿದನು.

'ಚಿಂತಿಲ್ಲ, ನಿನ್ನ ಜನರ ಪಟ್ಟಿ ಎಲ್ಲಿದೆ. ಅದನ್ನು ಮೊದಲು ನೋಡಿಕೊಳ್ಳೋಣ' ಎಂದು ರುಬಷೊವ ಹೇಳಿದನು.

ರಿಚರ್ಡ ಗೋಣಲ್ಲಾಡಿಸಿ 'ನಾನು ಹೆಸರಿನ ಪಟ್ಟಿಯನ್ನು ಒಯ್ಯುವ ಕ್ರಮವಿಲ್ಲ. ಹೆಸರು, ವಿಳಾಸ ಎಲ್ಲಾ ನನ್ನ ತಲೆಯಲ್ಲೇ ಇರುತ್ತದೆ' ಎಂದನು.

'ಸರಿ, ನಿನ್ನನ್ನು ಅವರು ಸೆರೆಹಿಡಿದರೆ ಏನು ಮಾಡುತ್ತೀಯಾ?' ಎಂದು ರುಬಷೊವ ಕೇಳಿದನು.

'ಅದಕ್ಕೆ ಏರ್ಪಾಡು ಮಾಡಿದ್ದೇನೆ. ಆ್ಯನ್ನಿ ಕೈಯಲ್ಲಿ ಒಂದು ಯಾದಿ ಕೊಟ್ಟಿದ್ದೇನೆ. ಆ್ಯನ್ನಿ ಅಂದರೆ ನನ್ನ ಹೆಂಡತಿ'.

ಅಷ್ಟಕ್ಕೇ ಮಾತು ನಿಲ್ಲಿಸಿ ಅವನು ಉಗುಳುನುಂಗಿದನು, ಗಂಟಲ ಮಣಿಯು ಮೇಲೆ ಕೆಳಗೆ ಸರಿಯುತ್ತಿತ್ತು. ರುಬಷೊವನ ಮುಖ ವನ್ನೊಮ್ಮೆ ಸಂಪೂರ್ಣವಾಗಿ ರಿಚರ್ಡ ನೋಡಿದ್ದು ಆವಾಗ. ರುಬಷೊವಗೆ ರಿಚರ್ಡನ ಕಣ್ಣು ಊದಿಕೊಂಡಂತೆಯೂ, ಕೆಂಪಾದಂತೆಯೂ ತೋರಿತು. ಕಣ್ಣ ಬೋಳಿಗಳಲ್ಲಿ ಸೂಕ್ಷ್ಮ ರಕ್ತನಾಳಗಳ ಜಾಲವೇ ಹರಡಿತ್ತು. 'ಆ್ಯನ್ನಿ ನಿನ್ನೆ ಸೆರೆಸಿಕ್ಕಿದಳು' ಎಂದು ಹೇಳಿ ರಿಚರ್ಡ್ ರುಬಷೊವನ ಕಡೆ ಆಸೆಯಿಂದ ನೋಡಿದನು. ಕೇಂದ್ರಸಮಿತಿಯ ದೂತನಾದ ರುಬಷೊವ ತನ್ನನ್ನು ಹೇಗಾದರೂ ಮಾಡಿ ಉದ್ಧರಿಸುವನೆಂಬ ಹುಡುಗತನದ ಆಸೆಯಿಂದ ಆತ ರುಬಷೊವನ್ನು ದಿಟ್ಟಿಸಿದನು.

'ಹೀಗೋ, ಅಂದರೆ ಪೋಲೀಸರ ಕೈಯಲ್ಲಿ ನಿನ್ನ ಯಾದಿ ಇದೆ ಎಂದಹಾಗಾಯಿತು' ಎಂದು ಕನ್ನಡಕವನ್ನು ಅಂಗಿಯಿಂದ ಉಜ್ಜಿ ಕೊಳ್ಳುತ್ತ ರುಬಷೊವ ಎಂದನು.

'ಇಲ್ಲ, ಅವಳನ್ನು ಪೋಲೀಸರು ಹಿಡಿದುಕೊಂಡು ಹೋಗುವ ಸಮಯ ನನ್ನ ನಾದಿನಿ ಆ್ಯನ್ನಿ ಬಳಿಯೇ ಇದ್ದಳು. ಯಾದಿ ಅವಳ ಕೈಯಲ್ಲಿದೆ. ಅವಳ ಕೈಯಲ್ಲಿದ್ದರೂ ಅಪಾಯವಿಲ್ಲ; ಅವಳ ಗಂಡನು ಪೋಲೀಸ ಕಾನ್‌ಸ್ಟೇಬಲ್ ಆದರೂ ಆಕೆ ನಮ್ಮೊಂದಿಗೇ ಇದ್ದಾಳೆ.'

'ಸರಿ, ನಿನ್ನ ಹೆಂಡತಿ ಸೆರೆಸಿಕ್ಕಿದಾಗ ನೀನೆಲ್ಲಿದ್ದೆ?'

'ಸಂಗತಿ ಹೀಗೆ. ನಾನು ನನ್ನ ಮನೆಯಲ್ಲಿ ಮಲಗದೆ ಮೂರು ತಿಂಗಳಾದುವು. ನನ್ನ ಸ್ನೇಹಿತ ಸಿನೆಮಾಚಾಲಕ ಒಬ್ಬನಿದ್ದಾನೆ. ಅವನಲ್ಲಿಗೆ ಹೋಗಿ. ದೇಖಾವೆ ಮುಗಿದ ಬಳಿಕ ಅಲ್ಲೇ ಕ್ಯಾಬಿನಿನಲ್ಲಿ

ಮಲಗುವ್ರದು. ರಸ್ತೆಯಿಂದ ನೇರವಾಗಿ ಅಲ್ಲಿಗೆ ಹೋಗಲು ಒಂದು ನಳಿಗೆಯ ದಾರಿಯಿದೆ. ಅಲ್ಲದೆ ಪುಕ್ಕಟೆ ಸಿನಿಮಾವೂ ಆಗುತ್ತದೆ." ಮಾತಿನ ನಡುವೆ ನಿಂತು ಉಗುಳು ನುಂಗಿ, ರಿಚರ್ಡ ಮುಂದುವರಿಸುತ್ತಾ? 'ಆ್ಯನ್ನಿಗೆ ನನ್ನ ಸ್ನೇಹಿತ ಯಾವಾಗಲೂ ಪುಕ್ಕಟೆ ಟಿಕೇಟು ತೆಗೆಸಿ ಕೊಡುತ್ತಿದ್ದ. ಸಿನೆಮಾ ಹಾಲಿನಲ್ಲಿ ಕತ್ತಲೆ ಕವಿದೊಡನೆ ಆ್ಯನ್ನಿ ಕೊರಳು ಹಿಂದೆ ತಿರುಗಿಸಿ ನಮ್ಮ ಪ್ರೊಜೆಕ್ಟರಿನ ಕೋಣೆಯ ಕಡೆ ನೋಡುವಳು. ನಾನು ಅವಳಿಗೆ ಕಾಣದಿದ್ದರೂ, ಪರದೆಯ ಮೇಲೆ ಹೆಚ್ಚು ಬೆಳಕು ಬಿದ್ದಾಗ ಅವಳ ಮೋರೆ ನನಗೆ ಕಾಣುತಿತ್ತು........' ಎಂದನು.

ರಿಚರ್ಡ್ ಅಷ್ಟಕ್ಕೆ ಮಾತು ನಿಲ್ಲಿಸಿದನು. ಅವನ ಸಮ್ಮುಖದಲ್ಲಿ 'ಕೊನೆಯ ತೀರ್ಪು' ಎಂಬ ವರ್ಣ ಚಿತ್ರವು ತೂಗಾಡುತಿತ್ತು. ಗುಂಗುರು ಕೂದಲಿನ ಎಳೆ ಬಾಲಕರು ತುತೂರಿ ಹಿಡಿದುಕೊಂಡು ಸಿಡಿಲು ಮಿಂಚುಗಳಿಂದ ಪ್ರಕಾಶಮಾನವಾದ ಆಕಾಶದಲ್ಲಿ ತುತೂರಿಯ ನ್ನೂದುತ್ತ ತೆರಳುವ ದೃಶ್ಯ. ರಿಚರ್ಡನ ಎಡಗಡೆ ಜರ್ಮನ್ ಚಿತ್ರಕಾರನು ಬರೆದ ರೇಖಾಚಿತ್ರದ ಅಪರಭಾಗವು ಕಾಣಿಸುತಿತ್ತು. ಏಸು ಪ್ರಭುವಿನ ತಾಯಿ ಮರಿಯಮ್ಮನು ನೀಳವಾದ ಕರಗಳನ್ನು ಜೋಗುಣಿಯ ಆಕೃತಿಯಲ್ಲಿ ಮೇಲಕ್ಕೆ ಎತ್ತಿ ಹಿಡಿದಿದ್ದಳು; ಅವಳ ಹಿಂದುಗಡೆ ಅಡ್ಡ ರೇಖೆಗಳಿಂದ ಕಲಾಕಾರನು ಆಕಾಶದ ಹಿನ್ನೆಲೆಯನ್ನಿರಿಸಿದ್ದನು—ಚಿತ್ರವಲ್ಲಿ ರುಬಷೊವಗೆ ಕಾಣಿಸುತ್ತಿದ್ದ ಅಂಶ ಇಷ್ಟೆ, ಉಳಿದ ಭಾಗಕ್ಕೆ ರಿಚರ್ಡನ ತಲೆ ಅಡ್ಡವಾಗಿತ್ತು.

'ಹೌದೇನು, ನಿನ್ನ ಹೆಂಡತಿಯ ವಯಸ್ಸೆಷ್ಟು?' ಎಂದು ರುಬಷೊವ ಕೇಳಿದನು.

'ಹದಿನೇಳು' ಎಂದ ರಿಚರ್ಡ.

'ಹೌದೇ? ನಿನ್ನ ವಯಸ್ಸೆಷ್ಟು?'

'ಹತ್ತೊಂಭತ್ತು' ಎಂದ ರಿಚರ್ಡ.

'ಮಕ್ಕಳು?' ಎಂದು ಕೇಳಿ ರುಬಷೊವ ಕತ್ತನ್ನು ಉದ್ದಮಾಡಿ ರೇಖಾಚಿತ್ರದ ಉಳಿದಂಶವನ್ನು ಕಾಣಲು ಹವಣಿಸಿದನು. ಆದರೆ ಪ್ರಯೋಜನವಾಗಲಿಲ್ಲ.

'ಚೊಚ್ಚಲು ಕೂಸು ಬರುವುದರಲ್ಲಿದೆ' ಎಂದು ಹೇಳಿ ರಿಚರ್ಡ ಎರಕಹೊಯ್ದ ಗೊಂಬೆಯಂತೆ ನಿಶ್ಚಲನಾಗಿ ಕೂತುಕೊಂಡನು.

ಸ್ವಲ್ಪ ಹೊತ್ತು ಕಳೆದು ರುಬಷೋವ ಪಾರ್ಟಿ ಸದಸ್ಯರ ಹೆಸರನ್ನು ಚ್ಚರಿಸುವಂತೆ ರಿಚರ್ಡನಿಗೆ ಹೇಳಿದನು. ಸುಮಾರು ಮೂವತ್ತು ಹೆಸರಿನ ಯಾದಿಯನ್ನು ರಿಚರ್ಡ ಒಪ್ಪಿಸಿದನು. ರುಬಷೋವ ಕೆಲವು ಪ್ರಶ್ನೆಗಳನ್ನು ಕೇಳಿ ದಂತವೈದ್ಯನ ಉಪಕರಣಗಳ ಡಚ್ ಫರ್ಮಿನ ಆರ್ಡರು ಪುಸ್ತಕ ದಲ್ಲಿ ಕೆಲ ವಿಳಾಸಗಳನ್ನು ನಮೂದಿಸಿಕೊಂಡನು. ಅದೇ ಊರಿನ ದಂತ ವೈದ್ಯರ ಮತ್ತು ಮರ್ಯಾದೆವಂತ ನಾಗರಿಕರ ಹೆಸರುಗಳನ್ನು ಟೆಲಿಫೋನ್ ಸೂಚಿಯಿಂದ ತಿಳಿದು ಆ ಪುಸ್ತಕವಲ್ಲಿ ಮೊದಲೇ ಬರೆಯಲಾಗಿತ್ತು. ಆ ಹೆಸರುಗಳ ಮಧ್ಯೆ ಇರುವ ಖಾಲಿ ಸ್ಥಳಗಳಲ್ಲಿ ರಿಚರ್ಡ ಹೇಳಿದ ವಿಳಾಸಗಳನ್ನು ಸೇರಿಸಿಕೊಂಡನು. ಆ ಕೆಲಸ ಮುಗಿದ ಮೇಲೆ 'ಇನ್ನು ನಮ್ಮ ಕೆಲಸದ ಸಂಕ್ಷಿಪ್ತ ವರದಿಯನ್ನು ನಿಮಗೆ ಒಪ್ಪಿಸುತ್ತೇನೆ, ಕಾಮ್ರೇಡ್' ಎಂದು ರಿಚರ್ಡ ಹೇಳಿದನು. ರುಬಷೋವ 'ಸರಿ, ನಾನು ಕೇಳಲು ಸಿದ್ಧನಾಗಿದ್ದೇನೆ' ಎಂದು ಮರುನುಡಿದನು.

ಕೂತಲ್ಲಿಂದ ಒಂದಿಷ್ಟು ಅಲುಗದೆ, ಕೆಂಪಾದ ಹಸ್ತಗಳನ್ನು ಕರಿ ಉಡುಪಿನ ಮೇಲೆ ಇರಿಸಿಕೊಂಡು, ತುಸು ಮುಂದಕ್ಕೆ ಸರಿದು, ರುಬಷೊ ವಗೆ ಎರಡಡಿ ದೂರದಲ್ಲಿ ರಿಚರ್ಡ ತನ್ನ ವರದಿಯನ್ನೊಪ್ಪಿಸಿದನು. ಅಂಗಡಿಯ ಗುಮಾಸ್ತೆ ಸಾಮಾನಿನ ಪಟ್ಟಿಯ ಹೆಸರು ಉರುಳಿಸುವಂತೆ ಚಿಮಣಿಯ ಮೇಲಿನ ಧ್ವಜಗಳು, ಗೋಡೆಯ ಮೇಲೆ ಬರೆದ ಘೋಷಣೆ ಗಳು, ಪಾಯಖಾನೆಯಲ್ಲಿ ಪ್ರಚಾರಮಾಡಿದ ಪ್ರಕಟನೆಗಳು, ಪ್ರತಿಯೊಂದರ ಕುರಿತು ವಿವರವಾಗಿ ತಿಳಿಸಿದನು. ಮುಂದುಗಡೆಯಲ್ಲಿ ಮಿಂಚಿನ ಲೋಕಕ್ಕೆ ಪಯಣ ಬೆಳೆಸುವ ದೇವಬಾಲಕರು, ಹಿಂದುಗಡೆ ಯಲ್ಲಿ ಕುಮಾರಿ ಮರಿಯಮ್ಮನ ಸೊರಗಿದ ಕೈಗಳು, ಸುತ್ತುಮುತ್ತಲೂ ಪರ್ವತೋಪಮಸ್ತನ, ತೊಡೆ, ಜಘನಗಳು ರಿಚರ್ಡನನ್ನೇ ದಿಟ್ಟಿಸಿ ನೋಡುತ್ತಿದ್ದುವು.

ಮಧ್ಯಪಾತ್ರೆಯೊಳಗೆ ಹಿಡಿಸುವ ಗಾತ್ರದ ಸ್ತನಗಳ ನೆನಪಾ ಯಿತು ರುಬಷೋವನಿಗೆ. ಕಿಟಿಕಿಯಿಂದ ಮೂರನೆ ಹಾಸುಗಲ್ಲಿನ ಮೇಲೆ

ನಿಂತು ೪೦೩ ನಂಬರದ ಕೋಣೆಯುವನು ಇನ್ನು ಏನಾದರೂ ತಟ್ಟು ತ್ತಿರಬಹುದೇ ಎಂದು ಆತ ಆಲಿಸುತ್ತಿದ್ದನು. ಸದ್ದಿಲ್ಲ. ಬಾಗಿಲ ತೂತಿಗೆ ಕಣ್ಣಿಟ್ಟು ೪೦೭ರ ಕಡೆಗೆ ನೋಡಿದರೆ ಅಲ್ಲಿ ಇಕ್ಕಿದ ಕದ ಮತ್ತು ತೂತಿನ ಹೊರತು ಬೇರೇನೂ ಕಾಣಿಸಲಿಲ್ಲ. ಮೊಗ ಸಾಲೆಯಲ್ಲಿ ಎಂದಿನಂತೆ ವಿದ್ಯುದ್ದೀಪ ಉರಿಯುತ್ತಲೇ ಇತ್ತು. ಎಲ್ಲೆ ಲ್ಲಿಯೂ ಮೌನ. ಅಂಥ ಮೌನದಲ್ಲಿ ಈ ಕೋಣೆಗಳಲ್ಲಿ ಮನುಷ್ಯರು ಇರಬಹುದೆಂದು ನಂಬಲಸಾಧ್ಯವಾಗಿತ್ತು.

ತರುಣನಾದ ರಿಚರ್ಡ ತನ್ನ ವರದಿಯನ್ನು ಕೂಲಂಕಷವಾಗಿ ಒಪ್ಪಿಸುವಾಗ ರುಬಷೊವ ಆತನನ್ನು ನಡುವೆ ಎಲ್ಲಿಯೂ ತಡೆಯಲಿಲ್ಲ. ಗಂಡಾಂತರದ ಅನಂತರ ರಿಚರ್ಡ ಒಟ್ಟುಸೇರಿಸಿದ ಮೂವತ್ತು ಮಂದಿ ಯಲ್ಲಿ ಹದಿನೇಳು ಮಾತ್ರ ಉಳಿದಿದ್ದರು. ಗಿರಣಿ ಮಜೂರ ಒಬ್ಬನು ಮತ್ತು ಅವನ ಪ್ರೇಯಸಿ ಪೋಲೀಸರು ಸೆರೆಹಿಡಿಯಲು ಬಂದಾಗ ಕಿಟಕಿಯಿಂದ ಹಾರಿ ಪ್ರಾಣ ತೆಗೆದುಕೊಂಡಿದ್ದರು. ಒಬ್ಬ ಊರುಬಿಟ್ಟು ಪರಾರಿಯಾಗಿದ್ದನು. ಇಬ್ಬರ ಮೇಲೆ ಪೋಲೀಸರಿಗೆ ಹೇಳಿಕೊಡುವ ಗುಪ್ತಚಾರರೆಂಬ ಸಂದೇಹವಿತ್ತು. ಮೂವರು ಕೇಂದ್ರಸಮಿತಿಯ ಧೋರಣೆಯನ್ನೊಪ್ಪದೆ ಪಕ್ಷವನ್ನು ತ್ಯಜಿಸಿದ್ದರು. ಅವರಲ್ಲಿಬ್ಬರು ಹೊಸ ವಿರೋಧಿ ಬಣವನ್ನೇ ನಿರ್ಮಿಸಿದ್ದರು, ಒಬ್ಬನು ಮುಂದಗಾಮಿ ಗಳನ್ನು ಕೂಡಿದ್ದನು. ಐವರು ಹಿಂದಿನ ರಾತ್ರಿ ಸೆರೆಬಿದ್ದಿದ್ದರು, ಅವರಲ್ಲಿ ಆ್ಯನ್ನಿ ಒಬ್ಬಳು; ಈ ಐವರಲ್ಲಿಬ್ಬರ ಕಥೆ ಇಷ್ಟುಹೊತ್ತಿಗೇ ಮುಗಿದಿರ ಬೇಕು. ಆದುದರಿಂದ ಪ್ರಕಟನೆಗಳನ್ನು ಹಂಚುವುದಕ್ಕೂ, ಗೋಡೆಯ ಮೇಲೆ ಗೀಚುವುದಕ್ಕೂ ಉಳಿದವರು ಹದಿನೇಳೇ ಮಂದಿ.

ವ್ಯಕ್ತಿಸಂಬಂಧಗಳೂ, ಕಾರಣಗಳೂ ರುಬಷೊವಗೆ ಮುಂದಟ್ಟಾಗು ವಂತೆ ರಿಚರ್ಡ ಎಲ್ಲವನ್ನೂ ಬಿಡಿಸಿ ಬಿಡಿಸಿ ಹೇಳುತ್ತಿದ್ದನು. ತನ್ನ ಗುಂಪಿನ ಒಬ್ಬನು ಕೇಂದ್ರಸಮಿತಿಯ ಹಸ್ತಕನಾಗಿ ಇಷ್ಟರಲ್ಲಿ ಎಲ್ಲ ವಿಚಾರವನ್ನೂ ಅಲ್ಲಿಗೆ ವರದಿಮಾಡಿರುವನೆಂದು ರಿಚರ್ಡನಿಗೆ ಏನು ಗೊತ್ತು? ತನ್ನ ಆಪ್ತಸ್ನೇಹಿತ ಸಿನಿಮಾಚಾಲಕನೇ ಈ ರೀತಿ ಕೇಂದ್ರ ಸಮಿತಿಯ ಗುಪ್ತಚಾರನೆಂಬುದೂ, ತನ್ನ ಹೆಂಡತಿ ಆ್ಯನ್ನಿಯೂ ಆತನ

ಪ್ರೇಯಸಿಯಾಗಿ ವರ್ತಿಸುತ್ತಿದ್ದಳೆಂಬುದೂ ರಿಚರ್ಡನಿಗೆ ಅರಿವಿರಲಿಲ್ಲ. ಆದರೆ ರುಬಷೊವನಿಗೆ ಈ ಸಂಗತಿಗಳೆಲ್ಲ ಗೊತ್ತಿದ್ದುವು. ಚಳವಳವು ಭಗ್ನವಾಗಿದ್ದರೂ ಅದರ **ವಾರ್ತೆ** ಮತ್ತು **ನಿಯಂತ್ರಣ** ಖಾತೆಗಳು ಸಕ್ರಿಯ ಸ್ಥಿತಿಯಲ್ಲಿದ್ದುವು; ಚಳವಳದಲ್ಲಿ ಸಜೀವವಾಗಿದ್ದ ಈ ಸುದ್ದಿ ವಿಭಾಗಕ್ಕೆ ರುಬಷೊವ ಮುಖ್ಯಸ್ಥನು. ಭಾನುವಾರದ ಉಡುಪನ್ನು ಧರಿಸಿದ ಆ ನಿರ್ಬೋಧ ತರುಣನಿಗೆ ಇದು ಯಾವುದೂ ತಿಳಿಯದು. ಅವನ ಮನಸ್ಸಿನಲ್ಲಿ ಆ್ಯನ್ನಿಯನ್ನು ಪೋಲೀಸರು ಒಯ್ದುದೂ, ಇನ್ನು ಮೇಲೆ ತಾನೊಬ್ಬನೇ ಪ್ರಕಟನೆ ಹಂಚುವ ಮತ್ತು ಗೋಡೆಯಲ್ಲಿ ಗೀಚುವ ಕೆಲಸ ಮಾಡಬೇಕಾದದ್ದೂ, ಪಾರ್ಟಿಯ ಕೇಂದ್ರ ಸಮಿತಿಯಿಂದ ಆಗಮಿಸಿದ ಕಾಮ್ರೇಡ್ ರುಬಷೊವನನ್ನು ಸ್ವಂತ ತಂದೆಯಂತೆ ವಿಶ್ವಾಸಪೂರ್ವಕ ಗ್ರಹಿಸಬೇಕೆಂಬುದೂ, ತನ್ನ ನಿಶ್ಶಕ್ತಿಯನ್ನು ಮಾತ್ರ ರುಬಷೊವನ ಮುಂದೆ ಎಷ್ಟುಮಾತ್ರಕ್ಕೂ ಪ್ರದರ್ಶಿಸತಕ್ಕುದಲ್ಲವೆಂಬುದೂ, ದೃಢವಾಗಿ ಬೇರೂರಿತ್ತು. ಭಾವೋದ್ರೇಕಕ್ಕೆ ತುತ್ತಾಗುವ ಕೋಮಲಹೃದಯಿಗಳಿಗೆ ಚಳುವಳಿಯಲ್ಲಿ ಸ್ಥಾನವಿಲ್ಲ. ಅವರನ್ನು ಪಕ್ಷದ ಹೊರಗಿನ ಏಕಾಂತ–ಅಂಧಕಾರದೊಳಗೆ ದಬ್ಬುವುದು ಅನಿವಾರ್ಯವೆಂಬ ವಿಷಯ ರಿಚರ್ಡನಿಗೆ ತಿಳಿದಿತ್ತು.

ಹೊರಗೆ ಹೆಜ್ಜೆಯ ಸಪ್ಪಳ ಕೇಳಿಸಿತು. ರುಬಷೊವ ಬಾಗಿಲ ತೂತಿನಲ್ಲಿ ಕಣ್ಣಿರಿಸಿದನು. ಚರ್ಮದ ರಿವಾಲ್ವರ ಬೆಲ್ಟಿನ ಸಿಪಾಯಿಗಳಿಬ್ಬರು ರೈತ ಯುವಕನೊಬ್ಬನನ್ನು ನಡೆಯಲ್ಲಿ ಒಯ್ಯುತ್ತಿದ್ದರು. ಅವರ ಹಿಂದಿನಲ್ಲಿ ಬೀಗದ ಕೈಗೊಂಚಲನ್ನು ಹಿಡಿದುಕೊಂಡು ಕಾವಲುಗಾರನು ಬರುತ್ತಿದ್ದನು. ರೈತ ಯುವಕನ ಕಣ್ಣುಗಳು ಬಾತು ಹೋಗಿದ್ದುವು. ತುಟಿಯಲ್ಲಿ ಒಣಗಿದ ರಕ್ತ ತೋರುತಿತ್ತು; ನೆತ್ತರು ಸುರಿಯುತ್ತಿದ್ದ ಮೂಗನ್ನು ಆತ ಅಂಗಿಯ ತೋಳಿಂದ ಒರಸಿಕೊಳ್ಳುತ್ತಿದ್ದನು. ಅವನ ಮುಖವು ವಿವರ್ಣವಾಗಿತ್ತು. ಭಾವರಹಿತವಾಗಿತ್ತು. ಅವನನ್ನು ದೂರದ ಒಂದು ಕೋಣೆಗೆ ಸೇರಿಸಿ ಕಾವಲುಗಾರನೂ, ಸಿಪಾಯಿಗಳೂ ಮರಳಿದರು.

ರುಬಷೊವ ತನ್ನ ಕೋಣೆಯಲ್ಲಿ ಅತ್ತಿತ್ತ ಹೆಜ್ಜೆ ಹಾಕಿದನು. ಅವನ ಮನಸ್ಸಿನಲ್ಲಿ ವಸ್ತು ಸಂಗ್ರಹಾಲಯದ ಸೋಫದ ಚಿತ್ರವೂ, ರಿಚರ್ಡ್ ತನ್ನ ವರದಿ ಮುಗಿಸಿದ ತರುವಾಯ ಅಲ್ಲಿ ವ್ಯಾಪಿಸಿದ ಮೌನದ ಚಿತ್ರವೂ ಮತ್ತೆ ಸುಳಿದುವು. ರಿಚರ್ಡ್ ಒಂದಿಷ್ಟೂ ಕದಲದೆ ಕೈಗಳನ್ನು ಮೊಣಗಂಟಿನಲ್ಲಿರಿಸಿ ರುಬಷೊವನ ಬಾಯಿಯಿಂದ ಏನು ಹೊರಡುವುದೋ ಎಂದು ನಿರೀಕ್ಷಿಸುತ್ತಿದ್ದನು. ತನ್ನ ಪಾಪ ಮತ್ತು ಅಪರಾಧಗಳನ್ನೊಪ್ಪಿಕೊಂಡ ಕ್ರಿಶ್ಚಾನುಯಾಯಿ ಪಾದರಿಯ ತೀರ್ಪಿಗೆ ಕಾಯುವಂತೆ ಆತ ಕೂತಿದ್ದನು. ಬಹಳ ಹೊತ್ತಿನ ವರೆಗೆ ರುಬಷೊವ ಮೌನವಾಗಿದ್ದು ತದನಂತರ ‘ಇಷ್ಟೇ ತಾನೇ?’ ಎಂದು ಕೇಳಿದನು.

‘ನಿನ್ನ ವರದಿಯಲ್ಲಿದ್ದ ಅನೇಕ ವಿಷಯಗಳು ನನಗೆ ಸ್ಪಷ್ಟವಾಗಲಿಲ್ಲ. ಪ್ರಕಟಣೆಗಳನ್ನು ನೀವೇ ತಯಾರಿಸಿದ ವಿಷಯ ನಮಗೆ ಗೊತ್ತಿದೆ. ಅದರಲ್ಲಿ ಅಡಕವಾದ ವಿಷಯಗಳನ್ನೂ, ಧೋರಣೆಯನ್ನೂ ಪಕ್ಷದಲ್ಲಿ ಬಲವಾಗಿ ಟೀಕಿಸುವ ಪ್ರಸಂಗ ಬಂದಿತ್ತು. ಅದರಲ್ಲಿನ ಹಲವು ಪದಗಳನ್ನೂ, ಪದಪುಂಜಗಳನ್ನೂ ಪಕ್ಷವು ಸ್ವೀಕಾರ ಮಾಡುವಂತಿಲ್ಲ’ ಎಂದು ರುಬಷೊವ ಮಾತು ಮುಂದುವರಿಸಿದಾಗ ರಿಚರ್ಡ್ ಭಯದಿಂದ ಕೆಂಪಾದನು. ಆತನ ಕೆನ್ನೆಯ ಮೇಲಿನ ತೆಳುವಾದ ಚರ್ಮವು ಬಿಸಿ ಏರಿದುದನ್ನೂ, ಕಣ್ಣುಗುಡ್ಡೆಯ ರಕ್ತನಾಳಗಳಲ್ಲಿ ರಕ್ತದ ಒತ್ತಡವು ಅಧಿಕವಾದುದನ್ನು ರುಬಷೊವ ಗಮನಿಸಿದನು.

‘ಅಷ್ಟಲ್ಲದೆ ನಾವು ಮೇಲಿಂದ ಮೇಲೆ ನಮ್ಮ ಮುದ್ರಿತ ಪ್ರಕಟಣೆಗಳನ್ನು ನಿಮಗೆ ವಿತರಣೆಗಾಗಿ ಕಳಿಸಿದ್ದೆವು. ಅವುಗಳಲ್ಲಿ ಪಾರ್ಟಿಯ ಅಧಿಕೃತ ಪತ್ರಿಕೆಯ ವಿಶೇಷ ಸಂಚಿಕೆಗಳೂ ಇರುತ್ತಿದ್ದುವು. ಇವೆಲ್ಲ ನಿಮಗೆ ಮುಟ್ಟಿರುವುದನ್ನು ನಾವು ಬಲ್ಲೆವು’.

ರಿಚರ್ಡ್ ಹೌದೆಂದು ಗೋಣಲ್ಲಾಡಿಸಿದನು, ಆದರೆ ಮುಖದ ಬಿಸುಪು ಇಳಿಯಲಿಲ್ಲ.

‘ಆದರೆ ನಮ್ಮ ಪ್ರಕಟಣೆಗಳನ್ನು ನೀವು ವಿತರಣೆಮಾಡಲಿಲ್ಲ. ಸಾಲದುದಕ್ಕೆ ನಿಮ್ಮ ವರದಿಯಲ್ಲಿ ಇದರ ಪ್ರಸ್ತಾಪವೇ ಕಾಣಲಿಲ್ಲ.

ಬದಲು ಪಾರ್ಟಿಯ ನಿಯಂತ್ರಣ ಅಥವಾ ಒಪ್ಪಿಗೆ ಇಲ್ಲದಂತಹ ನಿಮ್ಮ ಪ್ರಕಟಣೆಗಳನ್ನೇ ನೀವು ಪ್ರಚಾರ ಮಾಡುತ್ತಿದ್ದಿರಿ.'

'ಅ-ಆದರೆ ನಾವು ಹಾಗೆ ಮಾಡಬೇಕಾಗಿತ್ತು' ಎಂಬ ಮಾತು ರಿಚರ್ಡನ ಬಾಯಿಂದ ಪ್ರಯತ್ನಪೂರ್ವಕವಾಗಿ ಹೊರಟಿತು. ಕನ್ನಡಕದ ಮೂಲಕ ತರುಣನನ್ನು ತೀಕ್ಷ್ಣ ನೇತ್ರಗಳಿಂದ ನೋಡುತ್ತಿದ್ದ ರುಬಷೊವಗೆ ಹುಡುಗನಿಗೆ ಉಗ್ಗು ಇದೆ ಎಂಬ ವಿಷಯ ಗೋಚರಕ್ಕೆ ಬಂದಿತು. 'ವಿಚಿತ್ರವಾಗಿದೆ, ಈ ಎರಡು ವಾರಗಳಲ್ಲಿ ಇದು ಮೂರನೆಯ ಸಲ. ಪಾರ್ಟಿಯಲ್ಲಿ ಇಂಥ ಪಥಭ್ರಷ್ಟರ ಸಂಖ್ಯೆ ಸಾಕಷ್ಟಿದೆ. ನಾವು ಕೆಲಸಮಾಡಬೇಕಾದ ಪರಿಸ್ಥಿತಿಯಿಂದಲೋ ಅಥವಾ ಚಳವಳಿಯಲ್ಲಿ ಪಥಭ್ರಷ್ಟರಿಗೇ ಉತ್ತೇಜನ ದೊರೆಯುವುದರಿಂದಲೋ - ಅಂತೂ ಅವರ ಸಂಖ್ಯೆ ಸಾಕಷ್ಟು ಪ್ರಬಲವಾಗಿದೆ.......' ಎಂದು ರುಬಷೊವ ತನ್ನಷ್ಟಕ್ಕೆ ಚಿಂತಿಸಿದನು.

'ಕ-ಕಾಮ್ರೇಡ್, ನಿಮ್ಮ ಪ್ರಚಾರ ಪ್ರಕಟಣೆಗಳ ಧ್ವನಿ ಸರಿಯಾಗಿರಲಿಲ್ಲ, ಎ-ಏಕೆಂದರೆ—' ರಿಚರ್ಡ ವ್ಯಥೆಯಿಂದ ನುಡಿದನು.

ರುಬಷೊವ ತೀವ್ರಸ್ವರದಲ್ಲಿ 'ಮೆಲ್ಲಗೆ ಮಾತಾಡು. ಕತ್ತು ತಿರುಗಿಸಿ ಬಾಗಿಲ ಕಡೆ ನೋಡುತ್ತಾ ಇರಬೇಡ' ಎಂದನು.

ಆಧಿಪತ್ಯದ ಅಂಗರಕ್ಷಕನ ಕರಿಯ ಸಮವಸ್ತ್ರವನ್ನು ಧರಿಸಿದ ಒಬ್ಬ ತರುಣ ಸಿಪಾಯಿ ತನ್ನ ಪ್ರೇಯಸಿಯ ಸಂಗಡ ಚಿತ್ರಶಾಲೆಯನ್ನು ಪ್ರವೇಶಿಸಿದನು. ಹುಡುಗಿ ದಪ್ಪವಾಗಿ ಬೆಳ್ಳಗಿದ್ದಳು. ಅವಳ ವಿಶಾಲವಾದ ಬೆನ್ನನ್ನು ಆತನ ಕೈ ಸುತ್ತಿಕೊಂಡಿತ್ತು, ಅವಳು ತೋಳಿನಿಂದ ಅವನ ಹೆಗಲನ್ನು ಹಿಡಿದಿದ್ದಳು. ಅವರಿಬ್ಬರೂ ರುಬಷೊವ ಮತ್ತು ಅವನ ಸಂಗಾತಿಯ ಕಡೆಗೆ ಲಕ್ಷ್ಯವಿಲ್ಲದೆಯೆ ತುತೂರಿಯ ದೇವಬಾಲಕರ ಚಿತ್ರದ ಮುಂದೆ ಸೋಫಕ್ಕೆ ಬೆನ್ನು ಹಾಕಿ ನಿಂತು ಅದನ್ನು ನೋಡುತ್ತಿದ್ದರು.

ತಗ್ಗಿದ ಧ್ವನಿಯಲ್ಲಿ ರುಬಷೊವ ಸಾವಕಾಶವಾಗಿ 'ಮಾತು ನಿಲ್ಲಿಸಬೇಡ, ಮುಂದುವರಿಸು' ಎಂದು ಹೇಳಿ ಜೇಬಿನಿಂದ ಸಿಗರೇಟ ಕೇಸನ್ನು ಯಂತ್ರವತ್ ಹೊರಗೆಳೆದನು. ವಸ್ತು ಸಂಗ್ರಹಾಲಯದಲ್ಲಿ ಸಿಗರೇಟ

ನೇಮವುವುದು ನಿಷೇಧವೆಂಬುದು ಹೊಳೆದ ಕೂಡಲೇ ಅದನ್ನು ಮತ್ತೆ ಜೇಬಿಗೆ ಸೇರಿಸಿದನು. ತರುಣ ರಿಚರ್ಡ ವಿದ್ಯುತ್ತು ಬಡಿದವರಂತೆ ಅಚಲನಾಗಿ ನವಾಗಂತುಕರನ್ನು ನೋಡುತ್ತಿದ್ದನು. 'ಮಾತು ಮುಂದಕ್ಕೆ ಹೋಗಲಿ' ಎಂದು ರುಬಷೊವ ಮೆಲ್ಲನೆ ಎಚ್ಚರಿಸಿದನು. 'ಮಗುವಾಗಿದ್ದಾಗಿನಿಂದಲೂ ಇಂಥ ಉಗ್ಗಿತ್ತೇ ನಿನಗೆ? ಜವಾಬು ಕೊಡು. ಆ ಕಡೆಗೆ ನೋಡದಿರು' ಎಂದು ಅವನ ಬಾಯಿ ತೆರೆಯಿಸುವ ಯತ್ನ ಮಾಡಿದನು.

ಅತ್ಯಂತ ಪ್ರಯತ್ನಪೂರ್ವಕವಾಗಿ, 'ಒ-ಒ-ಮ್ಮೊ-ಮ್ಮೆ ಎಂಬ ಮಾತು ರಿಚರ್ಡನಿಂದ ಹೊರಟಿತು.

ಆ ಇಬ್ಬರು ಚಿತ್ರಗಳ ಸಾಲನ್ನು ನೋಡುತ್ತ ಮುಂದುವರಿದರು; ಮಖಮಲ್ಲಿನ ಸುಪ್ಪತ್ತಿಗೆಯಲ್ಲಿ ಕೂತು ಪ್ರೇಕ್ಷಕರನ್ನೇ ದಿಟ್ಟಿಸುವಂತಿದ್ದ ಒಬ್ಬ ತೋರ ಹೆಂಗಸಿನ ನಗ್ನ ಚಿತ್ರದ ಮುಂದೆ ನಿಂತರು. ಯುವಕನು ಏನೋ ಮೋಜಿನ ಮಾತು ಹೇಳಿದನೆಂದು ತೋರುತ್ತದೆ, ಯುವತಿ ಕುಲು ಕುಲು ನಕ್ಕು ಸೋಫದಲ್ಲಿ ಕೂತ ಇವರ ಕಡೆ ನೋಡಿದಳು. ಆ ಮೇಲೆ ಅವರು ಮೃತ ಸೀಮೆಕೋಳಿಯ ಚಿತ್ರದತ್ತ ತೆರಳಿದರು.

'ಇನ್ನು ನಾವು ಹೊರಟರೆ ಒಳ್ಳೆಯದಿತ್ತಲ್ಲವೆ?' ಎಂದು ರಿಚರ್ಡ ಕೇಳಿದನು.

ರುಬಷೊವ 'ಬೇಡ ಎಂದನು.

ಹೊರಟು ನಿಂತೊಡನೆ ಹುಡುಗನು ಪಕ್ಕಲಿಂದ ಹೊಸದಾಗಿ ಬಂದವರ ಧ್ಯಾನವನ್ನು ಆಕರ್ಷಿಸಬಹುದೆಂದು ಭಾವಿಸಿ 'ಅವರೇನು ಹೊರಟುಹೋಗುತ್ತಾರೆ. ನಾವು ಬೆಳಕಿಗೆ ಅಡ್ಡವಾಗಿರುವುದರಿಂದ ಅವರಿಗೆ ಸರಿಯಾಗಿ ಕಾಣಿಸೆವು. ಒಂದಷ್ಟು ಸಲ ನಿಧಾನವಾಗಿಯೂ, ದೀರ್ಘವಾಗಿಯೂ ಶ್ವಾಸ ಬಿಟ್ಟರೆ ನಿನ್ನ ಉದ್ವೇಗ ಆರುತ್ತದೆ' ಎಂದನು.

ಹುಡುಗಿ ನಗುತ್ತಿದ್ದಳು. ಇನ್ನೇನು ಹೊಸಲು ದಾಟಿ ಅವರು ಹೊರಟರು ಎನ್ನುವಾಗ ಆಕೆ ರಿಚರ್ಡನ ಹಿಂದುಗಡೆಯಲ್ಲಿದ್ದ 'ಪೇತಾ' ಚಿತ್ರಕ್ಕೆ ಕೈತೋರಿಸಿದುದರಿಂದ ಅದನ್ನು ನೋಡಲು ಅವರು ಬಾಗಿಲಲ್ಲೇ ಸ್ವಲ್ಪಹೊತ್ತು ನಿಂತರು. 'ನನ್ನ ಉ-ಉಗ್ಗಲು ಎದ್ದು ತೋ-ತೋರುತ್ತಿ

ದೆಯೇ?' ಎಂದು ಮೋರೆ ತಗ್ಗಿಸಿಕೊಂಡು ನೆಲದ ಮೇಲೆಯೇ ಬದ್ಧ ದೃಷ್ಟಿಯುಳ್ಳವನಾಗಿ ರಿಚರ್ಡ ಪ್ರಯಾಸದಿಂದ ಕೇಳಿದನು.

'ತನ್ನನ್ನು ತಾನು ಅಂಕೆಯಲ್ಲಿಟ್ಟುಕೊಂಡಿರಬೇಕು' ಎಂದ ರುಬಷೊವ. ಅವನಿಗೆ ಗೆಳೆತನದ ಮಾತುಗಳು ಬೇಕಾಗಿರಲಿಲ್ಲ.

'ಕ್ಷ-ಕ್ಷಣದಲ್ಲಿ ಸ-ಸರಿಹೋಗುತ್ತದೆ. ಆ್ಯನ್ನಿಗೆ ಇದೊಂದು ಯಾವಾಗಲೂ ನಗುವಿನ ವಿಷಯವಾಗಿತ್ತು' ಎಂದು ರಿಚರ್ಡ ನೀರು ನುಂಗುತ್ತ ಹೇಳಿದನು.

ಹೊಸಬರು ಕೋಣೆಯಲ್ಲಿರುವ ವರೆಗೆ ಏನು ಮಾಡಿದರೂ ಸಂವಾದ ಮುಂದುವರಿಯುವುದು ಶಕ್ಯವಿದ್ದಿಲ್ಲ. ರುಬಷೊವ ಕೂತಲ್ಲಿಂದ ಏಳುವಂತೆಯೂ ಇರಲಿಲ್ಲ. ಇಬ್ಬರಿಗೂ ಸಾಮಾನ್ಯವಾದ ಈ ಅಪಾಯ ಪ್ರಸಂಗದಲ್ಲಿ ರಿಚರ್ಡನ ಸಂಕೋಚವು ಸ್ವಲ್ಪಮಟ್ಟಿಗೆ ಇಂಗಿತು, ಅವನು ರುಬಷೊವನ ಪಕ್ಕಕ್ಕೆ ಸರಿದನು.

'ಆದರೂ ಅವಳಿಗೆ ನಾನೆಂದರೆ ಬ-ಬಹಳ ಪ್ರೀತಿ. ಅವಳನ್ನು ಹಿಡಿದುಕೊಳ್ಳುವುದೇ ನನಗೆ ತಿ-ತಿಳಿಯುತ್ತಿರಲಿಲ್ಲ. ಅವಳಿಗೆ ಮಗುವಿನಲ್ಲಿ ಮನಸ್ಸಿರಲಿಲ್ಲ, ಅ-ಆದರೆ ಉಪಾಯವೇನಿದೆ? ಆಕೆ ಗರ್ಭಿಣಿಯಾದ್ದರಿಂದ ಅವಳಿಗೆ ಹೆಚ್ಚು ತೊಂದರೆ ಕೊಡಲಿಕ್ಕಿಲ್ಲ, ಅಲ್ಲವೆ? ನನಗೇನೋ ಹಾಗನಿಸುತ್ತದೆ. ಅವರು ಗರ್ಭಿಣಿ ಸ್ತ್ರೀಯರಿಗೂ ಹೊಡೆದಾರೆಂದು ನಿಮಗೆ ತೋರುತ್ತದೆಯೆ?'

'ಅವರು' ಎನ್ನುವಾಗ ರಿಚರ್ಡ ಸಮವಸ್ತ್ರ ಧರಿಸಿದ ಆಗಂತುಕನ ಕಡೆಗೆ ಗಲ್ಲದಿಂದ ತೋರಿಸಿದನು. ಆ ಹೊತ್ತಿಗೆ ಸರಿಯಾಗಿ ನವಾಗಂತುಕನು ರಿಚರ್ಡನ ಕಡೆಗೆ ತಿರುಗಿದನು. ಒಂದು ಕ್ಷಣ ಅವರಿಬ್ಬರ ದೃಷ್ಟಿಗಳೂ ಮಿಲನವಾದುವು. ಸಮವಸ್ತ್ರಧಾರಿ ತರುಣನು ತನ್ನ ಇನಿಯಳ ಕಿವಿಯಲ್ಲೇನೋ ಉಸುರಿದನು; ಆಕೆಯೂ ತಿರುಗಿ ನೋಡಿದಳು. ರುಬಷೊವ ಸಿಗರೇಟ್ ಕೇಸಿಗೆ ಮತ್ತೊಮ್ಮೆ ಕೈಹಾಕಿದನು, ಆದರೆ ಈ ಬಾರಿ ಕಿಸೆಯೊಳಗೆಯೇ ಅದನ್ನು ಬಿಡಲಿಕ್ಕು ಬಿಟ್ಟನು. ತರುಣಿ ಇನಿಯನ ಹತ್ತಿರ ಏನೋ ಅಂದು ಅವನನ್ನು ಹೊರಕ್ಕೊಯ್ದಳು. ತರುಣನು ಸಂದೇಹಪಡುತ್ತ ನಿಧಾನವಾಗಿ ಕಾಲು ಹಾಕಿದನು. ಹೊರಗಿಂದ

ಹುಡುಗಿಯ ಕುಲುಕುಲು ನಗುವೂ ದೂರ ಸರಿಯುತ್ತಿದ್ದ ಕಾಲಿನ ಸಪ್ಪಳವೂ ಒಳಗಿನವರಿಗೆ ಕೇಳಿಸುತಿತ್ತು.

ರಿಚರ್ಡ ತನ್ನ ತಲೆಯನ್ನು ಬಾಗಿಲಕಡೆ ತಿರುಗಿಸಿ ಅವರು ಹೋಗುವುದನ್ನೇ ದಿಟ್ಟಿಸಿ ನೋಡುತ್ತಿದ್ದನು. ಕುಮಾರಿ ಮರಿಯಮ್ಮನ ಸೊರಗಿದ ಕೈಗಳು ಕ್ರೂಜೆಯ ಅಡ್ಡಕೋಲಿನ ಕಡೆಗೆ ಎತ್ತಿಕೊಂಡ ದೃಶ್ಯವು, ರುಬಷೊವಗೆ ಆಗ ಸ್ಪಷ್ಟವಾಗಿ ಕಾಣಿಸಿತು.

ರುಬಷೊವ ಗಡಿಯಾರ ನೋಡಿಕೊಂಡನು. ರಿಚರ್ಡ ಅವನ ಪಕ್ಕದಿಂದ ಸ್ವಲ್ಪ ದೂರಕ್ಕೆ ಸರಿದನು. 'ನಾವು ಯಾವುದಾದರೂ ಒಂದು ನಿರ್ಧಾರಕ್ಕೆ ಬರತಕ್ಕದು. ನೀನು ಹೇಳುವ ಮಾತಿನಿಂದ ನೀವು ನಾವು ಕಳಿಸಿದ ಪ್ರಕಟಣೆಗಳನ್ನು ಉದ್ದೇಶಪೂರ್ವಕವಾಗಿಯೇ ವಿತರಣೆ ಮಾಡಲಿಲ್ಲವೆಂದು ಅರ್ಥವಾಗುತ್ತದೆ. ನಿಮ್ಮ ಪ್ರಕಟಣೆಯ ಧೋರಣೆ ನಮಗೂ ಒಪ್ಪಿತವಾದ್ದಲ್ಲ. ಅಂದರೆ ಇಂಥ ಘಟನೆಗೆ ಪರಿಣಾಮವೆಂಬುದೊಂದು ಇರುವುದು ನಿಮಗೆ ಗೊತ್ತಷ್ಟೆ?' ಎಂದನು ರುಬಷೊವ.

ಕೆಂಗಣ್ಣಿನಿಂದ ರಿಚರ್ಡ ರುಬಷೊವನ ಕಡೆಗೆ ನೋಡಿ, ತಲೆ ತಗ್ಗಿಸಿದನು. 'ನಿಮ್ಮದರಲ್ಲಿ ಅರ್ಥವಿಲ್ಲದ ಮಾತುಗಳಿದ್ದುವೆಂಬುದು ನಿಮಗೆ ತಿಳಿದಿರಲಿಕ್ಕೆ ಸಾಕು.' ಎಂದು ಉಗ್ರ ಮಾಯವಾದ ಸ್ವರದಲ್ಲಿ ಹೇಳಿದನು.

'ನನಗೆ ತಿಳಿದಿಲ್ಲ' ಎಂದು ರುಬಷೊವ ಶುಷ್ಕವಾಗಿ ನುಡಿದನು.

ಆಯಾಸಿತ ಧ್ವನಿಯಲ್ಲಿ ರಿಚರ್ಡ 'ನಡೆದು ಹೋದ ಯಾವ ವಿಷಯವನ್ನೂ ತಿಳಿಯದವರಂತೆ ನೀವು ಬರೆದರೆ ನಾವೇನು ಮಾಡಲು ಬಂದೀತು? ಪಾರ್ಟಿಯನ್ನು ನಜ್ಜುಗುಜ್ಜಾಗಿ ಹೊಡೆದು ಹಾಕಿದಾಗಲೂ 'ವಿಜಯದ ಅಭೀಪ್ಸವಾದ ಸಂಕಲ್ಪ' ಎಂದು ಮೊದಲಾದ ಹಳಸಿ ಹೋದ ಸುಳ್ಳು ಘೋಷಣೆಗಳನ್ನು ನೀವು ಅಚ್ಚುಹಾಕಿ ಕಳಿಸಿದರೆ ಅದನ್ನು ಓದಿದವರು ಇಲ್ಲಿ ಅದರ ಮೇಲೆ ಉಗುಳಿಯಾರು ಎಂಬುದು ನಿಮಗೆ ತಿಳಿದಿರಬೇಕಾಗಿತ್ತು' ಎಂದನು.

ಕೆಂಪಾದ ಮುಷ್ಟಿಯ ಮೇಲೆ ಗಲ್ಲವನ್ನಿರಿಸಿ ಮುಂದಕ್ಕೆ ನಸುಬಾಗಿ ಕೂತ ಹುಡುಗನನ್ನು ರುಬಷೊವ ನೋಡಿ "ನನ್ನದಲ್ಲದ ಒಂದು ಅಭಿ

ಪ್ರಾಯವನ್ನು ನೀನು ಎರಡನೆಯ ಬಾರಿ ನನ್ನ ಮೇಲೆ ಹೊರಿಸಲು ಎಳಸುತ್ತಿರುವಿ. ಸಾಕುಮಾಡು" ಎಂದನು.

ಊದಿದ ಕಣ್ಣುಗಳಿಂದ ರಿಚರ್ಡ ನಂಬಿಕೆ ಇಲ್ಲದಂತೆ ರುಬಶೋವನ ಕಡೆಗೆ ನೋಡಿದನು. ರುಬಶೊವ ಮುಂದುವರಿದನು: 'ಪಕ್ಷಕ್ಕೆ ಇದೊಂದು ಕಠಿನ ಪರೀಕ್ಷೆಯ ಹೊತ್ತಾಗಿದೆ. ಇತರ ಕ್ರಾಂತಿಕಾರಿ ಪಾರ್ಟಿಗಳು ಇದಕ್ಕೂ ಹೆಚ್ಚಿನ ಕಷ್ಟಗಳನ್ನು ಅನುಭವಿಸಿದ್ದುಂಟು. ಅಭೇದ್ಯ ಸಂಕಲ್ಪದಿಂದಲೇ ನಮ್ಮ ಭವಿಷ್ಯವು ನಿರ್ಣೀತವಾಗತಕ್ಕದು. ಯಾರು ಈ ಸಂದರ್ಭದಲ್ಲಿ ಅಶಕ್ತಿಯನ್ನೂ, ಮಾರ್ದವವನ್ನೂ ತೋರಿಸು ವರೋ ಅವರಿಗೆ ನಮ್ಮ ಕಕ್ಷೆಯಲ್ಲಿ ಸ್ಥಳವಿಲ್ಲ. ಗಾಬರಿಯ ವಾತಾವರಣ ವನ್ನು ಹಬ್ಬಿಸುವವರು ಶತ್ರುಪಕ್ಷಕ್ಕೆ ಸೇರಿದ ಹಾಗೆಯೇ. ಜೇಕೆಂತಲೆ ಶತ್ರುಗಳ ಬಲೆಯಲ್ಲಿ ಬೀಳುವ ಈ ಅಶಕ್ತರು ಯಾವ ಉದ್ದೇಶ ಸಾಧನೆ ಗಾಗಿ ಹಾಗೆ ಮಾಡುತ್ತಾರೆನ್ನುವುದರಿಂದ ನಮ್ಮ ನಿಲುವು ವ್ಯತ್ಯಸ್ತ ವಾಗದು. ಅವರ ಒಲವು ನಮ್ಮ ಚಳವಳಿಗೆ ವಿಘಾತಕವಾದುದರಿಂದ ಅವರನ್ನು ನಾವು ನಡೆಸಿಕೊಳ್ಳುವ ರೀತಿಯೂ ಅದಕ್ಕನುಗುಣವಾಗಿಯೇ ಇರುವುದು.'

ಗಲ್ಲವನ್ನು ಕೈಯಲ್ಲಿ ಹಿಡಿದುಕೊಂಡು ರಿಚರ್ಡ ಮೆಲುವಾಗಿ ಉಸುರಿದನು: 'ಅರ್ಥಾತ್, ನಾನು ನಿಮ್ಮ ಚಳವಳಿಗೊಂದು ಅಪಾಯ ವಲ್ಲವೆ? ನಾನು ಶತ್ರುಗಳ ಕೈಗೆ ಉದ್ದಿಷ್ಟವಾಗಿ ಸಿಗುತ್ತಿದ್ದೇನಲ್ಲವೆ? ಪ್ರಾಯಃ ನನಗೆ ಅವರಿಂದ ಸಂಬಳವೂ ಬರುತ್ತಿರಬಹುದೆಂದು ತೋರು ತ್ತದೆ. ಆ್ಯನ್ನಿಗೂ ಅವರು ಸಂಬಳ ಕೊಡುತ್ತಿದ್ದರೋ ಏನೋ.'

ತನ್ನ ಅದೇ ನೀರಸವಾದ ಸ್ವರದಲ್ಲಿ ರುಬಶೊವ, 'ನೀನು ಬರೆದ ದ್ದೆಂದು ನೀನೇ ಒಪ್ಪಿಕೊಂಡಿರುವ ಪ್ರಕಟಣೆಗಳಲ್ಲಿ ನಾವು ಸೋಡಿದ್ದೇವೆ. ಪಕ್ಷವು ಗಂಡಾಂತರದಲ್ಲಿ ಸಿಲುಕಿದೆ. ನಾವು ಹೊಸ ತಳಹದಿಯ ಮೇಲೆ ಕಾರ್ಯತತ್ಪರರಾಗಬೇಕು, ನಮ್ಮ ಘೋಷಣೆಯಲ್ಲಿ ಮೂಲ ಭೂತ ಪರಿವರ್ತನೆಯಾಗಬೇಕು. ಈ ಮುಂತಾದ ಮಾತುಗ ಳನ್ನು ಬರೆದಿರುತ್ತೀ. ಇದು ನಿರಾಶಾವಾದವು. ಇದರಿಂದ ಪಕ್ಷದ ನೈತಿಕ

ಬಲ ಕುಗ್ಗುವುದು, ಹೋರಾಡುವ ಸ್ಫೂರ್ತಿಯು ಹ್ರಾಸವಾಗುವುದು.' ಎಂದು ಕಟುವಾಗಿ ನುಡಿದನು.

'ಅದೇನೋ ನಾನರಿಯೆ. ಜನರಿಗೆ ಸತ್ಯವನ್ನೇ ಹೇಳತಕ್ಕದ್ದು; ಅವರಿಗೆ ಸತ್ಯಸ್ಥಿತಿ ಮೊದಲೇ ಗೊತ್ತಿದ್ದ ಮೇಲೆ ಸುಳ್ಳಿಂದೇನು ಪ್ರಯೋಜನ, ನಟನೆ ಯಾತಕ್ಕೆ?' ಎಂದು ರಿಚರ್ಡ ಮರುನುಡಿದನು.

'ಪಕ್ಷದ ಮೊನ್ನಿನ ಕಾಂಗ್ರೆಸಿನಲ್ಲಿ ಪಕ್ಷವು ಉಪಾಯಕ್ಕೋಸ್ಕರ ನಾಲ್ಕು ಹೆಜ್ಜೆ ಹಿಂದೆ ಸರಿದುದಲ್ಲದೆ ಸೋಲಲಿಲ್ಲವೆಂದೂ, ಪೂರ್ವಸ್ಥಿತ ಧೋರಣೆಯನ್ನು ಬದಲಿಸುವ ಅಗತ್ಯವಿಲ್ಲವೆಂದೂ ನಿರ್ಣಯಾತ್ಮಕವಾಗಿ ಘೋಷಿಸಲ್ಪಟ್ಟಿದೆ.' ಎಂದು ರುಬಶೊವ ಹೇಳಿಕೆಯನ್ನು ಮುಂದುವರಿಸಿದನು.

'ಶುದ್ಧ ಸುಳ್ಳು' ಎಂದನು ರಿಚರ್ಡ.

'ನೀನು ಇದೇ ಧಾಟಿಯಲ್ಲಿ ಆಡುವುದಾದರೆ ನಾನು ಸಂಭಾಷಣೆಯನ್ನು ಇಷ್ಟಕ್ಕೆ ನಿಲ್ಲಿಸಬೇಕಾದೀತು' ಎಂದು ರುಬಶೊವ ಎಚ್ಚರಿಸಿದನು.

ರಿಚರ್ಡ ಒಂದಷ್ಟು ಹೊತ್ತು ಮೌನವಾಗಿದ್ದನು. ಚಿತ್ರದ ದೇವತೆಗಳ ಮತ್ತು ಹೆಂಗಸರ ಅಸ್ಫುಟತೆಯು ಮತ್ತಷ್ಟು ಅಧಿಕವಾಯಿತು.

'ಪಕ್ಷದ ನಾಯಕತ್ವವು ತಪ್ಪು ಮಾಡಿದೆ ಎನ್ನಲು ನನಗೆ ಖೇದವೆನಿಸುತ್ತಿದೆ. ನಮ್ಮಲ್ಲಿ ಅರ್ಧಾಂಶ ಜನರು ಸತ್ತು ಉಳಿದವರು ಬದುಕಿದೆವಲ್ಲಾ ಎಂಬ ಸಂತೋಷದಿಂದಲೂ ಉಪಕಾರಸ್ಮರಣೆಯಿಂದಲೂ ಗುಂಪು ಗುಂಪಾಗಿ ವಿರೋಧಿಗಳನ್ನು ಕೂಡಿಕೊಳ್ಳುವ ದುರ್ದಿನವು ಸಮೀಪಿಸಿರುವಾಗ ನೀವು 'ಆಯಕಟ್ಟಿನ ಪರಾವರ್ತನೆ' ಎಂದು ಏನೇನೋ ನೆಪ ಹೇಳುತ್ತಿರುವಿರಿ. ಕೂದಲೆಳೆಯನ್ನು ಸೀಳುವಂಥ ನಿಮ್ಮ ಸೂಕ್ಷ್ಮ ಶರಾವುಗಳು ನಮ್ಮ ಜನಕ್ಕೆ ಅರ್ಥವಾಗುವುದಿಲ್ಲ........'

ರಿಚರ್ಡನ ಆಕೃತಿಯೂ ಅಸ್ಪಷ್ಟವಾಗ ಹತ್ತಿತು. ಅವನು ತುಸು ತಡೆದು ಮುಂದುವರಿಸಿದನು: 'ನಿನ್ನೆ ರಾತ್ರಿ ಆ್ಯನ್ನಿಯನ್ನು ಸೆರೆ ಹಿಡಿದದ್ದು ನಿಮ್ಮ 'ಆಯಕಟ್ಟಿನ ಪರಾವರ್ತನೆ'ಯೊಳಗೆ ಸೇರಿದೆಯೋ? ಸ್ವಲ್ಪ ಯೋಚಿಸಿ ನೋಡಿ: ಇಲ್ಲಿ ನಮ್ಮ ಗತಿ ಏನಾಗಿರುವುದೆಂದು, ನಾವೆಂಥ ಅಡವಿ ಪಾಲಾಗಿದ್ದೇವೆಂದು.......'

ರಿಚರ್ಡನ ಬಾಯಿಯಿಂದ ಇನ್ನೂ ಏನು ಬರಲಿದೆಯೋ ಎಂದು ರುಬಷೊವ ಕಾಯುತ್ತಿದ್ದನು. ಮುಸ್ಸಂಜೆ ಕವಿಯುತಿತ್ತು. ಕನ್ನಡಕವನ್ನು ಅಂಗಿಯ ತೋಳಿನಲ್ಲಿ ಉಜ್ಜಿಕೊಳ್ಳುತ್ತ ರುಬಷೊವ: 'ಪಾರ್ಟಿ ತಪ್ಪು ಮಾಡುವುದೆಂದರೇನು? ನಾನು ಅಥವಾ ನೀನು ತಪ್ಪಿ ಬೀಳಬಹುದು, ಪಾರ್ಟಿಯು ತಪ್ಪಿ ಬೀಳುವುದೆಂಬುದಿಲ್ಲ. ಕಾಮ್ರೇಡ್, ಪಕ್ಷವು ನನಗಿಂತಲೂ, ನಿನಗಿಂತಲೂ ನಮ್ಮಂಥ ಸಾವಿರಾರು ಜನಕ್ಕಿಂತಲೂ ಹೆಚ್ಚಿನದು, ಶ್ರೇಷ್ಠವಾದುದು. ಅದು ಇತಿಹಾಸದಲ್ಲಿನ ಕ್ರಾಂತಿಕಾರಕ ತತ್ತ್ವದ ಸಾಕಾರ ರೂಪ. ಇತಿಹಾಸಕ್ಕೆ ಕೋಮಲ ಭಾವಗಳಿಲ್ಲ, ಅಳುಕಿಲ್ಲ. ಜಡವಾದರೂ ದೋಷರಹಿತವಾಗಿ ಅದು ತನ್ನ ಗುರಿಯನ್ನು ಅಬಾಧಿತವಾಗಿ ತಲಪುವುದು. ಇತಿಹಾಸವೆಂಬ ಮಹಾನದಿಯು ಪ್ರತಿ ತಿರವು ಮುರವಿನಲ್ಲಿಯೂ ತಾನು ತಂದಿರತಕ್ಕ ಕೆಸರನ್ನೂ, ಮುಳುಗಿ ಸತ್ತವರ ಹೆಣಗಳನ್ನೂ ಬಿಟ್ಟು ಮುಂದಕ್ಕೆ ಸಾಗುವುದು. ತನ್ನ ದಾರಿ ಯಾವುದೆಂದು ಇತಿಹಾಸವು ಬಲ್ಲುದು. ಯಾವ ತಪ್ಪನ್ನೂ ಅದು ಮಾಡಲಾರದು. ಯಾವನಿಗೆ ಇಂಥ ಇತಿಹಾಸದ ಮೇಲೆ ಶ್ರದ್ಧೆ ಇಲ್ಲವೋ ಆತನು ಪಾರ್ಟಿಯಲ್ಲಿರಲು ಅನರ್ಹನು' ಎಂದನು.

ರಿಚರ್ಡ ಪಿಟ್ಟೆನಲಿಲ್ಲ. ಅಚಲವಾದ ಅವನ ಮೊಗವು ರುಬಷೊವನ ಕಡೆಗೆ ಬಗ್ಗಿತ್ತು. ಅವನ ಮೌನವನ್ನು ನೋಡಿ ರುಬಷೊವ ಮುಂದುವರಿದನು:

'ನಮ್ಮ ಪ್ರಕಟಣೆಗಳ ವಿತರಣೆಗೆ ನೀನು ಅಡ್ಡಿ ಮಾಡಿರುವಿ: ಪಾರ್ಟಿಯ ಕೊರಳನ್ನೇ ನೀನು ಒತ್ತಿ ಹಿಡಿದಿರುವಿ. ಪ್ರತಿ ಶಬ್ದವೂ ಅಪಾಯಕರ ಮತ್ತು ಅಸತ್ಯವಾಗಿರುವ ಪ್ರಕಟಣೆಗಳನ್ನು ಪ್ರತ್ಯಕ್ಷವಾಗಿ ನೀನು ಹಂಚಿರುವಿ. "ಕ್ರಾಂತಿಕಾರಿ ಚಳವಳಿಯ ಅವಶೇಷಗಳನ್ನು ಐಕ್ಯಗೊಳಿಸಿ, ಪ್ರಜಾಪೀಡಕರೊಡನೆ ಹೋರಾಡುವ ಇಚ್ಛೆ ಇರುವವರೆಲ್ಲ ಒಂದಾಗಬೇಕು; ನಮ್ಮ ಅಂತಃಕಲಹಗಳನ್ನು ನಿಲ್ಲಿಸಿ ಹೋರಾಟವನ್ನು ಒಟ್ಟಾಗಿಯೂ ಹೊಸದಾಗಿಯೂ ನಡೆಸಬೇಕು" ಎಂದು ನೀನು ಬರೆದಿರುವಿ. ಇದು ತಪ್ಪು. ಪಾರ್ಟಿಗೆ ಮುಂದಗಾಮಿಗಳ ಒಡನಾಟ, ಕೂಟ ಸಲ್ಲದು. ಅವರು ಚಳವಳಿಗೆ ವಿಶ್ವಾಸಘಾತಕ ಮಾಡುವವರು—

ಹಿಂದೆಯೂ ಮಾಡಿದ್ದಾರೆ, ಮುಂದೂ ಮಾಡುವರು. ಅವರೊಡನೆ ಸಂಬಂಧ ಹೂಡುವವನು ಚಳವಳಿಯನ್ನು ಮಣ್ಣಿನಲ್ಲಿ ಹೂಳಬೇಕೆಂಬ ಇರಾದೆಯವನು. "ಮನೆಗೆ ಬೆಂಕಿ ಬಿದ್ದಾಗ ಅದನ್ನು ನಂದಿಸಲು ಎಲ್ಲರೂ ಒಂದಾಗಬೇಕು; ವಾದಾಂಶಗಳ ವಿಚಾರ ಚರ್ಚೆ ನಡೆಸುತ್ತಾ ನಿಂತರೆ ಮನೆಯು ಸುಟ್ಟು ಭಸ್ಮವಾಗುವುದು" ಎಂದು ನೀನು ಬರೆದಿದ್ದೀ. ಅದೂ ತಪ್ಪು. ನೀರಿನಿಂದ ಬೆಂಕಿಯೊಡನೆ ಕಾದಾಡುವವರು ನಾವು, ಉಳಿದವರು ಎಣ್ಣೆಯಿಂದ ಹೋರಾಡುವವರು. ಆದುದರಿಂದ ಈ ಎರಡು ಅಗ್ನಿಶಾಮಕ ದಳಗಳ ಐಕ್ಯರಂಗವನ್ನು ನಿರ್ಮಾಣ ಮಾಡುವ ಮುನ್ನ ನಾವು ಯಾವ ಮಾರ್ಗ ಸರಿ—ನೀರಿನದೋ ಎಣ್ಣೆಯದೋ—ಎಂಬುವನ್ನು ನಿರ್ಣಯಿಸಿಕೊಳ್ಳಬೇಕು. ರಾಜಕೀಯದಲ್ಲಿ ವ್ಯವಹರಿಸಬೇಕಾದ ರೀತಿ ನಿಮಗರಿಯದು. ಉದ್ವೇಗದಲ್ಲಿಯೂ, ನಿರಾಸೆಯಲ್ಲಿಯೂ ರಾಜನೈತಿಕ ಧೋರಣೆಯನ್ನು ಸೃಷ್ಟಿಮಾಡಲು ಸಾಧ್ಯವಿಲ್ಲ. ಪಾರ್ಟಿಯ ಹಾದಿ ಖಚಿತವಾಗಿ ನಿರ್ದಿಷ್ಟವಾಗಿದೆ—ಪರ್ವತದ ನಡುವಿನ ಕಿರುಹಾದಿಯಂತೆ. ಸ್ವಲ್ಪ ಹೆಜ್ಜೆ ತಪ್ಪಿ ಬಲಕ್ಕೋ ಎಡಕ್ಕೋ ಹೊರಳಿದರೂ ಆಳವಾದ ಕಣಿವೆಯಲ್ಲಿ ಬೀಳುವುದು ನಿಶ್ಚಯ. ವಾಯು ಪ್ರಸಾರವೂ ಕಡಿಮೆಯಾಗಿರುವುದರಿಂದ ತಲೆ ತಿರುಗುತ್ತದೆ.'

ಚಿತ್ರಶಾಲೆಯಲ್ಲಿ ಮಬ್ಬು ಒತ್ತರಿಸಿದುದರಿಂದ ರುಬಷೊವಗೆ ಕುಮಾರಿ ಮರಿಯಮ್ಮನ ಹಸ್ತಗಳು ಕಾಣುತ್ತಿರಲಿಲ್ಲ. ಚಿತ್ರಶಾಲೆಯ ಗಂಟೆ ಬಾರಿಸಿತು; ಹದಿನೈದು ಮಿನಿಟಿನಲ್ಲಿ ಬಾಗಿಲು ಮುಚ್ಚುವ ಸೂಚನೆ ಅದು. ರುಬಷೊವ ತನ್ನ ವಾಚನ್ನು ನೋಡಿದನು. ನಿರ್ಣಾಯಕವಾದ ಮಾತನ್ನು ಅವನು ಇನ್ನೂ ಹೇಳಬೇಕಾಗಿತ್ತಷ್ಟೆ. ಅಲ್ಲಿಗೆ ಸಂಭಾಷಣೆ ನಿಲ್ಲಿಸಬಹುದು. ರಿಚರ್ಡ ಅವಿಚಲನಾಗಿ ಮೊಣಕೈಯನ್ನು ಕಾಲ್ಗಂಟಿನ ಮೇಲೆ ಊರಿಕೊಂಡು ಕೂತಿದ್ದನು.

ಕಟ್ಟಕಡೆಗೆ ಭಾರವಾದ ಧ್ವನಿಯಲ್ಲಿ 'ಅದಕ್ಕೆ ನನ್ನ ಹತ್ತಿರ ಜವಾಬಿಲ್ಲ. ನೀವು ಹೇಳಿದ್ದು ನಿಜವೇ ಇರಬಹುದು. ಪರ್ವತದ ಹಾದಿಯ ವಿಷಯ ನೀವಾಡಿದ ಮಾತು ಚೆನ್ನಾಗಿತ್ತು. ಆದರೆ ನಾವು ಸೋತು ಹೋಗಿದ್ದೇವೆ ಎನ್ನುವುದನ್ನು ನಾನು ಮರೆಯುವಂತಿಲ್ಲ, ನಮ್ಮ

ಜತೆಗಾರರೂ ಪ್ರತಿಪಕ್ಷವನ್ನು ಸೇರುತ್ತಿದ್ದಾರೆ. ನಮ್ಮ ಪರ್ವತದ ಹಾದಿಯು ಥಂಡಿ ಹವೆ ಪ್ರಾಯಃಶಃ ಅವರಿಗೆ ಒಗ್ಗುವುದಿಲ್ಲವೆಂದು ತೋರುತ್ತದೆ. ಆಚೆ ಕಡೆಯುವರನ್ನು ನೋಡಿ–ಸಂಗೀತವೇನು, ಉತ್ಸವ ವೇನು, ಬೆಚ್ಚಗಿನ ಅಗ್ಗಿಷ್ಟಿಕೆಯ ಸುಖಸಂಪತ್ತೇನು—ಅವರಿಗೆ ಎಲ್ಲವೂ ದೊರೆತಿವೆ. ಪ್ರಾಯಶಃ ಅದರಿಂದಲೇ ಅವರು ಗೆದ್ದಿರಬೇಕು, ನಮ್ಮ ಗೋಣು ಮುರಿದು ಹೋಗುತ್ತಿರಬೇಕು.'

ರುಬಷೊವ ಮೌನವಾಗಿ ರಿಚರ್ಡ ಹೇಳಿದ ಮಾತೆಲ್ಲವನ್ನು ಆಲಿಸಿ ದನು. ನಿರ್ಣಾಯಕ ತೀರ್ಪನ್ನು ತಾನು ಸಾರುವುದಕ್ಕೆ ಮುಂಚಿತ ವಾಗಿ ಯುವಕನಿಗೆ ಇನ್ನು ಏನಾದರೂ ಹೇಳಲಿದೆಯೋ ಎಂದು ನೋಡ ಬೇಕಾಗಿತ್ತು. ರಿಚರ್ಡ ಏನೇ ಹೇಳಲಿ ತೀರ್ಪು ಬದಲಾಗತಕ್ಕುದಲ್ಲ. ಆದರೂ ರುಬಷೊವ ಕಾದಿದ್ದನು.

ರಿಚರ್ಡನ ಆಕೃತಿ ಕತ್ತಲಲ್ಲಿ ಹೆಚ್ಚು ಹೆಚ್ಚಾಗಿ ಸೇರಿಕೊಳ್ಳುತ್ತಿತ್ತು. ಅವನೀಗ ಸೋಫದ ತುತ್ತ ತುದಿಯಲ್ಲಿ ಕೈಗಳಿಂದ ಮೋರೆಯನ್ನು ಮುಚ್ಚಿಕೊಂಡು ಕೂತಿದ್ದನು........ರುಬಷೊವ ಸೋಫದಲ್ಲಿ ನೆಟ್ಟಗಾಗಿ ಅವನ ಉತ್ತರಕ್ಕೋಸ್ಕರ ಕಾದಿದ್ದನು. ಅಷ್ಟರಲ್ಲಿ ಅವನಿಗೆ ಮೇಲಿನ ಒಸಡಿನಲ್ಲಿ ಏನೋ ಸೆಳೆತ ಆರಂಭವಾಯಿತು, ಹಲ್ಲು ನೋವೆಂದು ಕಾಣುತ್ತದೆ. ಸ್ವಲ್ಪ ಸಮಯ ಕಳೆದು ರಿಚರ್ಡ 'ಇನ್ನು ನನ್ನನ್ನೇನು ಮಾಡುತ್ತೀರಿ?' ಎಂದು ಕೇಳಿದನು.

ರುಬಷೊವ ನೋವಿನ ಹಲ್ಲನ್ನು ನಾಲಗೆಯಿಂದ ತುರಿಸಿಕೊಂಡನು. ಬೆರಳಿಂದ ಮುಟ್ಟಿದ ಮೇಲೆ ಕೊನೆಯ ತೀರ್ಪು ಹೇಳೋಣವೇ ಎಂದು ಯೋಚಿಸಿದನು. ಆದರೆ ಹಾಗೆ ಮಾಡದೆ ನಿರ್ವಿಕಾರನಾಗಿ, 'ಕೇಂದ್ರ ಸಮಿತಿಯ ನಿರ್ಣಯದ ಪ್ರಕಾರವಾಗಿ ನೀನು ಈಗ ಪಾರ್ಟಿಯ ಸದಸ್ಯ ನಾಗಿಲ್ಲವೆಂಬುದನ್ನು ನಾನು ನಿನಗೆ ತಿಳಿಸಬೇಕಾಗಿದೆ, ರಿಚರ್ಡ' ಎಂದು ಸುರಿದನು.

ರಿಚರ್ಡ ಅಲುಗಾಡಲಿಲ್ಲ. ಕೂತಲ್ಲಿಂದ ಏಳುವ ಮುನ್ನ ಇನ್ನೂ ಏನಾದರೂ ಇದೆಯೋ ಎಂದು ರುಬಷೊವ ಕಾದನು. ರಿಚರ್ಡ ಕೂತ

ಲ್ಲಿಂದಲೇ ತಲೆಯೆತ್ತಿ ಆತನನ್ನು ನೋಡಿ 'ನೀನು ಇಲ್ಲಿಗೆ ಬಂದುದು ಇದ ಕ್ಕೋಸ್ಕರವೋ?' ಎಂದು ವಿಚಾರಿಸಿದನು.

'ಮುಖ್ಯವಾಗಿ ಇದಕ್ಕೋಸ್ಕರವೇ' ಎಂದು ಹೇಳಿ ಹೊರಟವನಂತೆ ರಿಚರ್ಡನ ಮುಂದೆ ನಿಂತನು ರುಬಷೊವ.

'ಇನ್ನು ನನ್ನ ಗತಿ ಏನು?' ಎಂದು ರಿಚರ್ಡ ಕೇಳಿದನು. ರುಬ ಷೊವ ಮೌನ. ಸ್ವಲ್ಪ ತಡೆದು ರಿಚರ್ಡ 'ಇನ್ನು ನನಗೆ ಸ್ನೇಹಿತನ ಕೊಠ ಡಿಯಲ್ಲಿ ಆಶ್ರಯವಿಲ್ಲ ತಾನೆ?' ಎಂದು ಪ್ರಶ್ನಿಸಿದನು. 'ನೀನಲ್ಲಿಗೆ ಹೋಗ ದಿರುವುದು ಚೆನ್ನು' ಎಂದು ಹೇಳಿ ರುಬಷೊವ ಈ ಮಾತು ಹೇಳಬಾರ ದಿತ್ತು ಎಂದುಕೊಂಡನು. ಕೂತುಕೊಂಡೇ ಇದ್ದ ರಿಚರ್ಡನನ್ನು ನೋಡಿ 'ಈಗ ನಾವಿಬ್ಬರೂ ಬೇರೆಬೇರಾಗಿ ಹೊರಗೆ ಹೋಗುವುದು ಒಳ್ಳೆಯದು, ನಮಸ್ಕಾರ' ಎಂದನು.

ರಿಚರ್ಡ ನೆಟ್ಟಗಾದರೂ ಏಳಲಿಲ್ಲ. ಅವನ ಬಾತುಹೋದ ಕಣ್ಣಿ ನಿಂದಾಗಿ ಅವನ ಮುಖ ಮುದ್ರೆಯ ಮೇಲಾದ ವಿಚಿತ್ರ ಪರಿಣಾಮವನ್ನು ಆ ಕತ್ತಲಿನಲ್ಲಿ ಊಹಿಸಿಯೇ ತಿಳಿಯಬೇಕಾಗಿತ್ತು. ರುಬಷೊವನ ಸ್ಮರಣೆಯಲ್ಲಿ ಅಚ್ಚೊತ್ತಿದ ಆ ಚಹರೆಯಲ್ಲಿ ಜೀವಕಳೆ ಇರಲಿಲ್ಲ.

ರುಬಷೊವ ಆ ಕೋಣೆಯಿಂದ ಇನ್ನೊಂದು ಕೋಣೆಗೆ ಹೋಗು ವಾಗ ಅವನ ಬೂಟು ಚುರ್ರೆಂದು ಸದ್ದುಮಾಡುತ್ತಿದ್ದುವು. ಹೊರ ಬಾಗಿಲನ್ನು ಮುಟ್ಟಿದ ಮೇಲೆ ಆತನಿಗೆ ತಾನು 'ಪೀತಾ' ಚಿತ್ರವನ್ನು ಸಂಪೂರ್ಣವಾಗಿ ನೋಡಲಿಲ್ಲವೆಂಬ ಎಚ್ಚರವುಂಟಾಯಿತು. 'ಪೀತಾ' ದಲ್ಲಿ ಅವನು ಕಂಡುದು ಸೊರಗಿದ ಕೈಗಳನ್ನು ಮಾತ್ರ.

ಹೊರಬಾಗಿಲನ್ನು ದಾಟಿ ಮೆಟ್ಟಲಿಳಿಯುತ್ತಿದ್ದಾಗ ರುಬಷೊವ ನಡುವೆ ನಿಂತನು. ಹಲ್ಲಿನ ನೋವು ಹೆಚ್ಚುತ್ತಿತ್ತು. ಹೊರಗಡೆ ಥಂಡಿಯೂ ಹೆಚ್ಚುತ್ತಿತ್ತು. ಉಣ್ಣೆಯ ಮಫ್ಲರನ್ನು ಅವನು ಕೊರಳಿಗೆ ಹಚ್ಚುವಂತೆ ಬಿಗಿದುಕೊಂಡನು. ಚಿತ್ರಶಾಲೆಯ ಮುಂದಣ ಚೌಕದಲ್ಲಿ ಆಗಲೇ ದೀಪಗಳು ಬೆಳಗುತ್ತಿದ್ದುವು. ಹೆಚ್ಚಿಗೆ ಜನರೂ ಅಡ್ಡಾಡುತ್ತಿರಲಿಲ್ಲ. ಸಾಲುಮರಗಳುಳ್ಳ ಬೀದಿಯಲ್ಲಿ ಗಂಟೆ ಹೊಡೆದುಕೊಂಡು ಸಪೂರ

ಟ್ರಾಮೊಂದು ಹೊರಟುಹೋಯಿತು. ಇಲ್ಲಿ ಟ್ಯಾಕ್ಸಿ ಸಿಗುವುದು ಹೇಗೋ ಎಂದು ರುಬಷೊವ ಚಿಂತಿತನಾದನು.

ಕೊನೆಯ ಮೆಟ್ಟಲಲ್ಲಿ ರಿಚರ್ಡ ಉಬ್ಬಸಬಿಡುತ್ತ ಓಡುತ್ತ ಬಂದು ರುಬಷೊವನನ್ನು ಕೂಡಿಕೊಂಡನು. ರುಬಷೊವ ತಿರುಗಿ ನೋಡದೆ ಒಂದೇ ವೇಗದಲ್ಲಿ ನಡೆಯುತ್ತಿದ್ದನು. ರಿಚರ್ಡ ಅವನಿಗಿಂತ ಸ್ವಲ್ಪ ಉದ್ದ ವಾಗಬಹುದಾದರೂ ಆತನು ಬೆನ್ನುಬಗ್ಗಿಸಿ ನಡೆಯುತ್ತಿದ್ದುದರಿಂದ ರುಬ ಷೊವ ಎತ್ತರವಾಗಿ ಕಾಣುತ್ತಿದ್ದನು. ಕೆಲವು ಹೆಜ್ಜೆ ಜತೆಯಾಗಿ ನಡೆದ ತರುವಾಯ 'ನನ್ನ ಸ್ನೇಹಿತನ ಕೋಣೆಗೆ ನಾನು ಹೋಗದಿರುವುದೇ ಚೆನ್ನೆಂದು ನೀವಂದುದು ನನಗೆ ಎಚ್ಚರಿಕೆಯ ಸೂಚನೆಯೋ?' ಎಂದು ಕೇಳಿದನು.

ಪ್ರಕಾಶಮಾನವಾದ ದೀಪಗಳುಳ್ಳ ಒಂದು ಟ್ಯಾಕ್ಸಿ ಆ ದಾರಿಯಾಗಿ ಬರುತ್ತಿತ್ತು. ರುಬಷೊವ ಕಾಲ್ದಾರಿಯಲ್ಲಿ ತಡೆದು ನಿಂತು ಟ್ಯಾಕ್ಸಿ ಬರುವುದನ್ನು ಕಾಯತೊಡಗಿದನು. ಪಕ್ಕದಲ್ಲೇ ನಿಂತಿದ್ದ ರಿಚರ್ಡನಿಗೆ 'ನಿನಗೆ ನಾನು ಇನ್ನೇನೂ ಹೇಳಲಿಕ್ಕಿಲ್ಲ, ರಿಚರ್ಡ' ಎಂದು ಟ್ಯಾಕ್ಸಿಗೆ ಸನ್ನೆ ಮಾಡಿದನು.

'ನೀ–ನೀವು ಈ ರೀತಿ ನನ್ನನ್ನು ನಿ–ನಿರಾಕರಿಸಬಾರದು, ಕಾಮ್ರೇಡ್' ಎಂದು ರಿಚರ್ಡ ಅತ್ತನು. ಟ್ಯಾಕ್ಸಿ ವೇಗ ತಗ್ಗಿಸಿಕೊಂಡು ಸಮೀಪಕ್ಕೆ ಬರುತಿತ್ತು, ಇನ್ನೇನು ಇಪ್ಪತ್ತು ಮಾರು ದೂರವಲ್ಲಿದೆ ಎನ್ನುವಾಗ ರಿಚರ್ಡ ರುಬಷೊವನ ಕೋಟಿನ ತುದಿಯನ್ನು ಹಿಡಿದು ಅವನ ಮುಖದ ಸನಿಹಕ್ಕೆ ಹೋಗಿ 'ನಾನು ಪಕ್ಷದ ಶತ್ರುವಲ್ಲ. ನನ್ನನ್ನು ಈ ರೀತಿ ನೀವು ತೊ–ತೋಳಗಳಿಗೆ ಬ-ಬ-ಬಲಿ ಕೊಡಬಾರದು, ಕಾಮ್ರೇಡ್' ಎಂದು ಮೊರೆ ಇಟ್ಟನು.

ಟ್ಯಾಕ್ಸಿ ರುಬಷೊವನ ಕಾಲ ಬಳಿ ನಿಂತಿತು. ಡ್ರೈವರನಿಗೆ ರಿಚರ್ಡನ ಕೊನೆಯ ಶಬ್ದ ಕೇಳಿಸಿರಲೂ ಬಹುದು. ರಿಚರ್ಡನನ್ನು ಬೀಳ್ಕೊಡುವ ಮಾತು ಅಸಾಧ್ಯವೆಂದು ರುಬಷೊವ ಯೋಚಿಸಿದನು— ನೂರು ಗಜ ದೂರದಲ್ಲಿ ಒಬ್ಬ ಪೋಲೀಸರವನು ನಿಂತಿದ್ದನು. ಜರ್ಮನ

ಅಂಗಿಯನ್ನು ಧರಿಸಿದ್ದ ಡ್ರೈವರ ಶೂನ್ಯದೃಷ್ಟಿಯಿಂದ ಅವರಿಬ್ಬರನ್ನೂ ನೋಡುತ್ತಿದ್ದನು.

'ಸ್ಟೇಶನಿಗೆ' ಎಂದು ಹೇಳಿ ರುಬಶೊವ ಕಾರಿನೊಳಗೆ ಹೊಕ್ಕನು. ಟ್ಯಾಕ್ಸಿಡ್ರೈವರನು ತನ್ನ ಬಲಗೈಯಿಂದ ಹಿಂದಿನ ಸೀಟಿನ ತೆರೆದ ಬಾಗಿಲನ್ನು ಬಲವಾಗಿ ಇಕ್ಕಿಕೊಂಡನು. ರಿಚರ್ಡ ಟೊಪ್ಪಿಯನ್ನು ಹಿಡಿದುಕೊಂಡು ಕಾಲು ಹಾದಿಯಲ್ಲೇ ನಿಂತಿದ್ದನು, ಅವನ ಗಂಟಲಮಣಿ ಮೇಲಕ್ಕೂ ಕೆಳಕ್ಕೂ ತೀವ್ರಗತಿಯಿಂದ ಚಲಿಸುತ್ತಿತ್ತು. ಟ್ಯಾಕ್ಸಿ ಹೊರಟು ಪೋಲೀಸರವನನ್ನು ದಾಟಿ ಮುಂದಕ್ಕೆ ಹೊರಟು ಹೋಯಿತು. ರುಬಶೊವ ಹಿಂತಿರುಗಿ ನೋಡದೆಯೆ ರಿಚರ್ಡ ಕಾರಿನ ಕೆಂಪು ದೀಪವನ್ನು ದಿಟ್ಟಿಸುತ್ತ ಕಾಲುಹಾದಿಯಲ್ಲಿ ನಿಂತಿರಬೇಕೆಂದು ಊಹಿಸಿದನು.

ಸ್ವಲ್ಪ ಹೊತ್ತು ಜನನಿಬಿಡವಾದ ಬೀದಿಗಳಲ್ಲಿ ಕಾರು ಸಾಗಿತು. ಗಿರಾಕಿ ಹಿಂದುಗಡೆ ಕೂತಿರುವನೋ ಇಲ್ಲವೋ ಎಂಬುದನ್ನು ಪರೀಕ್ಷಿಸುವಂತೆ ಡ್ರೈವರನು ಹಲವು ಸಲ ಹಿಂದೆ ತಿರುಗಿ ನೋಡುತ್ತಿದ್ದನು. ರುಬಶೊವಗೆ ಆ ಊರಿನ ಬೀದಿಗಳ ಪರಿಚಯವಿರಲಿಲ್ಲವಾದ್ದರಿಂದ ತಾವು ಸ್ಟೇಷನ್ನಿಗೆ ಹೋಗುತ್ತಿದ್ದುದು ಹೌದೋ ಅಲ್ಲವೋ ಎಂಬುದೂ ತಿಳಿಯುವಂತಿರಲಿಲ್ಲ. ಅಷ್ಟರಲ್ಲಿ ಬೀದಿಗಳಲ್ಲಿ ಗದ್ದಲ ಕಡಮೆಯಾಯಿತು, ದೊಡ್ಡ ಗಡಿಯಾರವನ್ನು ತಲೆಯಲ್ಲಿ ಹೊತ್ತ ಭವ್ಯ ಕಟ್ಟಡವೊಂದು ದೂರದಲ್ಲಿ ಕಾಣಿಸಿತು. ಅದೇ ಸ್ಟೇಷನ್, ಅಲ್ಲೆ ಟ್ಯಾಕ್ಸಿ ನಿಂತಿತು.

ರುಬಶೊವ ಟ್ಯಾಕ್ಸಿಯಿಂದ ಹೊರಗೆ ಬಂದು ಮೀಟರ್ ಹುಡುಕಿದನು. ಈ ಊರಿಗೆ ಮೀಟರ ಇನ್ನೂ ಬಂದಿಲ್ಲವೇ ಎಂದುಕೊಂಡು 'ಎಷ್ಟಾಯಿತು?' ಎಂದು ಕೇಳಿದನು.

'ಏನೂ ಬೇಡ' ಎಂದು ಹೇಳಿ ಸುಕ್ಕುಗಟ್ಟಿದ ಮುಖವುಳ್ಳ ಆ ಡ್ರೈವರ ಚರ್ಮದಂಗಿಯ ಕಿಸೆಯೊಳಗಿಂದ ಒಂದು ಕೆಂಪು ಚಿಂದಿಯನ್ನು ತೆಗೆದು ಮೂಗನ್ನು ಕೆರೆದು ಸ್ವಚ್ಛಮಾಡಿಕೊಂಡನು.

ರುಬಶೊವ ಕನ್ನಡಕದ ಮೂಲಕ ಡ್ರೈವರನನ್ನು ಪರೀಕ್ಷೆ ಮಾಡಿದನು. ಆ ಮುಖವನ್ನು ಆತ ಎಲ್ಲಿಯೂ ಕಂಡ ಹಾಗಿರಲಿಲ್ಲ. ಡ್ರೈವರನು ಕರವಸ್ತ್ರವನ್ನು ಜೇಬಿಗೆ ಸೇರಿಸುತ್ತ 'ನಿಮ್ಮಂಥವರಿಗೆ ನನ್ನ ಟ್ಯಾಕ್ಸಿ

ಯಾವಾಗಲೂ ಪುಕ್ಕಟೆ' ಎಂದು ಕೈಬ್ರೇಕನ್ನಲುಗಿಸುವುದರಲ್ಲಿ ನಿರತನಾದನು. ಫಕ್ಕನೆ ಕಪ್ಪಾದ ಉಗುರೂ ಉಬ್ಬಿದ ರಕ್ತನಾಳವೂ ಉಳ್ಳ ಕೈಯನ್ನು ಹೊರಗೆ ಚಾಚಿ, 'ಒಳ್ಳೆಯದು, ಬರುತ್ತೇನೆ' ಎಂದು ರುಬಷೊವನ ಕಡೆಗೆ ನೋಡಿ ಹಲ್ಲುಬಿಟ್ಟನು. 'ನಿಮ್ಮ ಎಳೆಯ ಸ್ನೇಹಿತನಿಗೆ ಬೇಕಾದರೆ ನನ್ನ ಟ್ಯಾಕ್ಸಿ ಯಾವಾಗಲೂ ವಸ್ತುಸಂಗ್ರಹಾಲಯದ ಎದುರೇ ನಿಂತಿರುತ್ತದೆಂದು ನನ್ನ ನಂಬರು ಕಳಿಸಿ ಬರೆಯಿರಿ, ಸಾರ್' ಎಂದು ಕೂಡಿಸಿದನು.

ತನ್ನ ಬಲಗಡೆಯ ಕಂಬಕ್ಕೆ ಒರಗಿ ಒಬ್ಬ ಹೊರಿಯಾಳು ನಿಂತಿದ್ದುದನ್ನು ನೋಡಿ ರುಬಷೊವ ಬೇಗನೆ ಟ್ಯಾಕ್ಸಿ ಡ್ರೈವರನ ಕೈಯಲ್ಲೊಂದು ನಾಣ್ಯವನ್ನಿಟ್ಟು ಪ್ರತಿ ಮಾತಾಡದೆ ಸ್ಟೇಶನ್ನಿನತ್ತ ಕಾಲು ಹಾಕಿದನು.

ಗಾಡಿ ಹೊರಡಲು ಒಂದು ತಾಸಿತ್ತು. ಕ್ಯಾಂಟೀನಿನಲ್ಲಿ ರುಬಷೊವಗೆ ಕೆಟ್ಟ ಕಾಫಿ ಕುಡಿಯಲು ಸಿಕ್ಕಿತು. ಹಲ್ಲು ನೋವಿನ ಹಿಂಸೆ ಬಲವಾಗುತಿತ್ತು. ಗಾಡಿಯಲ್ಲಿ ಅವನಿಗೆ ತೂಕಡಿಕೆ ಬಂದಾಗ ತಾನು ಗಾಡಿಯ ಇಂಜನ್ನಿನಡಿಗೆ ಸಿಕ್ಕಿ ಬಿದ್ದೆನೆಂದು ಒಂದು ಕನಸು ಬಿತ್ತು. ಇಂಜನ್ನಿನಲ್ಲಿ ರಿಚರ್ಡ ಮತ್ತು ಟ್ಯಾಕ್ಸಿ ಡ್ರೈವರ ಇಬ್ಬರೂ ನಿಂತಿದ್ದರು. ಟ್ಯಾಕ್ಸಿಯ ಛಾರ್ಜು ಕೊಡದೆ ಇದ್ದ ತಪ್ಪಿಗಾಗಿ ಅವನನ್ನು ಇಂಜನ್ನಿನಡಿಗೆ ಹಾಕಿ ನುರಿಯಬೇಕೆಂದು ಅವರು ದೀಕ್ಷೆ ಹೊತ್ತಿದ್ದರು. ಇಂಜನ್ನಿನ ಚಕ್ರಗಳು ಖಡಖಡಾಯಿಸುತ್ತ ಸಮೀಪಕ್ಕೆ ಬಂದರೂ ರುಬಷೊವನ ಕಾಲು ನಿಂತಲ್ಲಿಂದ ಚಲಿಸಲೊಲ್ಲದು. ರುಬಷೊವಗೆ ಎಚ್ಚರವಾದಾಗ ಹಣೆಯಲ್ಲಿ ಬೆವರಿನ ಹನಿ ಇತ್ತು, ದೇಹವೆಲ್ಲ ಅಸ್ವಸ್ಥವಾಗಿತ್ತು. ಅವನಿದ್ದ ಗಾಡಿಯಲ್ಲಿ ಕೂತಿದ್ದ ಬೇರೆ ಜನರು ಅವನನ್ನು ಸ್ವಲ್ಪ ಆಶ್ಚರ್ಯದಿಂದಲೇ ನೋಡುತ್ತಿದ್ದರು. ಹೊರಗೆ ಕಗ್ಗತ್ತಲು; ಗಾಡಿ ಅಂಧಕಾರಮಯವಾದ ಶತ್ರುರಾಷ್ಟ್ರದಲ್ಲಿ ಧಾವಿಸುತ್ತಿತ್ತು, ರಿಚರ್ಡ—ಘಟನೆಯನ್ನು ಆದಷ್ಟು ಬೇಗ ಮುಗಿಸಬೇಕು ಎಂದು ಆತ ಯೋಚಿಸುವಷ್ಟರಲ್ಲಿ ಹಲ್ಲು ನೋವು ಅಧಿಕವಾಯಿತು. ಅದಾಗಿ ಒಂದು ವಾರದಲ್ಲಿ ರಿಚರ್ಡನನ್ನು ಸೆರೆಹಿಡಿದರು.

ಕಿಟಕಿಯಲ್ಲಿ ಹಣೆಯನ್ನಿಟ್ಟು ರುಬಷೊವ ಅಂಗಳದ ಕಡೆಗೆ ನೋಡಿದನು. ನಡೆದು ನಡೆದು ಅವನ ಕಾಲಿಗೆ ಆಯಾಸವಾಗಿತ್ತು, ತಲೆ ಭಾರವಾಗಿತ್ತು. ಗಡಿಯಾರವನ್ನು ನೋಡಿಕೊಂಡಾಗ 'ಪೇತಾ' ಚಿತ್ರವು ಮೊದಲು ಮನಸ್ಸಿನಲ್ಲಿ ಸುಳಿದ ಲಾಗಾಯಿತು ತಾನು ನಾಲ್ಕು ತಾಸು ನಿರಂತರವಾಗಿ ಕೋಣೆಯಲ್ಲಿ ನಡೆದಿರುವುದು ಅವನಿಗೆ ತಿಳಿಯಿತು. ಅದರಿಂದ ಅವನಿಗೆ ಆಶ್ಚರ್ಯವಾಗಲಿಲ್ಲ. ಏಕೆಂದರೆ, ಜೈಲು ವಾಸದ ಹಗಲುಗನಸುಗಳ ಪರಿಚಯವು ಅವನಿಗಿತ್ತು, ಸುಣ್ಣ ಬಳಿದ ಬೆಳ್ಳನೆಯ ಗೋಡೆಗಳ ಅಮಲಿನ ಪರಿಚಯವೂ ಸಾಕಷ್ಟಿತ್ತು. ಕ್ಷೌರಿಕ ವೃತ್ತಿಯ ತರುಣ ಕಾಮ್ರೇಡನೊಬ್ಬನು ಜೈಲಿನ ಏಕಾಂತವಾಸದಲ್ಲಿ ಏಳು ಗಂಟೆಗಳ ಕಾಲ ಹಗಲುಗನಸು ಕಂಡುದನ್ನೂ, ಅಷ್ಟು ಹೊತ್ತಿನಲ್ಲಿ ಕೊಠಡಿಯೊಳಗೇ ಮೂವತ್ತು ಮೈಲು ದೂರ ನಡೆದುದರಿಂದಾಗಿ ಪಾದದಲ್ಲಿ ಬೊಕ್ಕೆಗಳೆದ್ದುವೆಂಬುದನ್ನೂ ರುಬಷೊವನೊಡನೆ ಹೇಳಿದ್ದನಂತೆ.

ಆದರೆ ಈ ಸರ್ತಿ ರೋಗವು ಸೆರೆಮನೆಗೆ ಸೇರಿದ ಮಾರನೆಯ ದಿನವೇ ಆರಂಭವಾಗಿ ಬಿಟ್ಟಿದೆ. ಹಿಂದಿನಂತೆ ಕೆಲವು ವಾರಗಳ ಅನಂತರವಲ್ಲ. ಭೂತಕಾಲದ ವಿಷಯಗಳ ಮಾನಸಿಕ ಚಿತ್ರವನ್ನು ಇದ್ದಕ್ಕಿದ್ದಂತೆ ಕನಸಿನಲ್ಲಿ ಕಾಣುವುದೂ ಒಂದು ವಿಚಿತ್ರವೇ. ಕನಸುಗಾರರಿಗೆ ಹೆಚ್ಚಾಗಿ ಬಿದ್ದರೆ ಭವಿಷ್ಯದ ಕನಸೇ ಬಾಧಿಸುವುದು, ಇನ್ನು ಭೂತಕಾಲದ ಕನಸಾದರೆ ಅದರ ಯಥಾವತ್ ಚಿತ್ರವಲ್ಲ, ಅವರ ಮನಸ್ಸಿಗೆ ಇಷ್ಟವಾದ ಚಿತ್ರವೇ ಕಣ್ಣ ಮುಂದೆ ನಲಿಯುವುದು ರೂಢಿ. ತನ್ನ ಮಾನಸಿಕ ಲೋಕವು ಇನ್ನೂ ಏನೇನು ವೈಚಿತ್ರ್ಯಗಳನ್ನು ಪ್ರದರ್ಶಿಸಲಿದೆಯೋ ಎಂದು ರುಬಷೊವ ಚಿಂತಿಸಿದನು. ಮರಣದ ಸಮ್ಮುಖದಲ್ಲಿರುವ ಮಾನಸಿಕ ಯಂತ್ರವು ಧ್ರುವ ಪ್ರದೇಶದಲ್ಲಿ ದಿಕ್ಸೂಚಕ್ರವು ವರ್ತಿಸುವಂತೆ ಚಿತ್ರವಿಚಿತ್ರತರವಾಗಿ ವರ್ತಿಸುವುದೆಂಬುದು ರುಬಷೊವಗೆ ಅನುಭವಸಿದ್ಧ ವಿಷಯವಾಗಿತ್ತು.

ಆಕಾಶವು ಇದೀಗ ಹಿಮವರ್ಷವನ್ನು ಕರೆಯುವಂತೆ ಭಾರವಾಗಿ ಬಾಗಿತ್ತು. ಅಂಗಳದಲ್ಲಿ ಇಬ್ಬರು ತಮ್ಮ ದೈನಂದಿನ ವಾಕಿಂಗ್ ನಡೆಸುತ್ತಿದ್ದರು. ಅವರಲ್ಲೊಬ್ಬನು ಪದೇ ಪದೇ ರುಬಷೊವನ ಕಿಟಕಿಯ ಕಡೆಗೆ ಮೊಗವೆತ್ತಿ ನೋಡುವನು–ಪ್ರಾಯಶಃ ರುಬಷೊವ ಸೆರೆಯಾದ ಸಂಗತಿ ಅಷ್ಟು ಹೊತ್ತಿಗಾಗಲೇ ಪ್ರಸಾರವಾಯಿತೋ ಹೇಗೆ? ಹಳದಿ ಚರ್ಮದ ಆ ಬಡಕಲು ಜೀವಕ್ಕೆ ತುಟಿ ಸೀಳಾಗಿತ್ತು, ತಾನು ಸುತ್ತಿ ಕೊಂಡಿದ್ದ ಒಂದು ವಾಟರ್‌ಪ್ರೂಫ ಬಟ್ಟೆಯನ್ನು ಚಳಿಯಿಂದ ಗಡ ಗುಟ್ಟುವವರಂತೆ ಕೈಗಳಿಂದ ಅವಚಿ ಹಿಡಿದಿದ್ದನು. ಎರಡನೆಯವನು ಒಂದನೆಯವನಿಗಿಂತ ವಯಸ್ಸಾದವನು, ಕಂಬಳಿಯಿಂದ ಮೈ ಹೊದ್ದು ಕೊಂಡಿದ್ದನು. ನಡೆಯುತ್ತಿರುವ ಕಾಲದಲ್ಲಿ ಅವರು ಮಾತಾಡಿ ಕೊಳ್ಳಲಿಲ್ಲ. ಹತ್ತು ಮಿನಿಟುಗಳ ಬಳಿಕ ಅವರನ್ನು ಕರೆದುಕೊಂಡು ಹೋಗಲು ರಿವಾಲ್ವರ್ ಜೆಲ್ಟಿನ ಸಿಪಾಯಿಯೊಬ್ಬ ಬಂದೇ ಬಂದನು. ಕಟ್ಟಡದೊಳಗೆ ಅಂಗಳದಿಂದ ಪ್ರವೇಶಿಸುವಲ್ಲಿದ್ದ ಬಾಗಿಲು ಮುಚ್ಚುವು ದಕ್ಕೆ ಮುನ್ನ ಸೀಳ್ಬಾಯಿಯವನು ಮತ್ತೊಮ್ಮೆ ರುಬಷೊವನ ಕಿಟಕಿ ಯನ್ನು ನೋಡಿದನು. ಕೋಣೆ ಕತ್ತಲಾದ್ದರಿಂದ ಕಿಟಕಿಯ ಬಳಿ ನಿಂತ ರುಬಷೊವ ಅವನಿಗೆ ತೋರುವ ಪ್ರಸಂಗವಿರಲಿಲ್ಲವಾದರೂ ಅವನು ಕಿಟಕಿಯನ್ನು ಪರೀಕ್ಷೆಮಾಡಿ ನೋಡುವಂತೆ ತೋರಿತು. ನಾನು ನಿನ್ನನ್ನು ನೋಡಬಲ್ಲೆನಾದರೂ ನಿನ್ನ ಪರಿಚಯವಿಲ್ಲ. ನಿನಗೆ ನನ್ನ ಪರಿಚಯವಿದ್ದರೂ ನೀನು ನನ್ನನ್ನು ನೋಡಲಾರೆ ಎಂದು ರುಬಷೊವ ಯೋಚಿಸಿದನು. ಮಂಚದ ಮೇಲೆ ಕೂತು ನಂಬರ ೪೦೨ರವನೊಡನೆ ವಿಚಾರಿಸೋಣ ಎಂದು ಗೋಡೆಯನ್ನು ತಟ್ಟಿದನು:

**'ಅವರು ಯಾರು?'**

೪೦೨ ತನ್ನ ಮೇಲಣ ಅಸಮಾಧಾನದಿಂದ ಉತ್ತರಕೊಡನೆಂದು ರುಬಷೊವ ಭಾವಿಸಿದನು. ಆದರೆ ಆತ ಅಂಥ ಮನುಷ್ಯನಾಗಿರಲಿಲ್ಲ. ಕೂಡಲೇ ಉತ್ತರ ಬಂತು:

**'ರಾಜಕೀಯಸ್ಥರು'**

ರುಬಷೊವಗೆ ಆಶ್ಚರ್ಯವಾಯಿತು. ಆ ಸೀಳ್ಬಾಯಿಯವನು ಖಂಡಿತವಾಗಿಯೂ ಕ್ರಿಮಿನಲ್ ಕೈದಿ ಎಂದುಕೊಂಡಿದ್ದನವನು.

'**ನಿನ್ನ ಮಾದರಿಯವರೋ?**' ಎಂದು ಕೇಳಿದನು.

'**ಅಲ್ಲ ನಿನ್ನಂಥವರು**' ಎಂದು ಪ್ರಾಯಶಃ ಉಲ್ಲಾಸದಿಂದ ೪೦೭ ಮರುಬಡಿದನು. ಎರಡನೇ ವಾಕ್ಯವು ಗಟ್ಟಿಯಾಗಿತ್ತು.

'**ನನ್ನ ಸೆರೆಯ, ನಂಬರ ೪೦೦, ಸೀಳ್ಬಾಯಿಯವನಿಗೆ ನಿನ್ನೆ ಚಿತ್ರಹಿಂಸೆಯ ಸೇವೆ ನಡೆಯಿತು.**'

ರುಬಷೊವ ತಾನು ಗೋಡೆ ತಟ್ಟಲುಪಯೋಗಿಸುತ್ತಿದ್ದ ಕನ್ನಡಕವನ್ನು ಉಜ್ಜಿಕೊಂಡನು. ಯಾಕೆ? ಎಂದು ಕೇಳುವ ಇಚ್ಛೆಯನ್ನು ಬದಿಗೊತ್ತಿ.

'**ಹೇಗೆ?**' ಎಂದು ಕೇಳಿದನು.

'**ಉಗಿಸ್ನಾನ**' ಎಂದು ಉತ್ತರ ಬಂತು.

ಹಿಂದಿನ ಸಲ ಸೆರೆಮನೆಯಲ್ಲಿ ರುಬಷೊವನನ್ನು ಚೆನ್ನಾಗಿ ಹೊಡೆದಿದ್ದರು; ಆದರೆ ಉಗಿಸ್ನಾನದ ವಿಷಯ ಮಾತ್ರ ಆತ ಕೇಳಿಬಲ್ಲನಷ್ಟೆ. ಇಂಥಾದ್ದೇ ಎಂದು ಮೊದಲೇ ತಿಳಿದಿರುವುದಾದರೆ ಎಂಥ ಶಾರೀರಿಕ ವೇದನೆಯನ್ನೂ ಹಲ್ಲು ಕಚ್ಚಿ ಕೀಳುವಂತೆ –– ತಡೆದುಕೊಳ್ಳಬಹುದಾಗುತ್ತದೆ; ಯಾವ ರೀತಿಯಲ್ಲಿ, ಎಷ್ಟು ಮಟ್ಟಿಗೆ ಇದಿರಿಸಲು ನಮಗೆ ಶಕ್ತಿ ಇದೆ ಎಂಬುದನ್ನೂ ತಿಳಿಯಲಾಗದ ಅಜ್ಞಾತ ವೇದನೆಯು ಅಸಹನೀಯವಾದುದು. ನೋವು ಅತಿಯಾದಾಗ ತಾನು ಏನು ಮಾಡಬಹುದೋ ಅಥವಾ ಹೇಳಬಹುದೋ ಅದನ್ನು ನೆನಪಿಗೆ ತರುವ ಹಾಗೂ ಇಲ್ಲ.

'**ಕಾರಣ?**'

'**ರಾಜಕೀಯ ಭಿನ್ನಾಭಿಪ್ರಾಯಗಳು**' ಎಂದು ೪೦೭ ವ್ಯಂಗ್ಯವಾಗಿ ಉತ್ತರಿಸಿದನು.

ಕನ್ನಡಕವನ್ನು ಮರಳಿ ಮೂಗಿಗೆ ಏರಿಸಿ ಜೇಬಿನಲ್ಲಿದ್ದ ಸಿಗರೇಟ ಕೇಸನ್ನು ರುಬಷೊವ ಹೊರಗೆಳೆದನು. ಅದರಲ್ಲಿ ಇನ್ನೆರಡೇ ಸಿಗರೇಟ ಉಳಿದಿದ್ದುವು.

'ನೀನು ಕ್ಷೇಮವಾಗಿದ್ದೀಯಾ?' ಎಂದು ಬಡೆದನು.

'ಉಪಕಾರ, ಕ್ಷೇಮವಾಗಿದ್ದೇನೆ?' ಎಂದು ಹೇಳಿ ೪೦೨ ಸಂಭಾಷಣೆಯನ್ನಲ್ಲಿಗೇ ನಿಲ್ಲಿಸಿದನು.

ರುಬಷೊವ ಭುಜ ಕುಲುಕಿಸಿ ಸಿಗರೇಟನ್ನು ಹಚ್ಚಿ ಸಂಚಾರದಲ್ಲಿ ಮಗ್ನನಾದನು. ಬರಲಿರುವ ಆಪತ್ತುಗಳನ್ನು ನೆನಸಿ ಅವನಿಗೇಕೋ ಸಂತೋಷವೇ ಅನಿಸಿದುದು ಪರಮಾಶ್ಚರ್ಯ. ನಿರಾಶೆ ಹರಿಯಿತು, ತಲೆಯ ಭಾರ ಇಳಿಯಿತು, ನರಗಳ ಶೈಥಿಲ್ಯ ಮಾಯವಾಯಿತು. ಮುಖ, ತೋಳು, ಎದೆಗಳನ್ನು ವಾಶ್‌ಬೇಸಿನ್ನಿನ ತಣ್ಣೀರಲ್ಲಿ ತೊಳೆದು ಕೊಂಡು, ಬಾಯಿಯೊಳಗೆ ನೀರುಹಾಕಿ ಸ್ವಚ್ಛಮಾಡಿಕೊಂಡು, ಕರವಸ್ತ್ರ ದಲ್ಲಿ ಒರಸಿಕೊಂಡನು. ಯಾವುದೋ ಒಂದೆರಡು ರಾಗಗಳಲ್ಲಿ ಸಿಳ್ಳು ಹಾಕಲು ಯತ್ನಿಸಿದನು, ಎಂದಿನಂತೆ ಸಿಳ್ಳೇನೋ ಬಂತು, ಆದರೆ ರಾಗ ತಪ್ಪುತಪ್ಪಾಗಿತ್ತು. ಕೆಲವು ದಿನಗಳ ಹಿಂದೆ ಅವನ ಅಪಸ್ವರದ ತಾನವನ್ನು ಕೇಳಿ ಯಾರೋ ಅಂದಿದ್ದರು: 'ಒಂದನೆಯ ನಂಬರಿನವನಿಗೆ ಸಂಗೀತ ಬರುತ್ತಿದ್ದರೆ ನಿನ್ನನ್ನು ಇಷ್ಟು ಹೊತ್ತಿಗೇ ಕೊಂದುಬಿಡಲು ಅವನಿಗೊಂದು ನೆಪ ಸಿಗುತ್ತಿತ್ತು'

'ನೆಪವಿಲ್ಲದಿದ್ದರೂ ಆಗುವುದು ಅದೇ ಗತಿ' ಎಂದು ಅದಕ್ಕೆ ರುಬಷೊವ ನಿರ್ಯೋಚನೆಯಿಂದ ಉತ್ತರಿಸಿದ್ದನು. ಕೊನೆಯ ಸಿಗರೇಟನ್ನೂ ಹಚ್ಚಿ ಹಗುರವಾದ ತಲೆಯಲ್ಲಿ ಪಾಟಿಸವಾಲಿನ ಸಮಯ ತಾನು ಏನೇನು ಹೇಳಬೇಕೆಂಬುದನ್ನು ಯೋಚಿಸತೊಡಗಿದನು. ವಿದ್ಯಾರ್ಥಿಯಾಗಿದ್ದ ಕಾಲದಲ್ಲಿ ಪರೀಕ್ಷೆ ಬರುವಾಗ ಯಾವ ಆತ್ಮವಿಶ್ವಾಸ, ಅವಿಚಲ ಧೈರ್ಯ ಅವನಲ್ಲಿದ್ದುವೋ ಅವು ಈಗಲೂ ಅವನ ಜೀವವನ್ನು ತುಂಬುತ್ತಿದ್ದಂತೆ ಅನಿಸಿತು. 'ಉಗಿಸ್ನಾನ'ದ ವಿಷಯ ತನಗೆ ತಿಳಿದಿರುವ ಪ್ರತಿ ವಿವರವನ್ನೂ ಬಿಡಿಸಿ ಬಿಡಿಸಿ ರುಬಷೊವ ನೆನಪಿಗೆ ತರಲು ಯತ್ನಿಸಿದನು. ಸಂದರ್ಭವನ್ನು ಯಥಾವತ್ತಾಗಿಯೂ, ಕೂಲಂಕಷವಾಗಿಯೂ ಊಹಿಸಿಕೊಂಡು ತನ್ನ ಪ್ರತಿವರ್ತನೆಗಳೇನಾಗಬಹುದೆಂದು ಅಂದಾಜು ಹಾಕಿದನು. ಯಾವ ಪ್ರಸಂಗಕ್ಕೂ ಮೊದಲೇ ಮನಸ್ಸಿನ ಸಿದ್ಧತೆ ಮಾಡಿಟ್ಟಿರಬೇಕಾದ್ದು ಮುಖ್ಯ. ಅವನು ಯೋಚಿಸದ ಯಾವ ದಂಡನೆ

ಯನ್ನೂ ಆವರು ರುಬಷೊವಗೆ ಕೊಡುವಂತಿಲ್ಲ, ಅವರೆಲ್ಲಷ್ಟು ಹಿಂದಿನ ವರಂತೆ ಇವರಿಗೂ ಅಪಯಶಸ್ಸು ಕಟ್ಟಿಟ್ಟದ್ದು. ರುಬಷೊವನ ಬಾಯಿಯಿಂದ ಅವನಿಗೆ ಬೇಡವೆಂದು ತೋರಿದ ಯಾವ ಮಾತನ್ನೂ ಅವರು ಹೊರಡಿಸುವ ಹಾಗಿರಲಿಲ್ಲ. ಚಿತ್ರಹಿಂಸೆ ಒಮ್ಮೆ ಬೇಗನೇ ಆರಂಭವಾದರಾಗುತ್ತಿತ್ತು ಎಂದೆನಿಸಿತು ರುಬಷೊವಗೆ.

ರಿಚರ್ಡ ಮತ್ತು ಟ್ಯಾಕ್ಸಿಡ್ರೈವರ ಛಾರ್ಜು ಕೊಡಲಿಲ್ಲವೆಂದು ತನ್ನ ಬೆನ್ನುಹತ್ತಿ ಬರುತ್ತಿದ್ದ ಕನಸಿನ ನೆನಪಾಯಿತು ರುಬಷೊವಗೆ.

ವಿಚಿತ್ರವಾದ ಮಂದಹಾಸವನ್ನು ಬೀರುತ್ತ ಆತ 'ನನ್ನ ಛಾರ್ಜು ನಾನು ಕೊಟ್ಟೇ ಕೊಡುತ್ತೇನೆ' ಎಂದು ಆಲೋಚಿಸಿದನು.

ಕೊನೆಯ ಸಿಗರೇಟು ಮುಗಿದು ಬೆರಳಿನ ತುದಿ ಸುಟ್ಟ ಮೇಲೆ ರುಬಷೊವ ಅದನ್ನು ಜಾರಿಸಿದನು. ನೆಲದಲ್ಲಿ ಬಿದ್ದ ಕೆಂಡವನ್ನು ತುಳಿಯಬೇಕೆಂದು ಯೋಚಿಸಿದರೂ ಹಾಗೆ ಮಾಡದೆ ಉರಿಯುವ ಆ ತುಂಡನ್ನು ತೆಗೆದು ಹಿಂಗೈಯ ರಕ್ತನಾಳಗಳ ಮಧ್ಯೆ ಇರಿಸಿ ತಿಕ್ಕಿದನು. ಅರ್ಧ ಮಿನಿಟಿನ ತನಕ--ಸರಿಯಾಗಿ ವಾಚಿನ ಸೆಕೆಂಡಮುಳ್ಳನ್ನು ನೋಡಿಕೊಂಡು--ಸಿಗರೇಟಿನ ಉರಿಯನ್ನು ಆರಿಸಿದನು. ರುಬಷೊವಗೆ ತನ್ನ ಮೇಲೆ ಆನಂದ, ಅಭಿಮಾನ ಉಂಟಾದುವು: ಬೆಂಕಿಯ ಉರಿಗೆ ಹಿಂಗೈ ಒಮ್ಮೆಯೂ ಹಿಂದಕ್ಕೆ ಸೆಳೆಯಲಿಲ್ಲ: ಮತ್ತೆ ರುಬಷೊವನ ಸಂಚಾರ ಆರಂಭವಾಯಿತು.

ಬಾಗಿಲ ತೂತಿನಿಂದ ರುಬಷೊವನನ್ನು ಸ್ವಲ್ಪ ಹೊತ್ತಿನಿಂದ ದಿಟ್ಟಿಸುತ್ತಿದ್ದ ಕಣ್ಣು ಈಗ ಅಲ್ಲಿಂದ ಮಾಯವಾಯಿತು.

## ೧೧

ಮಧ್ಯಾಹ್ನ ಊಟದ ಮೆರವಣಿಗೆ ಹೋಗುತಿತ್ತು. ಈ ಸಲವೂ ರುಬಷೊವನ ಕೋಣೆಯನ್ನು ಬಿಟ್ಟೇ ಅದು ಮುನ್ನಡೆಯಿತು. ಬಾಗಿಲ ತೂತಿನಿಂದ ಏನಿದೆ ಎಂದು ನೋಡಿ ಬಾಯೂರುವುದು ಅಪಮಾನವೆಂದು ಭಾವಿಸಿ ಆತ ತಡೆದರೂ ಪದಾರ್ಥಗಳ ವಾಸನೆ ಮೂಗಿಗೆ ಬಡಿಯುತ್ತಿತ್ತು. ಒಳ್ಳೆಯ ವಾಸನೆ.

ಬರಬರುತ್ತ ಅವನಿಗೆ ಸಿಗರೇಟಿನ ಬಯಕೆ ಬಲವಾಯಿತು. ಮನಸ್ಸನ್ನು ಸ್ಥಿರಗೊಳಿಸಿ ಒಂದು ವಿಚಾರದಲ್ಲಿ ಕೇಂದ್ರೀಕರಿಸುವ ಸಲುವಾಗಿ ಹೇಗಾದರೂ ಮಾಡಿ ಸಿಗರೇಟ ತರಿಸಿಕೊಳ್ಳದೆ ಉಪಾಯವಿರಲಿಲ್ಲ. ಆಹಾರಕ್ಕಿಂತ ಸಿಗರೇಟೇ ಮುಖ್ಯವಾದುದು. ಊಟದ ವಿತರಣೆಯು ಮುಗಿದು ಅರ್ಧ ತಾಸಿನ ವರೆಗೆ ರುಬಷೊವ ಸುಮ್ಮನಿದ್ದು ಆ ಬಳಿಕ ಬಾಗಿಲು ಗುದ್ದಲಾರಂಭಿಸಿದನು. ಮುದಿ ಕಾವಲುಗಾರನು ಬಂದು ಏನು ಬೇಕೆಂದು ಕೇಳಲು ಸುಮಾರು ಕಾಲು ತಾಸು ಹಿಡಿಯಿತು.

'ಕ್ಯಾಂಟೀನಿನಿಂದ ನನಗೆ ಸಿಗರೇಟ ತಂದುಕೊಡು' ಎಂದು ರುಬಷೊವ ಬೇಡಿದನು,

'ನಿನ್ನ ಬಳಿ ಜೈಲಿನ ಕೂಪನ್ ಇದೆಯೋ?'

'ನಾನು ಒಳಗೆ ಬರುವಾಗ ನನ್ನ ಹಣವನ್ನು ತೆಗೆದುಕೊಂಡಿದ್ದಾರೆ.'

'ಹಾಗಾದರೆ ಅದರ ಬದಲು ಕೂಪನ್ ಕೊಡುವ ತನಕ ನೀನು ಕಾಯಬೇಕು.'

'ನಿಮ್ಮ ಈ ಮಾದರಿ ಸಂಸ್ಥೆಯಲ್ಲಿ ಕೂಪನ್ ಸಿಗಲು ಎಷ್ಟು ಕಾಲ ಹಿಡಿಯುತ್ತದೋ?'

'ಬೇಕಾದರೆ ಅರ್ಜಿ ಬರೆದು ದೂರು ಕೊಡಬಹುದು'

'ನನ್ನ ಹತ್ತಿರ ಕಾಗದ, ಪೆನ್ಸಿಲ್ ಯಾವುದೂ ಇಲ್ಲವೆಂದು ನಿನಗೆ ತಿಳಿಯದೆ?'

'ಅದಕ್ಕೂ ಕೂಪನ್ ಬೇಕು' ಎಂದು ವಾರ್ಡರ ನಿರ್ವಿಕಾರನಾಗಿ ಹೇಳಿದನು.

ರುಬಷೊವಗೆ ಸಿಟ್ಟು ಉಕ್ಕಿ ಬರತೊಡಗಿತು. ಎದೆ, ಗಂಟಲುಗಳಲ್ಲಿ ಉಸಿರುಕಟ್ಟಿದಂತಾಯಿತು. ಕನ್ನಡಕದಾಚೆಗೆ ತೋರುವ ಕಣ್ಣುಗೊಂಬೆಗಳು ಹೊಳೆಯುತ್ತಿದ್ದುದನ್ನೂ, ರುಬಷೊವನ ಚಹರೆಯು ಅವನ ಸರ್ವವ್ಯಾಪಿ ವರ್ಣಚಿತ್ರಗಳ ಹೋಲುವಿಕೆಯನ್ನು ಜ್ಞಾಪಿಸುತ್ತಿದ್ದುದನ್ನೂ, ವಾರ್ಡರ ಗುರುತಿಸಿದನು: ಆತ ತಿರಸ್ಕಾರದಿಂದ ನಕ್ಕು ಒಂದು ಹೆಜ್ಜೆ ಹಿಂದೆ ಸರಿದನು.

'ಗೊಬ್ಬರದ ಗುಪ್ಪೆ!' ಎಂದು ರುಬಷೊವ ವಾರ್ಡರನಿಗೆ ಛೀಗುಟ್ಟಿ ಕಿಟಿಕಿಯ ಬಳಿಗೆ ಸರಿದನು.

'ನೀನು ಅಪಮಾನಕರವಾದ ಮಾತನ್ನು ಉಪಯೋಗಿಸಿದ್ದಿ ಎಂದು ನಾನು ವರದಿ ಮಾಡುತ್ತೇನೆ' ಎಂದು ಹೇಳಿ ಮುದಿಯನು ಕವವನ್ನೆಳೆದು ಕೊಂಡನು.

ರುಬಷೊವ ಕನ್ನಡಕವನ್ನು ತೋಳಿನಿಂದ ಒರಸಿಕೊಂಡು ಉಸಿರು ಸರಳವಾಗುವವರೆಗೆ ಕಾದನು. ಸಿಗರೇಟ ಇಲ್ಲದಿದ್ದರೆ ತನ್ನ ಸ್ಥೈರ್ಯವೇ ಇಂಗಿಹೋದೀತೆಂದು ಬಗೆದು ಹತ್ತು ಮಿನಿಟು ತಡೆದು ೪೦೨ರವನಿಗೆ 'ನಿನ್ನ ಹತ್ತಿರ ಸಿಗರೇಟ್ ಇರಬಹುದೇ?' ಎಂದು ವಿಚಾರಿಸಿದನು.

ಸ್ವಲ್ಪ ಹೊತ್ತಿನ ಮೇಲೆ '**ನಿನಗಾದರೆ ಇಲ್ಲ**' ಎಂದು ಉತ್ತರ ದೊರೆಯಿತು.

ಗೋಡೆಯ ಆಚೆಗಿನ ತರುಣ ಸೇನಾಧಿಕಾರಿ ಏನು ಯೋಚಿಸಿ ಹೀಗೆ ಹೇಳುತ್ತಿರಬಹುದು? ಈತನಿಗೆ ತಕ್ಕ ಜವಾಬು ಕೊಡುತ್ತಿದ್ದೇನೆಂದು ಭಾವಿಸಿ ಹಲ್ಲು ಕಿರಿಚುತ್ತಿರಬಹುದೇ? ನನ್ನವರೆಷ್ಟು ಜನರನ್ನು ಕೊಂದಿದ್ದೀಯಾ ಅದಕ್ಕೆ ನಿನ್ನ ಗತಿ ಹೀಗಾದುದು ಚೆನ್ನಾಯಿತು ಎಂದು ಈ ರೀತಿ ಸೇಡು ತೀರಿಸುತ್ತಿರಬಹುದೆ? ಗೋಡೆಯ ಆಚೆ ಬದಿಯಲ್ಲಿ ರುಬ ಷೊವಗೆ ಮುಖ ಮಾಡಿ ಆ ತರುಣ ನಿಂತಿರಬಹುದು. ಹೌದು, ತಾನು ಕೊಂದವರೆಷ್ಟಾಗಬಹುದು? ಎಂದು ರುಬಷೊವ ಲೆಕ್ಕ ಹಾಕಲು ಯತ್ನಿ ಸಿದನು. ಆದರೆ ಬಹಳ ಹಿಂದೆ ಯಾದವೀ ಕಲಹದ ಸಂದರ್ಭದಲ್ಲಿ ನಡೆದ ಆ ದುರ್ಘಟನೆಯು ಈಗ ಸರಿಯಾಗಿ ನೆನಪಿಗೇ ಬರಲೊಲ್ಲದು. ಇರ ಬಹುದು, ಎಪ್ಪತ್ತರಿಂದ ನೂರು ಜನರ ವರೆಗೆ ಇರಬಹುದು. ಅದರಲ್ಲೇ ನಾಯಿತು? ಅದೇನೂ ರಿಚರ್ಡನ ಕೇಸಿನ ಹಾಗಲ್ಲ, ಅದು ಬೇರೆಯೆ ಮಟ್ಟ ದಲ್ಲಿ ಜರಗಿದ ಘಟನೆ. ಇವತ್ತಿಗೂ ರುಬಷೊವ ಆಗ ನಡೆದಂತೆ ನಡೆಯಲು ಸಿದ್ಧನು. ಕ್ರಾಂತಿಯ ದೆಸೆಯಿಂದ ಒಂದನೆಯ ನಂಬರಿನವನಿಗೆ ಪಟ್ಟ ದೊರೆತರೂ ಚಿಂತಿಲ್ಲ, ಕ್ರಾಂತಿಯ ಯಶಸ್ಸಿಗೋಸ್ಕರ ಬೇಕಾದಷ್ಟು ಬಲಿ ಕೊಡಲು ರುಬಷೊವ ಹಿಂಜರಿಯಲಾರನು.

ಆಂತರಿಂದ ತನ್ನನ್ನು ಬೇರ್ಪಡಿಸುವ ಗೋಡೆಯನ್ನು ನೋಡಿ ಅದೇನೇ ಇದ್ದರೂ ನಿನಗೂ ನನಗೂ ಏತಕ್ಕೆ ವೈರ? ನಾನು ನಿನಗೇನೂ ಕೊಡಬೇಕಾದ್ದಿಲ್ಲ, ನನಗೂ ನಿನಗೂ ಸಮಾನವಾಗಿ ನಡೆಯುವ ವಿಚಾರದ ನಾಣ್ಯವೂ ಇಲ್ಲ, ಭಾಷೆಯೂ ಇಲ್ಲ........ಹೀಗಿದ್ದೂ ಯಾತಕ್ಕೆ ಈ ರೀತಿ ವರ್ತಿಸುವಿ? ಎಂದು ರುಬಷೊವ ಬೇಸರ ಪಟ್ಟನು. ಆಂತ ಸಿಗರೇಟ ಹೊತ್ತಿಸಿ ಅದರ ಹೊಗೆಯನ್ನು ಗೋಡೆಯ ಮೇಲೆ ಊದುತ್ತಿರಬೇಕೆಂದು ಕಲ್ಪನೆ ಮಾಡಿಕೊಂಡನು.

ಆಂತರಿಂದ ತಟ್ಟುವ ಸದ್ದು ಮರಳಿ ಕೇಳಿಸಿತು. ರುಬಷೊವ ಗೋಡೆಯ ಪಕ್ಕಕ್ಕೆ ಸರಿದನು........**ನಿನಗೆ ಸಿಗರೇಟು ಕಳಿಸುತ್ತೇನೆ'** ಎಂಬ ಮಾತು ಕೇಳಿಸಿತು. ತದನಂತರ ಆಂತ ತನ್ನ ಕೋಣೆಯ ಬಾಗಿಲು ಗುದ್ದುವ ಸದ್ದು ಕೇಳಿಸಿತು.

ರುಬಷೊವ ಆಲಿಸುತ್ತ ನಿಂತನು. ಮುದುಕ ಕಾವಲುಗಾರನು ಓಡಿ ಬಂದು ಆಂತರ ಬಾಗಿಲು ತೆರೆಯದೆ ತೂತಿನಿಂದಲೇ 'ಏನು ಬೇಕು?' ಎಂದು ಕೇಳಿದನು. ರುಬಷೊವಗೆ ಆಂತರ ಸ್ವರ ಹೇಗಿದೆ ಎಂದು ಕೇಳುವ ಆಸೆ ಇದ್ದರೂ ಆತ ಏನು ಹೇಳಿದನೆಂಬುದು ಕೇಳುತ್ತಿರಲಿಲ್ಲ. ಮುದುಕನು ರುಬಷೊವಗೂ ಕೇಳಿಸುವಷ್ಟು ಗಟ್ಟಿಯಾಗಿ 'ಅದಾಗುವುದಿಲ್ಲ. ನಿಯಮಕ್ಕೆ ವಿರುದ್ಧ' ಎಂದು ನುಡಿದನು. ಅದಕ್ಕೆ ಆಂತ ಏನು ಹೇಳಿದನೋ, ವಾರ್ಡರನ ಮಾತಂತೂ ಕೇಳಿಸಿತು: 'ಅಪಮಾನಕರವಾದ ಮಾತುಗಳನ್ನು ಹೇಳಿರುವಿಯೆಂದು ನಿನ್ನ ಬಗ್ಗೆ ದೂರು ಕೊಡುತ್ತೇನೆ.' ಕಾವಲುಗಾರನ ಹೆಜ್ಜೆಯ ಧ್ವನಿ ದೂರ ದೂರ ತೆರಳುತ್ತಿತ್ತು.

ಸ್ವಲ್ಪ ಸಮಯ ತಡೆದು '**ನಿನಗೆ ಯೋಗ್ಯತೆ ಇಲ್ಲ**' ಎಂಬ ಸದ್ದು ಬಂದಿತು.

ರುಬಷೊವ ಆ ಮಾತಿಗೆ ಉತ್ತರ ಕೊಡಲಿಲ್ಲ. ಅತ್ತಿತ್ತ ನಡೆಯಲಾರಂಭಿಸಿದಾಗ ಗಂಟಲು ಸಿಗರೇಟಿಲ್ಲದೆ ತುರಿಸುತಿತ್ತು. ಆಂತರವನ ಯೋಚನೆಯಾಯಿತು. 'ಇನ್ನೊಮ್ಮೆ ಬೇಕಾದರೂ ಸರಿಯೇ, ಅಷ್ಟು ಮಂದಿಯನ್ನು ಗುಂಡಿನ ಬಾಯಿಗೆ ಕೊಡಬಲ್ಲೆ. ಆ ಮಾರ್ಗವು ಅಗತ್ಯವೂ ಹೌದು, ಯೋಗ್ಯವಾದ್ದೂ ಹೌದು ಎಂಬಾಗ ಏನು ಅಂಜಿಕೆ?

ಆದರೆ ಆಗತ್ಯವಾದ ಕರ್ತವ್ಯ ಮಾಡಿದಾಗಲೂ ಫಲವನ್ನು ಅನುಭವಿಸ ಬೇಕೆ?'

ಗಂಟಲಿನ ತುರಿಕೆ ಹೆಚ್ಚಿತು; ಹಣೆಯಲ್ಲಿ ಭಾರವು ಕವಿಯಿತು. ನಡೆಯುತ್ತಿದ್ದಂತೆ ಅಶಾಂತಿ ಅತಿಶಯವಾಯಿತು, ಆಲೋಚನೆ ಮಾಡು ವಾಗ ತುಟಿ ಅಲುಗಲು ಆರಂಭವಾಯಿತು.

ಯೋಗ್ಯ ಕೃತ್ಯಗಳಿಗೂ ಪಶ್ಚಾತ್–ಪರಿಣಾಮವಿದೆಯೆ? ಮನುಷ್ಯ ನಿಗೆ ತರ್ಕವಲ್ಲದೆ ಬೇರೊಂದು ಪ್ರಮಾಣವಿರಲು ಸಾಧ್ಯವೆ?

ಅಂಥ ಪ್ರಮಾಣವಿರುವುದರಿಂದಲೇ ಯೋಗ್ಯಕೃತ್ಯಗಳನ್ನು ಮಾಡಿ ದವನ ಋಣಭಾರ ಅತಿಶಯವಾಗುವುದೇ? ಬೇರೆಯವರು ತಾವೇನು ಮಾಡುತ್ತಿರಬಹುದೆಂಬ ಅರಿವಿಲ್ಲದೆ ಕರ್ಮನಿಯೋಜಿತರಾಗುವರು. ಆದರೆ ಯೋಗ್ಯ ಕರ್ಮಿಯು ತಿಳಿದು ಮಾಡುವವನು. ಆದುದರಿಂದ ಅವನ ಋಣಭಾರವು ಎರಡು ಪಟ್ಟು ಬೆಳೆಯುವುದೇ?

ಕಿಟಕಿಯಿಂದ ಮೂರನೆಯ ಹಾಸುಗಲ್ಲಿನ ಮೇಲೆ ರುಬಷೊವ ನಿಂತಿದ್ದನು.

ಇದೇನು? ಧಾರ್ಮಿಕ ಬುದ್ಧಿಭ್ರಂಶದ ಗಾಳಿ ಸುಳಿಯುತ್ತಿದೆಯೆ? ಈಗ ಕೆಲವು ಹೊತ್ತಿನಿಂದ ರುಬಷೊವ ಯಾರ ಹತ್ತಿರ ಮಾತನಾಡು ತ್ತಿದ್ದುದು? ಸ್ವಗತವೇ ತಾನೇ. ಹೀಗಾಯಿತಲ್ಲಾ ಎಂದು ಆತ ಸ್ವ– ಪರೀಕ್ಷೆಯಲ್ಲಿ ಮಗ್ನನಾಗಿರುವಾಗ ಅವನ ತುಟಿಗಳು ತಮ್ಮಿಷ್ಟಕ್ಕೆ ಅಲುಗಾಡುತ್ತಿದ್ದುವು. ಕೊನೆಗೆ 'ನಾನು ಋಣ ಸಲ್ಲಿಸಿಯೇ ಸಲ್ಲಿಸುವೆ' ಎಂಬ ಮಾತು ಅಲ್ಲಿಂದ ಹೊರಬಿದ್ದಿತು.

ಸೆರೆಬಿದ್ದಂದಿನಿಂದ ರುಬಷೊವಗೆ ಅಂಜಿಕೆಯಾದ್ದೆಂದರೆ ಈಗ. ಸಿಗರೇಟ ಹುಡುಕಿದನು, ಸಿಗಲಿಲ್ಲ, ಇಲ್ಲ.

ಅಷ್ಟರಲ್ಲಿ ಮಿದುವಾಗಿ ಗೋಡೆಯಲ್ಲಿ ಬಡಿತ ಆರಂಭವಾಯಿತು. ೪೦೨ ಸಂದೇಶ ಕಳಿಸುತ್ತಿದ್ದನು.

**'ಸೀಳ್ಬಾಯಿಯುವನು ನಿನಗೆ ಶುಭಾಶಯ ಕಳಿಸುತಿದ್ದಾನೆ'**

ಸಂದೇಶವನ್ನು ಕೇಳಿದ ಮೇಲೆ ರುಬಷೊವನ ಅಶಾಂತಿ ಇನ್ನಷ್ಟು ಕದಡಿತು.

**‘ಅವನ ಹೆಸರೇನಂತೆ?’** ಎಂದು ಆತ ಆಂದ್ರಿಸ್ನ ಕೇಳಿದನು.

**‘ಅವನು ಹೇಳುವುದಿಲ್ಲ, ಶುಭಾಶಯ ಮಾತ್ರ ಕಳಿಸಿದ್ದಾನೆ.’**

## ೧೨

ಮಧ್ಯಾಹ್ನ ರುಬಷೊವನ ಸ್ಥಿತಿ ಮತ್ತಷ್ಟು ಕೆಟ್ಟಿತು. ಆಗಾಗ ಅವನ ಮೈಯಲ್ಲಿ ನಡುಕ ಬರಹತ್ತಿತು. ಹಲ್ಲುನೋವು ಕಣ್ಣಿನ ನರಕ್ಕೆ ಸಂಬಂಧಿಸಿದ್ದುದರಿಂದ ಅತ್ಯಧಿಕವಾಗಿ ಸಿಡಿಯಲಾರಂಭಿಸಿತು. ಸೆರೆಯಾದ ಗಳಿಗೆಯಿಂದ ಆತ ಏನನ್ನೂ ತಿನ್ನದಿದ್ದರೂ ಆತನಿಗೆ ಹಸಿವೆಯಾಗುತ್ತಿರಲಿಲ್ಲ. ಬುದ್ಧಿಯನ್ನು ಹತೋಟಿಗೆ ತರಬೇಕೆಂದರೆ ಮೈ ನಡುಕವೂ, ಗಂಟಲು ತುರಿಕೆಯೂ ಬಿಡುತ್ತಿದ್ದಿಲ್ಲ. ಅವನ ವಿಚಾರಗಳು ಎರಡು ಧ್ರುವಗಳ ಸುತ್ತಲೂ ಚಕ್ರದಂತೆ ತಿರುಗುತ್ತಿದ್ದುವು: ಸಿಗರೇಟಿನ ತೀವ್ರ ಆಕಾಂಕ್ಷೆಯ ಧ್ರುವದ ಸುತ್ತಲೊಮ್ಮೆ, ಋಣಸಲ್ಲಿಸುತ್ತೇನೆಂಬ ವಾಕ್ಯದ ಸುತ್ತಲೊಮ್ಮೆ.

ನೆನಪುಗಳ ಮೊತ್ತ ರುಬಷೊವನ ಮೇಲೆ ಕವಿದುವು, ಕಿವಿಯಲ್ಲಿ ಗುಂಯ್ ಎಂದು ನಿನದಿಸುತ್ತಿದ್ದುವು. ಮುಖಗಳೂ ಸ್ವರಗಳೂ ಕಣ್ಣಿಗೆ ತೋರಿ ಬಳಿಕ ತಿರೋಹಿತವಾಗುವುವು; ಅವನ್ನು ಗಟ್ಟಿಯಾಗಿ ಹಿಡಿದರೆ ಅವನಿಗೆ ಗಾಯವಾಗುವುದು. ಮುಟ್ಟಿದಲ್ಲಿ ನೋವು, ವ್ರಣ ಸಿಕ್ಕುವಂತಿತ್ತು ಅವನ ಗತಕಾಲದ ಐತಿಹ್ಯ. ಅವನ ಗತಕಾಲವೆಂದರೆ ಯಾವುದು? ಚಳವಳಿ, ಪಕ್ಷ. ಅವನ ವರ್ತಮಾನ ಭವಿಷ್ಯಗಳೂ ಹಾಗೆಯೇ ಪಕ್ಷದ ವರ್ತಮಾನ ಭವಿಷ್ಯದ ಮೇಲೆ ಅವಲಂಬಿಸಿರುವುದು ಮಾತ್ರವೇ ಅಲ್ಲ; ಪಕ್ಷದ ಭವಿಷ್ಯವೆಂದರೂ, ರುಬಷೊವನ ಭವಿಷ್ಯವೆಂದರೂ ಒಂದೇ, ಏಕಮೇವಾದ್ವಿತೀಯ. ಈಗ ಸವಾಲು ಕೊಡುವ ಹೊಣೆ ಬಿದ್ದಿರುವುದು ರುಬಷೊವನ ಗತಕಾಲದ ಮೇಲೆ. ಪಕ್ಷದ ಸುಖೋಷ್ಣ ಜೀವಂತ ದೇಹದಲ್ಲಿ ರಕ್ತಸೋರುವ ಕೀವು ಸಾಯಿವ ಮಹಾ ವ್ರಣಗಳು ಎದ್ದು ದೇಹವನ್ನು ಮುಚ್ಚಿದ್ದುವು. ಇತಿಹಾಸದಲ್ಲಿ

ಎಂದು ಎಲ್ಲಿ ಇಂಥ ಅಂಗವಿಕಲ ಸಂತರ ಪೀಳಿಗೆ ಕಣ್ಣಿಗೆ ಬಿದ್ದೀತು? ದೊಡ್ಡದೊಂದು ಉದ್ದೇಶಕ್ಕೆ ಇಷ್ಟು ಕೆಟ್ಟ ಪ್ರತಿನಿಧಿಗಳು ದೊರೆತ ಉದಾಹರಣೆ ಎಲ್ಲಿ ಸಿಕ್ಕೀತು? ಪಾರ್ಟಿಯು ಇತಿಹಾಸದಲ್ಲಿ ಅಡಕವಾಗಿರುವ ಸಂಕಲ್ಪ ಚೈತನ್ಯದ ಪ್ರತೀಕವೆಂದಾದಲ್ಲಿ ಇತಿಹಾಸವು ಅಂಗವೈಕಲ್ಯದಿಂದ ನರಳುತ್ತದೆನ್ನಬೇಕಾದೀತು.

ಕೋಣೆಯ ಗೋಡೆಯಲ್ಲಿದ್ದ ತೇವದ ಕಲೆಗಳನ್ನೆ ರುಬಶೊವ ನೋಡ ಹತ್ತಿದನು. ಮಂಚದ ಮೇಲಿನ ಹೊದಿಕೆಯನ್ನು ಸರಕ್ಕನೆ ಎಳೆದು ಮೈತುಂಬ ಹೊದ್ದುಕೊಂಡು ಬಾಗಿಲಿಂದ ಕಿಟಕಿಯ ವರೆಗಿನ ಸಂಚಾರ ಕ್ರಮವನ್ನು ವೇಗವಾಗಿ ಕೈಕೊಂಡನು. ಆದರೂ ಮೈನಡುಕ, ಚಳಿ, ಕಡಮೆಯಾಗಲಿಲ್ಲ. ಚಳಿಯು ಬೆನ್ನೆಲುಬಿನಲ್ಲಿ ಹರಿಯುವಂತೆ ಕಾಣುತ್ತಿತ್ತು. ಕಿವಿಯಲ್ಲಿ ಗುಂಯ್‌ಗುಡುವುದರ ನಡುನಡುವೆ ಯಾವುದೋ ಅಸ್ಪಷ್ಟ ಸ್ವರಗಳು ಕೇಳುತ್ತಿದ್ದುವು. ಈ ಸ್ವರಗಳು ಯಾರವು, ಎಲ್ಲಿಂದ ಬಂದುವು, ಹೊರಗಿನ ನಡವೆಯಿಂದಲೋ ಅಥವಾ ಮನೋವಿಕಲ್ಪದಿಂದಲೋ? ಎಂದು ಅವನಿಗೆ ತಿಳಿಯದು. ಬಹುಶಃ ಹಲ್ಲಿಂದ ಕಣ್ಣಿನಕಡೆಗೆ ಹೋಗುವ ನರದ ಬೇರು ಕಡಿದುದರಿಂದ ಈ ರೀತಿ ಪಿಕಲಾಟವೆಂದು ತೋರುತ್ತದೆ. ನಾಳೆ ಡಾಕ್ಟರರಿಗೆ ತೋರಿಸಬೇಕು, ಆದರೆ ಆ ತನಕ ಸುಮ್ಮಗಿರಲಾದೀತೆ? ಎಷ್ಟು ಕೆಲಸ ಬಾಕಿ ಇದೆ? ಪಾರ್ಟಿಯ ಅಂಗವೈಕಲ್ಯದ ಕಾರಣವನ್ನು ಶೋಧಿಸಿ ತೆಗೆಯಬೇಕು. ನಮ್ಮ ಸೂತ್ರಗಳೆಲ್ಲ ಸರಿಯಾದರೂ ಪರಿಣಾಮಗಳೆಲ್ಲ ತಪ್ಪಾದುವು. ರೋಗಗ್ರಸ್ತವಾದ ಇಪ್ಪತ್ತನೆಯ ಶತಮಾನದ ರೋಗ ನಿದಾನದಲ್ಲಿ ನಾವು ಗೆದ್ದೆವು. ಸೂಕ್ಷ್ಮದರ್ಶಿಯನ್ನು ಕೆಳಗಿಟ್ಟು ರೋಗದ ಕಾರಣಗಳನ್ನು ನಿಷ್ಕರ್ಷಿಸಿದೆವು. ಆದರೆ ಗುಣ ಮಾಡುವ ಬಯಕೆಯಿಂದ ಶಸ್ತ್ರವನ್ನು ಮುಟ್ಟಿಸಿದ ಜಾಗದಲ್ಲಿಯೇ ಕಜ್ಜಿಗಳು, ಬೊಕ್ಕೆಗಳು ಏಳ ಹತ್ತಿದುವು. ನಮ್ಮ ಸಂಕಲ್ಪವು ಏನು ನಿಶ್ಚಲವಾಗಿತ್ತು, ಎಷ್ಟು ಪರಿಶುದ್ಧವಾಗಿತ್ತು! ನಮ್ಮ ಮೇಲೆ ಜನ ಪ್ರೀತಿಯ ವೃಷ್ಟಿ ಸುರಿಸಬೇಕಾಗಿತ್ತು. ಆದರೆ ಅವರು ಮಾಡುತ್ತಿರುವುದೇನು? ದ್ವೇಷ. ಅದೂ ಎಂಥ ದ್ವೇಷ, ಎಂಥ ಜಿಗುಪ್ಸೆ!

ನಾವು ನಿಮಗೋಸ್ಕರ ಸತ್ಯವನ್ನು ತಂದೆವು; ಆದರೆ ನಮ್ಮ ಬಾಯಿಯಲ್ಲಿ ಅದಕ್ಕೆ ಸುಳ್ಳಿನ ಧ್ವನಿ ಹುಟ್ಟಿತು. ನಾವು ನಿಮಗೆ ಸ್ವಾತಂತ್ರ್ಯವನ್ನು ತಂದೆವು; ಆದರೆ ಅದು ನಮ್ಮ ಕೈಯಲ್ಲಿ ಚಾಟಿಯ ರೂಪವನ್ನು ತಳೆಯಿತು. ನಾವು ನಿಮಗೆ ಚೇತನಾಮಯವಾದ ಜೀವನವನ್ನು ತಂದೆವು; ಆದರೆ ನಮ್ಮ ಸ್ವರ ಕೇಳಿಸಿದಲ್ಲಿ ಮರಗಳು ಒಣಗಿದುವು. ಎಲೆ ಬಾಡಿತು, ಒಣಎಲೆಗಳ ಮರ್ಮರ ಹೊರಟಿತು. ನಾವು ನಿಮಗೆ ಭವಿಷ್ಯದ ಆಸೆಯನ್ನು ತಂದೆವು; ಆದರೆ ನಮ್ಮ ನಾಲಗೆಯಿಂದ ಉಗ್ಗಲು ಮತ್ತು ವಿಕಟಸ್ವರ ಹೊರಟವು........

ರುಬಷೊವ ಒಮ್ಮೆಲೆ ಸಡುಗಿದನು, ಅವನ ಮನಸ್ಸಿನ ಮುಂದೆ ಮರದ ದಡೆ ಹಾಕಿದ ಒಂದುದೊಡ್ಡ ಫೋಟೋಗ್ರಾಫ ಸುಳಿಯಿತು—ಪಾರ್ಟಿಯ ಪ್ರಥಮ ಕಾಂಗ್ರೆಸಿನ ಪ್ರತಿನಿಧಿಗಳ ಚಿತ್ರ ಅದು. ಉದ್ದವಾದ ಮರದ ಮೇಜಿನ ಸುತ್ತಲೂ ಕೆಲವರು ಮೊಣಕೈಯೂರಿಕೊಂಡು, ಕೆಲವರು ಕೈಯನ್ನು ಮೊಣಕಾಲಿನ ಮೇಲೆ ಅಧರಿಸಿಕೊಂಡು ಗಡ್ಡವಂತರಾದ ಆ ಮಹಾನುಭಾವರು ಕೆಮರದ ಮಸೂರವನ್ನೇ ದಿಟ್ಟಿಸಿ ನೋಡುತ್ತಿದ್ದರು. ಪ್ರತಿ ತಲೆಯ ಮೇಲೂ ಒಂದು ವೃತ್ತವನ್ನೆಳೆದು ಅದರಲ್ಲಿ ಒಂದು ಸಂಖ್ಯೆಯನ್ನು ಬರೆಯಲಾಗಿತ್ತು. ಎಲ್ಲರೂ ಗಂಭೀರವದನರಾಗಿದ್ದರು—ಟಾರ್ಟರ್ ಕಣ್ಣಿನ, ಮುಖದಲ್ಲಿ ನಗು ಮಿನುಗುವ ಅಧ್ಯಕ್ಷನೊಬ್ಬನ ಹೊರತು. ಗ್ರಾಮಾಂತರ ಪ್ರದೇಶದಲ್ಲಿರುವ ಸಣ್ಣ ಪಟ್ಟಣದ ನಗರ ಸಭಾಸದರಂತೆ ತೋರುವ ಈ ಗುಂಪೇ ಪ್ರಪಂಚದ ಅತಿ ಮಹೋನ್ನತ ಕ್ರಾಂತಿಯನ್ನು ಸೃಷ್ಟಿಸಲು ಮುಂದಾಗಿದ್ದುದು. ಹೊಸ ತಳಿಗೆ ಸೇರಿದವರಾಗಿದ್ದ ಈ ಕೆಲವೇ ಮಂದಿಗೆ ತತ್ತ್ವಜ್ಞಾನಿ-ಯೋಧರುಗಳೆಂದು ನಾಮಕರಣ ಮಾಡಬಹುದು. ವ್ಯಾಪಾರಕ್ಕಾಗಿ ಸಂಚರಿಸುವ ಏಜಂಟರಿಗೆ ಊರೂರಿನ ಹೋಟೇಲುಗಳ ಜ್ಞಾನವಿರುವಂತೆ ಇವರಿಗೆ ಇಡಿ ಯುರೊಪಖಂಡದ ನಾನಾ ದೇಶಗಳ ಸೆರೆಮನೆಯ ಪರಿಚಯವಿತ್ತು. ಅಧಿಕಾರವನ್ನು ನಿರ್ನಾಮಗೊಳಿಸುವ ಉದ್ದೇಶದಿಂದ ಅವರು ತಮಗೆ ಅಧಿಕಾರ ಬರಬೇಕೆಂದು ಕನಸು ಕಾಣುತ್ತಿದ್ದರು; ಜನರನ್ನು ಆಳಿಸಿಕೊಳ್ಳಲ್ಪಡುವ ಗುಲಾಮಗಿರಿಯಿಂದ ವಿಮೋಚನೆ

ಗೊಳಿಸುವ ಸಲುವಾಗಿ ಅವರು ಜನರನ್ನಾಳುವ ದಾರಿಯನ್ನು ಶೋಧಿಸು ತ್ತಿದ್ದರು. ಅವರ ವಿಚಾರಗಳೆಲ್ಲ ಆಚರಣೆಯಾಗಿ ಅವತರಿಸಿದುವು, ಕನಸುಗಳು ನೆನಸುಗಳಾದುವು. ಆದರೆ ಈಗ ಅವರೆಲ್ಲಿ? ಪ್ರಪಂಚದ ದಿಕ್ಕನ್ನೇ ತಿರುಗಿಸಿದ ಈ ಪ್ರಚಂಡರ ಮಿದುಳುಗಳಲ್ಲಿ, ಕೆಲವಕ್ಕೆ ಮುಂದಿನಿಂದ ಕೆಲವಕ್ಕೆ ಹಿಂದಿನಿಂದ ಸೀಸದ ಗುಂಡಿನ ಉಪಚಾರ ನಡೆದು ಹೋಯಿತು. ಇನ್ನುಳಿದವರು ವಿಶ್ವವ್ಯಾಪಿಗಳಾದರು, ಅಂದರೆ ದೇಶ ಭ್ರಷ್ಟರಾಗಿ ಯಾವು ಯಾವುವೊ ಮೂಲೆಗಳಲ್ಲಿ ಸೇರಿಕೊಂಡರು. ರುಬಷೊವ ಮತ್ತು ಒಂದನೆಯ ನಂಬರ ಕೂಡ ಆ ಪೈಕಿಯ ಜನರೇ.

ಚಳಿಯಲ್ಲಿ ರುಬಷೊವನ ದೇಹವು ಹೆಪ್ಪುಗಟ್ಟಿದ್ದಿತು, ಸಿಗರೇಟಿನ ಆಸೆ ಅವನಲ್ಲಿ ಉತ್ಕಟವಾಯಿತು. ಬೆಲ್ಜಿಯಮ್ ದೇಶದ ಹಳೆಯದೊಂದು ರೇವಿನಲ್ಲಿ ನಾವಿಕರು ಉಪಯೋಗಿಸುವಂಥ ಹೊಗೆ ನಳಿಗೆಯನ್ನು ಬಾಯಲ್ಲಿರಿಸಿಕೊಂಡ ಗೂನು ಬೆನ್ನಿನ ಕುಂಟ ಲೋವಿಯ ಸಂಗಡ ತಾನು ತಿರುಗುತ್ತಿದ್ದೇನೆಂದು ರುಬಷೊವಗೆ ಭಾಸ ವಾಯಿತು. ಉಪ್ಪುನೀರಿನ ಹುಲ್ಲೂ ಪೆಟ್ರೋಲೂ ಮಿಶ್ರಿತವಾಗಿ ಹೊರಡುವ ಕೊಳೆನಾತವು ಅವನ ಮೂಗಿಗೆ ಬಡಿಯುತಿತ್ತು, ಹಳೆಯ ನಗರಭವನದ ಗಡಿಯಾರವು ಸುಸ್ವರದಿಂದ ಗಂಟೆ ಬಾರಿಸುತಿತ್ತು, ಇಕ್ಕಟ್ಟಿನ ಬೀದಿಗಳ ಎರಡೂ ಬದಿಯ ಕಟಾಂಜನದಲ್ಲಿ ರೇವಿನ ಸೂಳೆಯರು ಬಟ್ಟೆಗಳನ್ನು ಒಣಹಾಕಿದ್ದರು. ರಿಚರ್ಡನ ಘಟನೆ ನಡೆದು ಎರಡು ವರ್ಷಗಳ ಮೇಲೆ ನಡೆದ ಕಥೆ ಇದು. ರುಬಷೊವನ ಮೇಲೆ ಯಾವ ಅಪರಾಧದ ಆರೋಪವನ್ನೂ ಸಿದ್ಧಗೊಳಿಸಲು ಅವರಿಂದ ಆಗಲಿಲ್ಲ. ಅವನನ್ನು ಅವರು ಸದೆಬಡಿದಾಗಲೂ, ಬಾಯಿಂದ ಹಲ್ಲುದುರಿಸಿ ಕಿವಿ ಕೆಪ್ಪಾಗುವಂತೆ ಹೊಡೆದು ಕನ್ನಡಕದ ಗಾಜು ಪುಡಿಪುಡಿಯಾದಾಗಲೂ ಕೂಡ ಅವನು ತುಟಿ ಎರಡು ಮಾಡಲಿಲ್ಲ. ಏನು ಕೇಳಿದರೂ ಅದನ್ನೆಲ್ಲ ಅಲ್ಲಗಳೆಯುತ್ತ, ಸಾಧ್ಯವಾದಲ್ಲೆಲ್ಲ ಜಾಗ್ರತೆಯಾಗಿ ಸುಳ್ಳು ಹೇಳುತ್ತ ಆತ ಅವರನ್ನು ಅಪ್ರತಿಭರನ್ನಾಗಿ ಮಾಡಿದ್ದನು. ಕೋಣೆಯಲ್ಲಿ ಅತ್ತ ಇತ್ತ ಸಂಚರಿಸಿದರೂ, ಎದ್ದು ನಿಲ್ಲಲಿಕ್ಕಾಗದ ಕತ್ತಲು ಕೊಠಡಿಯಲ್ಲಿ ನಾಗಾಲುಗಳಲ್ಲಿ ಹರಿದರೂ, ಹೊಡೆತದಿಂದ ಮೂರ್ಛೆ ತಪ್ಪಿ ತಣ್ಣೀರ

ಸೇಚನೆಯಿಂದ ಎಚ್ಚರವಾದರೂ ಸಿಗರೇಟಿದೆಯೇ ಎಂದು ತಡಕುತ್ತ ಮುರಳಿ ಸುಳ್ಳು ಹೇಳಲು ತಯಾರಾಗುತ್ತಿದ್ದನು. ತನಗೆ ಚಿತ್ರಹಿಂಸೆ ಕೊಡುವ, ತನ್ನನ್ನು ತಾತ್ಸಾರದಿಂದ ನೋಡುವ ಜನರನ್ನು ಕಂಡರೆ ಅವನಿಗೆ ಆಶ್ಚರ್ಯವೇ ಇರಲಿಲ್ಲ. ಸರ್ವಾಧಿಕಾರತ್ವ ಶಾಸನದ ಸಹಸ್ರ ಬಾಹುಗಳಿಗೂ ಅವನನ್ನು ಬಂಧಿಸುವುದು ಶಕ್ಯವಾಗಲಿಲ್ಲ. ಎಷ್ಟು ಔಡು ಕಚ್ಚಿದರೂ ಅವನ ಮೇಲೆ ಯಾವ ದೋಷವನ್ನೂ ಸಿದ್ಧಪಡಿಸಲು ಅವರಿಂದಾಗಲಿಲ್ಲ. ಬಿಡುಗಡೆಯಾದ ಬಳಿಕ ಅವನನ್ನು ಕ್ರಾಂತಿಯ ತವರ್ಮನೆ ಎನಿಸುವ ಅವನ ಸ್ವದೇಶಕ್ಕೆ ವಿಮಾನದಲ್ಲಿ ಕರೆದುಕೊಂಡು ಹೋದರು. ಅವನಿಗೋಸ್ಕರ ಉಪಾಹಾರ ಕೂಟಗಳೂ, ಉತ್ಸಾಹಿ ಜನತಾಸಭೆಗಳೂ, ಸೈನಿಕ ಕೂಚುಗಳೂ ನಡೆದುವು. ಒಂದನೆಯ ನಂಬರಿನವನು ಕೂಡ ಬಹಿರಂಗ ಸಭೆಗಳಲ್ಲಿ ಅವನೊಡನೆ ಇರುತ್ತಿದ್ದ ಹಲವು ಸಂದರ್ಭಗಳೂ ಒದಗಿದುವು.

ಸ್ವದೇಶವನ್ನು ನೋಡದೆ ಬಹಳ ವರ್ಷಗಳಾದುದರಿಂದಲೋ ಏನೋ, ಅಲ್ಲಿ ಬಹಳ ಬದಲಾವಣೆಗಳು ನಡೆದಿರುವಂತೆ ಅವನಿಗೆ ಅನಿಸಿತು. ಫೋಟೋಗ್ರಾಫಿನ ಗಡ್ಡವಂತರಲ್ಲಿ ಅರ್ಧವಾಸಿ ಜನರೂ ಉಳಿದಿರಲಿಲ್ಲ. ಅವರಲ್ಲಿ ಸಕಾಲದಲ್ಲಿ ಸತ್ತು ಪುಣ್ಯಭಾಜನನಾದ ತಾರ್ತರಿ ಓರೆಗಣ್ಣಿನ ಮುದುಕನನ್ನು ಬಿಟ್ಟು ಉಳಿದ ಯಾರ ಹೆಸರನ್ನೂ ಹೇಳುವಂತಿರಲಿಲ್ಲ, ಶಪಿಸದೆ ಅವರನ್ನು ಸ್ಮರಿಸುವಂತಿರಲಿಲ್ಲ. ಅವನೊಬ್ಬನಿಗೆ ಮಾತ್ರ 'ಪರಮಪಿತನಾದ ತಂದೆ'ಯೆಂದು ಪೂಜೆ ಸಲ್ಲುತಿತ್ತು, ಒಂದನೆಯ ನಂಬರಿನವನಿಗೆ ದೇವಸುತನ ಸ್ಥಾನವು ಪ್ರಾಪ್ಯವಾಗಿತ್ತು. ಮುದುಕನ ಮೃತ್ಯುಪತ್ರವನ್ನು ವಂಚನೆಯಿಂದ ತಿದ್ದಿ ಒಂದನೆಯ ನಂಬರಿನವನು ಆಸ್ತಿಗೆ ಹಕ್ಕುದಾರನಾಗಿದ್ದನೆಂದು ಜನರು ಗುಸುಗುಸು ಆಡಿಕೊಳ್ಳುತ್ತಿದ್ದರು. ಫೋಟೋದಲ್ಲಿದ್ದವರ ಪೈಕಿ ಹಿಂದುಳಿದ ಕೆಲವರನ್ನು ಈಗ ಗುರುತು ಹಿಡಿಯುವುದೇ ಕಷ್ಟವಾಗುತಿತ್ತು. ಅವರ 'ಗಡ್ಡದ ಸ್ಥಾನದಲ್ಲಿ ಒಳ್ಳೆ ಮುಖಕ್ಷೌರ ಮಾಡಿಸಿಕೊಂಡ ಮೋರೆಗಳಿದ್ದುವು. ಅವರಿಗೀಗ ಲೋಕವನ್ನುದ್ಧಾರ ಮಾಡುವ ಯಾವ ಭ್ರಮೆಯೂ ಇದ್ದಿಲ್ಲ. ಜೀವನದಲ್ಲಿ ಉತ್ಸಾಹವಿರಲಿಲ್ಲ. ಆಗಿಂದಾಗ ಒಂದನೆಯ ನಂಬರಿನವನು

ಅವರಲ್ಲಿ ಯಾರಾದರೊಬ್ಬನನ್ನು ಬಲಿಪಶುವಿನ ಸ್ಥಾನದಲ್ಲಿ ನಿಲ್ಲಿಸುವನು. ಆಗ ಅವರೆಲ್ಲ ಒಟ್ಟಾಗಿ ತಮ್ಮ ಪಾಪದ ಸಮಷ್ಟಿಸಂಗೀತವನ್ನು ಹಾಡಿ ಕೊಳ್ಳುವರು, ಎದೆಯನ್ನು ಹೊಡೆದುಕೊಳ್ಳುವರು. ಎರಡು ವಾರಗ ಳಾದರೂ ರುಬಷೊವಗೆ ಕೋಲು ಹಿಡಿದೇ ನಡೆಯಬೇಕಾಗಿತ್ತು, ಆದರೂ ಅವನು ಉತ್ಸಾಹದಿಂದ ವಿದೇಶ ಪ್ರಯಾಣವನ್ನು ಬೇಡಿದನು. ಹೊಗೆಯ ಮೋಡಗಳ ಮೂಲಕ ರುಬಷೊವನ್ನು ನೋಡುತ್ತ ಒಂದನೆಯ ನಂಬರಿ ನವನು 'ಏನು ಬಹಳ ಅವಸರದಲ್ಲಿರುವಂತೆ ಕಾಣುತ್ತದೆ' ಎಂದಿದ್ದನು. ಚಳವಳಿಯಲ್ಲಿ ೨೦ ವರ್ಷಗಳ ಕಾಲ ಜತೆಗಾರರಾಗಿ ದುಡಿದಿದ್ದರೂ ಅವ ರಿನ್ನೂ ಒಬ್ಬರೊಡನೊಬ್ಬರು ಸಲಿಗೆಯಿಂದ ಮಾತನಾಡುವ ಸ್ಥಿತಿಯಲ್ಲಿ ರಲಿಲ್ಲ. ಒಂದನೆಯ ನಂಬರಿನವನ ತಲೆಯ ಮೇಲೆ ಮುದುಕನ ಚಿತ್ರ ತೂಗುತಿತ್ತು. ಅವರ ಪಕ್ಕದಲ್ಲೇ ಇರುತ್ತಿದ್ದ ಪ್ರತಿನಿಧಿಮಂಡಲದ ಚಿತ್ರವು ಈಗ ಅಲ್ಲಿಂದ ಮಾಯವಾಗಿತ್ತು. ಸಂಕ್ಷಿಪ್ತವಾದ ಅವರ ಸಂವಾದ ಕೆಲ ಮಿನಿಟುಗಳ ವರೆಗೆ ಮಾತ್ರ ನಡೆಯಿತು, ಅದು ಮುಗಿದು ಬೀಳ್ಕೊಡುವ ಸಮಯ ಒಂದನೆಯ ನಂಬರ ಏನೋ ಒಂದು ವಿಶೇಷ ತರಹ ಕೈಕುಲು ಕಿದ್ದನು. ಈ ರೀತಿ ಕೈಕುಲುಕಲೂ, ಮಾತನಾಡುವಾಗ ಮುಂದೆ ನಡೆ ಯುವ ಏನೋ ಒಂದು ವಿಷಯವು ತಿಳಿದಿರುವಂತೆ ಆತ ತೋರಿಸಿಕೊಳ್ಳಲೂ ಏನು ಕಾರಣವಿರಬಹುದೆಂದು ರುಬಷೊವ ಬಹುತರವಾಗಿ ಆಲೋಚಿಸಿ ದನು. ಕೋಣೆಯಿಂದ ಕೋಲುಗಳನ್ನೂರಿಕೊಂಡು ಹೊರ ಬರುವಾಗ ಒಂದನೆಯ ನಂಬರ ಬಾಗಿಲವರೆಗೆ ಬರುವ ಸೌಜನ್ಯವನ್ನೂ ತೋರ್ಪ ಡಿಸಲಿಲ್ಲ. ಮರುದಿನ ರುಬಷೊವ ಬೆಲ್ಜಿಯಮ್ ದೇಶದ ದಾರಿಯಲ್ಲಿ ದ್ದನು.

ಹಡಗಿನಲ್ಲಿ ಅವನಿಗೆ ಸ್ವಲ್ಪ ಎಚ್ಚರಿಕೆಯುಂಟಾಗಿ ತನ್ನ ಕೆಲಸದ ಕುರಿತು ಯೋಚನೆಗೆ ಆರಂಭಿಸಿದನು. ಹೊಗೆಬತ್ತಿ ಸೇದುವ ನಳಿಗೆಯನ್ನು ಬಾಯಲ್ಲಿರಿಸಿಕೊಂಡು ಕುಂಟ ಲೋವಿ ರೇವಿನಲ್ಲಿ ಅವನಿಗೋಸ್ಕರ ಕಾದು ನಿಂತಿದ್ದನು: ಪಾರ್ಟಿಯ ಬಂದರ ಕೆಲಸಗಾರರ ಸಂಘದ ಸ್ಥಾನಿಕ ನಾಯಕನಾದ ಲೋವಿಯನ್ನು ರುಬಷೊವ ಮೊದಲನೋಟಕ್ಕೆ ಮೆಚ್ಚಿ ದನು. ಲೋವಿಯೂ ರುಬಷೊವಗೆ ಒಳಿಕೋರಿದಂತಾದ ನೇವು ಬೀದಿಗ

ಳನ್ನು ತೋರಿಸುವಲ್ಲಿ ಇದೆಲ್ಲ ನನ್ನದೇ ಕೈಕೆಲಸ ಎನ್ನುವಷ್ಟು ಅಭಿಮಾನ
ವನ್ನೂ, ಉತ್ಸಾಹವನ್ನೂ ಪ್ರದರ್ಶಿಸಿದನು. ಪ್ರತಿ ಮಧ್ಯಗೃಹದಲ್ಲಿ ಅವ
ನಿಗೆ ಬಂದರದ ಕೂಲಿಕಾರರು, ನಾವಿಕರು, ಸೂಳೆಯರು ಭೆಟ್ಟಿಯಾಗಿ
ಚಿರಪರಿಚಿತರಂತೆ ಅವನನ್ನು ತಮ್ಮ ಜತೆ ಕುಡಿಯಲು ಆಮಂತ್ರಿಸುತ್ತಿ
ದ್ದರು. ಅವರ ವಂದನೆಗಳನ್ನು ಸ್ವೀಕರಿಸಿ ಲೋವಿ ನೆಳಿಗೆ ಎತ್ತಿ ಪ್ರತಿ
ವಂದನೆಗಳನ್ನು ಸಲ್ಲಿಸುತಿದ್ದನು. ಮಾರ್ಕೆಟ್ ಚೌಕದಲ್ಲಿದ್ದ ಪೋಲೀಸ
ರವನು ಕೂಡ ಲೋವಿಯನ್ನು ನೋಡಿ ಕಣ್ಣು ಮಿಟುಕಿಸಿದನು. ಭಾಷೆ
ಬಾರದ ವಿದೇಶೀಯ ನಾವಿಕರು ಲೋವಿಯ ಗೂನುಬೆನ್ನನ್ನು ವಿಶ್ವಾಸ
ದಿಂದ ತಡವಿ ಮುಂದೆ ಸಾಗುತ್ತಿದ್ದರು. ರುಬಷೊವಗೆ ಇದನ್ನೆಲ್ಲ ಕಂಡು
ಸ್ವಲ್ಪ ಆಶ್ಚರ್ಯವೇ ಆಯಿತೆನ್ನಬೇಕು. ಲೋವಿಯ ಮೇಲೆ ಜಿಗುಪ್ಸೆ
ಪಡುವಂತಿಲ್ಲ. ಈ ರೇವಿನ ಬಂದರ ಕೆಲಸಗಾರರ ಸಂಘವು ಪ್ರಪಂಚ
ದಲ್ಲೇ ಅತ್ಯುತ್ತಮವಾಗಿ ಸಂಘಟಿಸಲ್ಪಟ್ಟ ಪಕ್ಷದ ಅಂಗವೆಂಬುದನ್ನು
ಯಾರಾದರೂ ಒಪ್ಪತಕ್ಕುದೇ.

ಸಂಜೆಯ ಸಮಯ ರುಬಷೊವ, ಕುಂಟ ಲೋವಿ ಮತ್ತು ಒಂದೆ
ರಡು ಜನ ಬೇರೆಯವರು ಬಂದರಿನ ಒಂದು ಮದ್ಯಗ್ರಹದಲ್ಲಿ ಕೂತಿ
ದ್ದರು. ಸಂಘಟನಾ ಕಾರ್ಯದರ್ಶಿ ಪಾವುಲ್ ಕೂಡ ಅವರ ಜತೆಯಲ್ಲಿ
ದ್ದನು. ಮುಖವೆಲ್ಲ ಮೈಲಿಗೆ ಕಜ್ಜಿಯ ಕಲೆಗಳೂ ಬೋಳು ತಲೆಯೂ,
ಕರಿಯ ಸ್ವೆಟರ್ ಮತ್ತು ಕರಿ ಟೋಪಿಯೂ, ಮೊರದಂಥ ಕಿವಿಯೂ
ಇರುವ ಮಾಜಿ ಜಟ್ಟಿಯಾದ ಈ ಕಾರ್ಯದರ್ಶಿಯು ನೋಡುವಂತಿದ್ದನು.
ಮಾತನಾಡುವಾಗ ಕಿವಿಯನ್ನು ನೀಟ ಮಾಡಿದರೆ ಅವನ ಟೊಪ್ಪಿಯು
ಮೇಲೆ ಹೋಗುವ ನೋಟವನ್ನು ಯಾರೂ ಮರೆಯುವ ಹಾಗಿರಲಿಲ್ಲ.
ಅವನ ಪಕ್ಕದಲ್ಲಿ ಕೂತ ಬಿಲ್ ಮಾಜಿ ನಾವಿಕನಂತೆ; ನಾವಿಕ ಜೀವನದ
ಕುರಿತು ಒಂದು ಕಾದಂಬರಿಯನ್ನು ಬರೆದು ಸ್ವಲ್ಪ ಕಾಲ ಪ್ರಸಿದ್ಧನಾಗಿ,
ಪ್ರಸಿದ್ಧಿಯು ಇಳಿದ ಮೇಲೆ ಪಾರ್ಟಿಯ ಪತ್ರಿಕೆಗೆ ಲೇಖನಗಳನ್ನು ಬರೆದು
ಕೊಡುತ್ತಿದ್ದನಂತೆ. ಉಳಿದವರು ಆಜಾನುಬಾಹು ಕೆಲಸಗಾರರು,
ಎಷ್ಟು ಕೊಟ್ಟರೂ ಕುಡಿಯುವ ಪೀಪಾಯಿಗಳು. ಜನರು ಒಳಗೆ
ಬಂದು ಕೂತೋ ನಿಂತೋ ಮದ್ಯವನ್ನು ಕುಡಿದು ರೊಕ್ಕ ಕೊಟ್ಟು

ಹೊರಗೆ ಹೊರಡುವರು. ಆ ಮದ್ಯದಂಗಡಿಯ ಮಾಲಿಕನು ಪುರಸೊತ್ತಾದಾಗಲೆಲ್ಲ ಅವರ ಗುಂಪಿನ ನಡುವೆ ಕೂತು ಬಾಯಲ್ಲಿ ರಾಗಮಾಲೆಯನ್ನು ಬಾರಿಸುವನು. ಅದು ಇನ್ನಷ್ಟು ಮದ್ಯ ಖರ್ಚಾಗಲು ಉತ್ತೇಜನವೋ ಏನೋ.

ಕುಂಟ ಲೋವಿ ರುಬಷೊವನನ್ನು ವಿಶೇಷ ವರ್ಣನೆಗಳಿಲ್ಲದೆ ನೇರವಾಗಿ '**ಆ ದೇಶದಿಂದ** ಬಂದ ಕಾಮ್ರೇಡ್' ಎಂದು ನೆರೆದವರಿಗೆ ಪರಿಚಯ ಮಾಡಿಸಿದ್ದನು: ಅಲ್ಲಿರುವವರ ಪೈಕಿ ಅವನು ಯಾರೆಂದು ಸರಿಯಾಗಿ ತಿಳಿದವನೆಂದರೆ ಕುಂಟ ಲೋವಿ ಮಾತ್ರ. ಮೇಜಿನ ಸುತ್ತ ನೆರೆದ ಸಿಪಾಸುಗಳಿಗೆ ರುಬಷೊವ ಮಾತನಾಡುವ ಇಚ್ಛೆಯನ್ನು ಮುಖದಲ್ಲಿ ವ್ಯಕ್ತಗೊಳಿಸಿದ್ದು ತೋರದೆ ಇದ್ದುದರಿಂದ ಅವರು ಆತನಿಗೆ ವಿಶೇಷ ಪ್ರಶ್ನೆಗಳನ್ನು ಕೇಳಲೂ ಇಲ್ಲ. ಕೇಳಿದ ಪ್ರಶ್ನೆಗಳಲ್ಲಿ ಹೆಚ್ಚಿನವು ಆ ದೇಶದಲ್ಲಿನ ಕೂಲಿ, ಭೂಸಮಸ್ಯೆ, ಔದ್ಯಮಿಕ ಬೆಳವಣಿಗೆ ಮುಂತಾದುವಕ್ಕೆ ಸಂಬಂಧಿಸಿದ್ದುವು. ಅವರ ಮಾತಿನಲ್ಲಿ ಅವರಿಗೆ '**ಆ ದೇಶ**'ದ ಕುರಿತು ಸಂಪೂರ್ಣ, ಸವಿವರ ತಾಂತ್ರಿಕ ಜ್ಞಾನ ಇರುವಂತೆ ತೋರುತ್ತಿತ್ತು; ಆದರೆ ಈ ಜ್ಞಾನದ ಜತೆಯಲ್ಲಿ ಸಾಧಾರಣ ಮತ್ತು ರಾಜಕೀಯ ಪರಿಸ್ಥಿತಿಯ ವಾಸ್ತವಾಂಶದ ಅಜ್ಞಾನವು ಸೇರಿಕೊಂಡಿತ್ತು. ಭಾರವಿಲ್ಲದ ಲೋಹಗಳ ಉದ್ಯಮದ ಬೆಳವಣಿಗೆಯ ವಿಷಯವಾಗಿ ಚಿಕ್ಕ ಮಕ್ಕಳು ಕೆನಾನ್ ಪ್ರಾಂತದ ದ್ರಾಕ್ಷಿ ಎಷ್ಟು ದೊಡ್ಡದಾಗಿರುತ್ತದೆಂದು ಕುತೂಹಲದಿಂದ ಕೇಳುವಂತೆ ಅವರು ಪ್ರಶ್ನಿಸಿದರು. ಒಬ್ಬ ಮುದಿಯ ಬಂದರ ಕೆಲಸಗಾರನು ಒಳಗೆ ಬಂದರೂ ಮದ್ಯವನ್ನು ಕೇಳದೆ ಸುಮ್ಮನೆ ನಿಂತಿದ್ದು, ಕುಂಟ ಲೋವಿ ಕರೆದ ತಕ್ಷಣ ಅವನ ಗುಂಪಿನ ಒಳಬಂದು ರುಬಷೊವನೊಡನೆ ಕೈಕುಲುಕಿ 'ನೋಡಿದರೆ ನಮ್ಮ ಹಳೇ ಪರಿಚಯದ ರುಬಷೊವನ್ನು ಕಂಡ ಹಾಗೆ ಕಾಣುತ್ತೀಯಾ?' ಎಂದು ಪರಿಚಯವನ್ನು ಆರಂಭಿಸಿದನು. 'ಹೀಗೆ ಇನ್ನೂ ಎಷ್ಟೋ ಜನ ನನಗೆ ಹೇಳಿದ್ದಾರೆ' ಎಂದು ರುಬಷೊವ ನುಡಿದನು. ಮದ್ಯದ ಪಾತ್ರೆಯನ್ನು ಖಾಲಿಮಾಡುತ್ತಿದ್ದ ಮುದುಕ 'ಹೋ, ನಮ್ಮ ಹಳೆಯ ರುಬಷೊವ! ಮನುಷ್ಯ ಅಂದರೆ ಹಾಗಿರಬೇಕು' ಎಂದನು. ರುಬಷೊವನ ಬಿಡು

ಗಡೆಯಾಗಿ ಒಂದು ತಿಂಗಳೂ, ಬದುಕಿ ಉಳಿದೇನೆಂಬ ಧೈರ್ಯವು ಒಂದು ಒಂದೂವರೆ ತಿಂಗಳೂ ಕಳೆದಿದ್ದುವಷ್ಟೆ. ಮದ್ಯಗೃಹದ ಮಾಲಿಕನು ರಾಗಮಾಲಿಕೆಯನ್ನು ಬಾರಿಸುತ್ತಿದ್ದನು. ರುಬಷೊವ ಸಿಗರೇಟ ಹೊತ್ತಿಸಿ ಎಲ್ಲರಿಗೂ ಕುಡಿಯಲು ಕೊಡುವಂತೆ ಹೇಳಿದನು. ಅವರೆಲ್ಲ ರುಬಷೊವನ ಆರೋಗ್ಯವನ್ನೂ **'ಆ ದೇಶದ'** ಜನರ ಆರೋಗ್ಯವನ್ನೂ ಕೋರಿ ಪಾತ್ರೆಗಳನ್ನ ಬರಿದು ಮಾಡಿದರು, ಕಾರ್ಯದರ್ಶಿ ಪಾವುಲ್ ತನ್ನ ಟೊಪ್ಪಿಯನ್ನು ಕಿವಿಯಿಂದ ಮೇಲೆ ಕೆಳಗೆ ಹಾರಿಸಿದನು.

ಆ ಮೇಲೆ ರುಬಷೊವ ಮತ್ತು ಕುಂಟ ಲೋವಿ ಸ್ವಲ್ಪ ಸಮಯವನ್ನು ಒಂದು ಕೆಫೆಯಲ್ಲಿ ಕಳೆದರು. ಕೆಫೆಯ ಮಾಲಿಕನು ಕುರ್ಚಿಗಳನ್ನು ಮೇಜಿನ ಮೇಲೆ ಇರಿಸಿ, ಕಿಟಕಿಯ ಪರದೆಗಳನ್ನು ಇಳಿಬಿಟ್ಟು ಗಲ್ಲೆಯಲ್ಲಿ ನಿದ್ದೆ ಹೋಗಿದ್ದನು. ಕುಂಟ ಲೋವಿ ತನ್ನ ಆತ್ಮ ಕಥೆಯನ್ನು ರುಬಷೊವಗೆ ನಿವೇದಿಸಿಕೊಂಡನು. ರುಬಷೊವಗೆ ಇದೇಕೆ ಈ ಕಾಮ್ರೇಡರು ತನ್ನ ಜತೆ ಅವರವರ ಪ್ರಾಚೀನ ಇತಿಹಾಸದ ಕಂತೆಯನ್ನು ಬಿಚ್ಚಿ ತನ್ನ ಕೆಲಸಕ್ಕೆ ಅಡ್ಡಿಯಾಗುತ್ತಿದ್ದಾರೆ ಎಂದು ಅನಿಸುತಿತ್ತು. ಲೋವಿಯ ಕಥೆಯನ್ನು ಕೇಳದಿದ್ದರೇನು ಎಂದುಕೊಂಡು ರುಬಷೊವ ಹೊರಡುವುದರಲ್ಲಿದ್ದನು; ಆದರೆ ಅಷ್ಟರಲ್ಲಿ ಅವನಿಗೆ ಥಕ್ಕನೆ ದೇಹಾಯಾಸವುಂಟಾದಂತೆ ತೋರಿತು. ಚಿಂತಿಲ್ಲ, ಇನ್ನೊಬ್ಬ ಅಶಕ್ತನ ಕಥೆ ಕೇಳಿಯೇ ಹೊರಡೋಣವೆಂದು ನಿರ್ಧರಿಸಿ ಲೋವಿಯ ಕಥೆಗೆ ಕಿವಿಗೊಟ್ಟನು.

ಬೆಲ್ಜಿಯನ್ ಭಾಷೆಯನ್ನು ಲೋವಿ ಬಲ್ಲನಾದರೂ, ಆ ಊರಲ್ಲಿ ಅವನಿಗೆ ಸಾಕಷ್ಟು ಸ್ನೇಹಿತರಿರುವುದು ನಿಜವಾದರೂ, ಕುಂಟ ಲೋವಿ ಬೆಲ್ಜಿಯಮಿನಲ್ಲಿ ಹುಟ್ಟಿದವನಲ್ಲ. ದಕ್ಷಿಣ ಜರ್ಮನಿಯ ಒಂದು ಪಟ್ಟಣದಲ್ಲಿ ಹುಟ್ಟಿ, ಬಡಗಿ ಕೆಲಸವನ್ನು ಕಲಿತು, ಗಿತಾರವಾದನದಲ್ಲಿ ಪ್ರವೀಣನಾಗಿ, ಕ್ರಾಂತಿಕಾರಿ ಯುವಕ ಸಂಘದ ಭಾಸುವಾರದ ಪ್ರವಾಸದ ಸಮಯ ಡಾರ್ವಿನನ ವಿಕಾಸವಾದದ ಕುರಿತು ಅವನು ಉಪನ್ಯಾಸ ಹೊಡೆಯುತ್ತಿದ್ದನಂತೆ. ಸರ್ವಾಧಿಕಾರಿ ಪ್ರಭುತ್ವವು ದೇಶದಲ್ಲಿ ನೆಲೆಯಾಗುವ ಪೂರ್ವದ ಸಂಕಟಕಾಲದಲ್ಲಿ, ಪಾರ್ಟಿಗೆ ಶಸ್ತ್ರಾಸ್ತ್ರಗಳ ಪ್ರಬಲ ಅವಶ್ಯ

ಕತೆಯು ತಲೆದೋರಿದಾಗ ಆ ಪಟ್ಟಣದಲ್ಲಿ ವೀರತನದ ಕಪಟ ನಾಟಕವೊಂದು ನಡೆಯಿತು. ಒಂದು ಭಾನುವಾರ ಅಪರಾಹ್ನ ಪೋಲೀಸ್ ಸ್ಟೇಷನ್ನಿನಿಂದ ನಗರದ ಜನನಿಬಿಡ ಬೀದಿಗಳ ಮುಖಾಂತರವಾಗಿ ಐವತ್ತು ಬಂದೂಕುಗಳನ್ನೂ, ಇಪ್ಪತ್ತು ರಿವಾಲ್ವರುಗಳನ್ನೂ, ಎರಡು ಚಿಕ್ಕ ತೋಪುಗಳನ್ನೂ ತುಂಬಿಕೊಂಡು ಒಂದು ಫರ್ನಿಚರ್‌ವ್ಯಾನ್ ಎಲ್ಲಿಗೋ ಹೋಗುತ್ತಿತ್ತು. ವಾಹನದಲ್ಲಿದ್ದ ಜನರು ಸರಕಾರಿ ಮುದ್ರೆಯುಳ್ಳ ಪರವಾನಿಗೆ ಪತ್ರವನ್ನು ಕೇಳಿದವರಿಗೆ ತೋರಿಸುತ್ತಿದ್ದರು. ಸಾಲದುದಕ್ಕೆ ಪೋಲೀಸರ ಸಮವಸ್ತ್ರ ಹಾಕಿಕೊಂಡು ಇಬ್ಬರು ಪೋಲೀಸರು ವಾಹನದಲ್ಲಿ ಕಾವಲಿದ್ದರು. ಇನ್ನೊಂದು ಪಟ್ಟಣದಲ್ಲಿ ಪಕ್ಷದ ಸದಸ್ಯನೊಬ್ಬನ ಗ್ಯಾರೇಜಿನಲ್ಲಿ ಈ ಶಸ್ತ್ರಾಸ್ತ್ರಗಳು ಆ ಮೇಲೆ ಕಾಣದೊರೆತುವು. ಘಟನೆಯ ಸಂಪೂರ್ಣ ವಿವರಗಳನ್ನು ಯಾರೂ ಅರಿಯರು. ಆದರೆ ಅದು ನಡೆದ ಮರುದಿನವೇ ಲೋವಿ ಪಟ್ಟಣದಿಂದ ಪರಾರಿಯಾಗಿದ್ದನು. ಪಾಸ್‌ಪೋರ್ಟ್ ಮತ್ತು ಪರಿಚಯಪತ್ರವನ್ನು ಪಾರ್ಟಿಯವರು ಕೊಡುತ್ತೇವೆಂದು ವಚನಕೊಟ್ಟಿದ್ದರೂ ಕುಂಟ ಲೋವಿಗೆ ಅದು ಸಮಯಕ್ಕೆ ಸಿಗಲಿಲ್ಲ. ಅಂದರೆ ಪಾಸ್‌ಪೋರ್ಟನ್ನೂ ಪ್ರಯಾಣದ ವೆಚ್ಚವನ್ನೂ ಮುಟ್ಟಿಸಬೇಕಾಗಿದ್ದ, ಪಾರ್ಟಿಯ ಮೇಲುಮಟ್ಟದಿಂದ ಬರಬೇಕಾಗಿದ್ದ ದೂತನು ಮೊದಲೇ ಏರ್ಪಾಟಾದ ಸ್ಥಳದಲ್ಲಿ ಕುಂಟ ಲೋವಿಗೆ ಭೆಟ್ಟಿಯಾಗಲಿಲ್ಲ.

‘ನಮ್ಮಂಥವರಿಗೆ ಯಾವಾಗಲೂ ನಡೆಯುವುದೇ ಹೀಗೆ’ ಎಂದು ಕುಂಟ ಲೋವಿ ತಾತ್ವಿಕ ವಿಮರ್ಶೆಯನ್ನೂ ನುಡಿದನು. ರುಬಷೊವ ಮೌನವಾಗಿದ್ದನು.

ಆದಾಗಿಯೂ ಕುಂಟ ಲೋವಿ ಯಾರಿಗೂ ಸಿಗದೆ ಗಡಿಯನ್ನು ದಾಟಿದನು. ಯಾರಿಗೂ ಸಿಗದೆ ಇರುವುದು ಪ್ರಯಾಸದ ಕೆಲಸವೇ ಆಯಿತು. ಅವನನ್ನು ಸೆರೆಹಿಡಿಯಲು ವಾರಂಟ್ ಹೊರಟಿತ್ತು, ಪ್ರತಿ ಪೋಲೀಸ ಸ್ಟೇಷನ್ನಿಗೂ ಅವನ ಗೂನು ಬೆನ್ನಿನ ಚಿತ್ರ ರವಾನೆಯಾಗಿತ್ತು, ಎಂದ ಮೇಲೆ ಗಡಿಯನ್ನು ಮುಟ್ಟಬೇಕಾದರೆ ಅವನು ದೇಶದಲ್ಲಿ ಸಾಕಷ್ಟು ಅಂಡಲೆಯ ಬೇಕಾದ್ದು ಆಶ್ಚರ್ಯವಲ್ಲ. ‘ಮೇಲಿಂದ ಬರುವ’ ಕಾಮ್ರೇಡನನ್ನು ಭೇಟಿಯಾಗಲು ಹೊರಟಾಗ ಕುಂಟ ಲೋವಿಯ ಕೈಯಲ್ಲಿ

ಡಿ ಊರು ದಿನಕ್ಕೆ ಸಾಕಾಗುವಷ್ಟು ಮಾತ್ರ ದುಡ್ಡಿತ್ತು. 'ಆದುವರೆಗೆ ಜನರು ಮರದ ತೊಗಟೆಯನ್ನು ತಿಂದು ಜೀವಿಸುತ್ತಾರೆಂಬುದನ್ನು ಗ್ರಂಥಗಳಲ್ಲಿ ಮಾತ್ರ ಓದಬಹುದೆಂದು ನಾನೆಣಿಸಿದ್ದೆ. ಆದರೆ ಎಳೆ ಪ್ಲೇನ್‌ಮರದತೊಗಟೆಯ ಸವಿ ಏನೆಂದು ನನಗೆ ಆಗ ಗೊತ್ತಾಯಿತು. ತೊಗಟೆಯ ನೆನಪಾದೊಡನೆ ಕುಂಟ ಲೋವಿ ಕಪಾಟಿನಿಂದ ಕೆಲ ತಿನಸುಗಳನ್ನು ತರಿಸಿದನು. ಸೆರಮನೆಯ ಗಂಜಿ, ಕ್ಷುಧಾಸತ್ಯಾಗ್ರಹಗಳನ್ನೆಣಿಸಿಕೊಳ್ಳುತ್ತ ರುಬಷೊವ ಕೂಡ ಕುಂಟ ಲೋವಿಯು ತಂದ ತಿನಸುಗಳನ್ನು ಮೆಲ್ಲತೊಡಗಿದನು.

ಕೊನೆಗೆ ಕುಂಟ ಲೋವಿ ಗಡಿದಾಟಿ ಫ್ರಾನ್ಸ್ ದೇಶವನ್ನು ಹೊಕ್ಕನು. ಪಾಸ್‌ಪೋರ್ಟ ಇಲ್ಲದ ಆತನನ್ನು ಫ್ರೆಂಚ್ ಸರಕಾರವು ಸೆರೆಹಿಡಿದು ಬೇರೆ ದೇಶಕ್ಕೆ ಹೊರಡಿಸಿತು. 'ಚಂದ್ರಮಂಡಲಕ್ಕೆ ಹೋಗು ಎಂದು ಅವರು ಹೇಳಿದರೂ ಸರಿಯಾಗುತ್ತಿತ್ತು' ಎಂದ ಕುಂಟ ಲೋವಿ. ಫ್ರೆಂಚ್ ಪಾರ್ಟಿಯ ಮರೆ ಹೊಕ್ಕಾಗ ನಿನ್ನ ಪರಿಚಯವಿಲ್ಲದಿರುವುದರಿಂದ ಮೊದಲು ನಿನ್ನ ದೇಶದಲ್ಲಿ ನಿನ್ನ ವಿಷಯ ವಿಚಾರಿಸಿ ತಿಳಿದುಕೊಳ್ಳಬೇಕು ಎಂದು ಪಾರ್ಟಿಯು ಕುಂಟಲೋವಿಯ ಕೈಬಿಟ್ಟಿತು. ಅವನು ತನ್ನ ಅಂಡಲೆತವನ್ನು ಮುಂದುವರಿಸಿದನು. ಮೂರು ತಿಂಗಳಲ್ಲಿ ಮತ್ತೊಮ್ಮೆ ಸರಕಾರದ ಸೆರೆಗೆ ಬಿದ್ದು, ಮತ್ತೆ ಮೂರು ತಿಂಗಳು ಅವರ ಆತಿಥ್ಯವನ್ನೇ ಸ್ವೀಕರಿಸಿದನು. ಸರಕಾರದ ರೊಟ್ಟಿ ತಿನ್ನುವ ಆ ವೇಳೆಯಲ್ಲಿ ಅವನ ಕೋಣೆಯ ಸಂಗಾತಿಯಾಗಿದ್ದ ಒಬ್ಬ ತಿರುಕುಳಿಗೆ ಇತ್ತೀಚೆಗಿನ ಪಾರ್ಟಿ ಕಾಂಗ್ರೆಸಿನಲ್ಲಾದ ನಿರ್ಣಯಗಳ ಕುರಿತು ಒಂದು ಉಪನ್ಯಾಸ ಮಾಲೆಯನ್ನು ಏರ್ಪಡಿಸಿದನು. ಈ ಉಪಕಾರಕ್ಕೆ ಪ್ರತಿಯಾಗಿ ಆ ಪೋಲಿಯು ತನ್ನ ಗುರುವಿಗೆ ಬೆಕ್ಕುಗಳನ್ನು ಹಿಡಿದು ಅವುಗಳ ಚರ್ಮ ಸುಲಿದು ಮಾರುವ ಕುಶಲ ವಿದ್ಯೆಯನ್ನು ಕಲಿಸಿಕೊಟ್ಟನು. ಮೂರು ತಿಂಗಳಾದ ಮೇಲೆ ಪೋಲೀಸರು ಒಂದು ರಾತ್ರಿ ಲೋವಿಯನ್ನು ಬೆಲ್ಜಿಯಮಿನ ಗಡಿಯಲ್ಲಿರುವ ಅಡವಿಯಲ್ಲಿ ಇಳಿಸಿ, ಬ್ರೆಡ್, ಗಿಣ್ಣು ಮತ್ತು ಒಂದು ಪ್ಯಾಕೇಟ್ ಫ್ರೆಂಚ್ ಸಿಗರೇಟನ್ನು ಅವನ ಕೈಯಲ್ಲಿ ಕೊಟ್ಟು, ಇಲ್ಲಿಂದ ನೇರವಾಗಿ ನಡೆದರೆ ಬೆಲ್ಜಿಯಮ್ ಬರುತ್ತದೆ—

ಅರ್ಧ ತಾಸಿನಲ್ಲಿ. ಇನ್ನೊಮ್ಮೆ ನೀನೆಲ್ಲಾದರೂ ನಮ್ಮ ಕೈಗೆ ಸಿಕ್ಕಿಬಿದ್ದಿಯಾ, ಜೋಕೆ.' ಎಂದು ಗದರಿಸಿ ಅವನನ್ನು ಬೀಳ್ಕೊಟ್ಟರು.

ಹಲವು ವಾರಗಳ ತನಕ ಕುಂಟ ಲೋವಿ ಬೆಲ್ಜಿಯುಮಿನಲ್ಲಿ ಅಂಡಲೆದನು. ಆ ದೇಶದಲ್ಲಿಯೂ ಪಾರ್ಟಿಯ ನೆರವನ್ನು ಕೋರಿದನು. ಫ್ರಾನ್ಸಿನಲ್ಲಿ ಸಿಕ್ಕಿದ ಉತ್ತರವೇ ಬೆಲ್ಜಿಯುಮಿನಲ್ಲಿಯೂ ಸಿಕ್ಕಿತು. ಪ್ಲೇನ್ ಮರಗಳ ರುಚಿ ಬೇಸರಬಂದುದರಿಂದ ಬೆಕ್ಕಿನ ವ್ಯಾಪಾರವನ್ನು ಆರಂಭಿಸಿದನು. ಬೆಕ್ಕುಗಳನ್ನು ಹಿಡಿಯುವುದೇನೂ ದೊಡ್ಡ ಕಷ್ಟವಾಗಿರಲಿಲ್ಲ. ಎಳೆವಯಸ್ಸಿನ ಬೆಕ್ಕಾದರೆ, ಮುದಿಯಾಗಿರದಿದ್ದರೆ ಸರಿ, ಅರ್ಧ ಬ್ರೆಡ್ಡು ಮತ್ತು ಒಂದು ಪ್ಯಾಕೆಟ ಪೈಪಹೊಗೆಸೊಪ್ಪು ಬರುವಷ್ಟು ಹಣ ಸಿಗುತ್ತಿತ್ತು. ಆದರೆ ಬೆಕ್ಕು ಹಿಡಿಯುವುದಕ್ಕೂ, ಮಾರುವುದಕ್ಕೂ ನಡುವೆ ಅಸಹ್ಯವಾದ ಒಂದು ಕುಶಲ ಕರ್ಮ ಗಂಟುಬೀಳುತಿತ್ತು. ಬೆಕ್ಕಿನ ಕಿವಿಯನ್ನೊಂದು ಕೈಯಲ್ಲಿಯೂ ಬಾಲವನ್ನಿನ್ನೊಂದರಲ್ಲಿಯೂ ಹಿಡಿದು ಅದರ ಬೆನ್ನನ್ನು ಕಾಲಿನ ಮೊಣಕಾಲಿನಿಂದ... ಮುರಿಯುವುದರಿಂದ ಕೆಲಸವು ಬಲು ಶೀಘ್ರವಾಗಿ ಮುಗಿದು ಹೋಗುತ್ತಿತ್ತು. ಮೊದಮೊದಲು ಭಾರಿ ಹೇಸಿಕೆ ಅನಿಸುವುದಾದರೂ ಅಭ್ಯಾಸವಾದ ಮೇಲೆ ಅದೂ ಕಷ್ಟವಿಲ್ಲ. ಆದರೆ ದುರದೃಷ್ಟವಶಾತ್ ಬೆಲ್ಜಿಯುಮಿನವರೂ ಪರಿಚಯಪತ್ರವನ್ನು ಕೇಳುವ ಹವ್ಯಾಸದವರಾಗಿದ್ದುದರಿಂದ ಅಲ್ಲಿಯೂ ಕುಂಟ ಲೋವಿ ಸೆರೆಮನೆಯ ರುಚಿ ನೋಡಬೇಕಾಯಿತು, ಎರಡೆರಡು ಸಲ ನೋಡಬೇಕಾಯಿತು. ಎರಡನೆಯ ಸರಕಾರಿ ಉಪಚಾರದ ಉಪಸಂಹಾರ ಕಾಲದಲ್ಲಿ ಒಂದು ರಾತ್ರಿ ಬೆಲ್ಜಿಯುಮಿನ ಪೋಲೀಸ ಸಿಪಾಯಿಗಳು ಅವನನ್ನು ಫ್ರಾನ್ಸ್ ಗಡಿಯಲ್ಲಿರುವ ಅಡವಿಯಲ್ಲಿ ಇಳಿಸಿ, ಬ್ರೆಡ್, ಗಿಣ್ಣು, ಮತ್ತು ಒಂದು ಬೆಲ್ಜಿಯಮ್ ಸಿಗರೇಟ ಪ್ಯಾಕೆಟನ್ನು ಅತಿಥಿಯ ಕೈಯಲ್ಲಿ ಕೊಟು 'ಇಲ್ಲಿಂದ ನೇರವಾಗಿ ನಡೆ. ಅರ್ಧ ತಾಸಿನಲ್ಲಿ ಫ್ರಾನ್ಸ್ ಬರುತ್ತದೆ. ಇನ್ನೊಮ್ಮೆ ಕೈಗೆ ಸಿಕ್ಕಿ ಬಿದ್ದೀಯಾ, ಜೋಕೆ' ಎಂದು ಗದರಿಸಿ ಗಡೀಪಾರು ಮಾಡಿದರು.

ಮರುವರ್ಷ ಬೆಲ್ಜಿಯುಮಿಂದ ಫ್ರಾನ್ಸ್—ಫ್ರಾನ್ಸಿನಿಂದ ಬೆಲ್ಜಿಯಮ್ ಯಾತ್ರೆ ಕುಂಟ ಲೋವಿಗೆ ಮೂರು ಸರ್ತಿ ಆಯಿತು. ಒಮ್ಮೆ

ಫ್ರೆಂಚ ಸರಕಾರದ ಉಪಕಾರ, ಇನ್ನೊಮ್ಮೆ ಬೆಲ್ಜಿಯಮ್ ಸರಕಾರದ ಔದಾರ್ಯ---ಹೀಗೆ ತನ್ನ ಹಾಗೆ ಎಷ್ಟೋ ಜನಕ್ಕೆ ಕಾಲ್ಚೆಂಡಿನ ಆಟ ಲಭಿಸಿರಬೇಕೆಂದು ಕುಂಟ ಲೋವಿಗೆ ಖೇದವಾಯಿತು. ಚಳವಳಿಯ ಸಂಪರ್ಕವೆಲ್ಲಿ ತನಗೆ ತಪ್ಪಿ ಹೋದೀತೋ ಎಂಬ ಭಯದಿಂದ ಕುಂಟ ಲೋವಿ ಅನೇಕ ಸಲ ಪಾರ್ಟಿಗೆ ಅರ್ಜಿ ಮಾಡಿಕೊಂಡನು. 'ನಿನ್ನ ಸಂಘದಿಂದ, ನೀನು ಹೊರಟ ವಿಚಾರಕ್ಕೆ ಇನ್ನೂ ಪತ್ರ ಬಂದಿಲ್ಲ. ನಾವು ಕೇಳಿದ್ದಕ್ಕೆ ಅವರಿಂದ ಉತ್ತರವೇ ಇಲ್ಲ. ನೀನು ಪಾರ್ಟಿಯ ಸದಸ್ಯನೆಂಬುದು ನಿಜವಾದರೆ ಪಾರ್ಟಿಯ ಶಿಸ್ತನ್ನು ಪಾಲಿಸು' ಎಂಬ ಉತ್ತರದ ದೆಸೆಯಿಂದಾಗಿ ಕುಂಟ ಲೋವಿಗೆ ಬೆಕ್ಕಿನ ವ್ಯಾಪಾರದ ಹೊರತು ಬೇರೆ ಉಪಾಯವಿರಲಿಲ್ಲ, ಬೆಲ್ಜಿಯಮ್ ಫ್ರಾನ್ಸ್‌ಗಳ ನಡುವಣ ಚೆಂಡಾಟಕ್ಕೆ ಗುರಿಯಾಗದೆ ಮಾರ್ಗವಿರಲಿಲ್ಲ. ಇಷ್ಟರಲ್ಲಿ ಅವನ ದೇಶದಲ್ಲಿ ಸರ್ವಾಧಿಕಾರಿ ಸರಕಾರದ ಪ್ರತಿಷ್ಠೆಯಾಯಿತು. ಮತ್ತೊಂದು ವರ್ಷ ಕಳೆಯಿತು. ದೇಶ ಸಂಚಾರದಿಂದಾಗಿ ಕುಂಟ ಲೋವಿಯ ಆರೋಗ್ಯ ಹದಕೆಟ್ಟಿತ್ತು. ಅವನು ನೆತ್ತರು ಕಾರುವುದಕ್ಕೂ, ಬೆಕ್ಕುಗಳ ಕನಸು ಕಾಣುವುದಕ್ಕೂ ಆರಂಭಿಸಿದನು. ತಾನು ತಿನ್ನುವ ಆಹಾರವೂ, ಸೇದುವ ಹೊಗೆ ನಳಿಕೆಯೂ, ತನಗೆ ಕರುಣೆಯಿಂದ ಆಗಾಗ ಆಶ್ರಯ ಕೊಡುವ ಬೀದಿಯ ಸೂಳೆಯರ ಮೈಯೂ ಬೆಕ್ಕಿನ ವಾಸನೆ ಬರುತ್ತವೆಂಬ ಭ್ರಮೆಯಿಂದ ಅವನು ನರಳುತ್ತಿದ್ದನು. ಪಾರ್ಟಿಯಿಂದ ಒಂದೇ ಉತ್ತರ: 'ನಮ್ಮ ವಿಚಾರಣೆಗೆ ಇನ್ನೂ ಉತ್ತರ ಬಂದಿಲ್ಲ. 'ಅಧಿಕೃತ ಪ್ರಕಟಣೆ ಇಲ್ಲದೆ ನೀನು ಬಂದದ್ದೇಕೆ? ನಾವೇನು ಮಾಡುವ ಹಾಗೆಯೂ ಇಲ್ಲ. ನೀನು ಬಹುಶಃ ಪಾರ್ಟಿಯ ಅಪ್ಪಣೆ ಇಲ್ಲದೆಯೇ ಹೊರಟವನೆಂದು ತೋರುತ್ತದೆ. ಎಷ್ಟೋ ಜನ ಗುಪ್ತಚಾರರು ಪಾರ್ಟಿಯನ್ನು ಒಡೆಯುವ ಉದ್ದೇಶದಿಂದ ಹೀಗೆ ಬರುವುದುಂಟು. ಪಾರ್ಟಿ ಜಾಗರೂಕವಾಗಿರಬೇಕು.' ಈ ಉತ್ತರ ಬರುವಷ್ಟರಲ್ಲಿ ಕುಂಟ ಲೋವಿಯ ದೇಶದಲ್ಲಿ ಅವನ ಪರಿಚಯವನ್ನು ಹೇಳಬಲ್ಲ ಪ್ರತಿಯೊಬ್ಬರೂ ಸರ್ವಾಧಿಕಾರಿಯ ಕೋಪಕ್ಕೆ ತುತ್ತಾಗಿ ಮೃತ್ಯುವಶರಾಗಿಯೋ ಕಾರಾಗೃಹವಾಸಿಗಳಾಗಿಯೋ ದೇಶಭ್ರಷ್ಟರಾಗಿಯೋ ಅದೃಶ್ಯರಾಗಿದ್ದರು.

'ಇವನ್ನೆಲ್ಲ ನನಗೆ ಹೇಳಿ ಏನು ಪ್ರಯೋಜನ?' ಎಂದು ರುಬಷೊವ ಕೇಳಿದನು. ಮೊದಲೇ ಹೊರಟು ಹೋಗಿದ್ದರೆ ಚೆನ್ನಾಗಿತ್ತು ಎಂದೆನಿಸಿತು ಆತನಿಗೆ. ಇದಕ್ಕೆ ಉತ್ತರವಾಗಿ ಕುಂಟ ಲೋವಿ ನಲ್ಲಿ ತಿರುಗಿಸಿ ಬೀರನ್ನು ತಂದು, ಹೊಗೆನಳಿಗೆಯಿಂದ ರುಬಷೊವಗೆ ಸಲಾಮು ಹೊಡೆದು, 'ಪ್ರಯೋಜನವನ್ನೇ ಹೇಳುತ್ತೇನೆ. ಒಂದನೆಯದಾಗಿ ಇದಕ್ಕೆ ತೈಕ್ಷಣಿಕ ಮೌಲ್ಯವಿದೆ—ಎಲ್ಲರೂ ತಿಳಿದುಕೊಳ್ಳಬೇಕಾದ ವಿಷಯವಿದು. ಎರಡನೆಯದಾಗಿ, ಇದು ಸಾವಿರ ನಮೂನೆಗಳಿಗೆ ಸಾಧಾರಣವಾಗಿರುವ ಒಂದು ಉದಾಹರಣೆ. ನಮ್ಮಲ್ಲಿ ಉತ್ತಮರಾದವರೂ, ಒಳ್ಳೆಯವರೆನಿಸಿದವರೂ ಈಗ ಹಲವು ವರ್ಷಗಳಿಂದ ಈ ರೀತಿ ಜೀರ್ಣಶೀರ್ಣವಾಗಿದ್ದಾರೆ. ಪಾರ್ಟಿ ಬರಬರುತ್ತ ಜಡವಾಗುತ್ತಿದೆ, ಅಲಸಿಯಾಗುತ್ತಿದೆ. ಪ್ರತಿ ಅವಯವದಲ್ಲಿಯೂ ವ್ಯಾಧಿಯ ಲಕ್ಷಣಗಳು ಕಾಣಿಸಹತ್ತಿವೆ. ಕ್ರಾಂತಿ ನಡೆಯುವುದು ಹೀಗಲ್ಲ' ಎಂದು ದೃಢವಾಗಿ ನುಡಿದನು.

ನಾನು ಇದಕ್ಕೂ ಹೆಚ್ಚಿನದನ್ನು ಹೇಳಲಾರೆನೆ? ಎಂದು ರುಬಷೊವ ಯೋಚಿಸಿದರೂ ಮಾತೆತ್ತಲಿಲ್ಲ.

ಕುಂಟ ಲೋವಿಯ ಕತೆಗೆ ಆಕಸ್ಮಾತ್ತಾಗಿ ಸುಖಾಂತ್ಯವು ಪ್ರಾಪ್ತಿಯಾಯಿತು. ಅವನ ಅಗಣಿತ ಕಾರಾವಾಸಗಳ ಪೈಕಿ ಒಂದರಲ್ಲಿ ಜೆಲ್ಜಿಯಮಿನ ಮಾಜಿ ಜಗಜಟ್ಟಿ ಪಾವುಲ್ ಅವನಿಗೆ ಸಂಗಾತಿಯಾಗಿ ದೊರಿತನು. ಪಾವುಲ್ ಆಗ ಜಟ್ಟಿತನವನ್ನು ವಿಸರ್ಜಿಸಿ ಬಂದರಿನ ಮಜೂರನಾಗಿದ್ದರೂ ಒಂದು ಮುಷ್ಕರದ ಸಮಯ ತನ್ನ ಗತಕಾಲದ ವೃತ್ತಿಯನ್ನು ನೆನಪಿಗೆ ತಂದು ಪೋಲೀಸರವನಿಗೆ ಡಬಲ್ ನೆಲ್ಸನ್ ಪೆಟ್ಟಿನ ರುಚಿ ತೋರಿಸಿದ ಅಪರಾಧಕ್ಕಾಗಿ ಕಾರಾಗೃಹದ ಅತಿಥಿಯಾಗಬೇಕಾಯಿತು. ಹಿಂದುಗಡೆಯಿಂದ ಬಂದು ವಿರೋಧಿಯ ಕಂಕುಳಿನೊಳಗೆ ತೋಳನ್ನು ಸಿಕ್ಕಿಸಿ, ಕೈಯಲ್ಲಿ ಕುತ್ತಿಗೆಯನ್ನು ಅಮುಕಿ, ಹಾಗೆ ಹಿಡಿದ ತಲೆಯನ್ನು ಕುತ್ತಿಗೆಯ ಎಲುಬು ಮುರಿಯುವಂತೆ ಒತ್ತುವುದಕ್ಕೆ ಡಬಲ್ ನೆಲ್ಸನ್ ಪೆಟ್ಟೆನ್ನುವರು. ಈ ವರಸೆಯನ್ನು ಅಖಾಡದಲ್ಲಿ ತೋರಿಸುವ ಸಂದರ್ಭದಲ್ಲಿ ಜನರೆಲ್ಲ ಚಪ್ಪಾಳೆ ತಟ್ಟಿ ಪ್ರೋತ್ಸಾಹಿಸುತ್ತಿದ್ದರು. ಆದರೆ ವರ್ಗ

ಸಮರದಲ್ಲಿ ಡಬಲ್‌ನೆಲ್ಸನಿಗೆ ಸ್ಥಾನವಿಲ್ಲವೆಂಬುದನ್ನು ತಿಳಿಯಲು ಪಾವುಲ್ ಸೆರೆಮನೆಯ ಸವಿನೋಡಬೇಕಾಯಿತು. ಕುಂಟ ಲೋವಿಯು ಮಾಜಿ ಜಗಜಟ್ಟಿ ಪಾವುಲನ ಗೆಳೆಯನಾದನು. ಬಂದರಿನ ಕೆಲಸಗಾರರ ಸಂಘದ ಆಡಳಿತ ಕಾರ್ಯದರ್ಶಿಯಾದ ಪಾವುಲ್ ಬಿಡುಗಡೆಯಾಗುತ್ತಲೇ ಗೆಳೆಯ ಕುಂಟ ಲೋವಿಯನ್ನು ಪಾರ್ಟಿಗೆ ಸೇರಿಸಿದನು. ಆದುದರಿಂದ ಹಿಂದೇನು ನಡೆದುಹೋದರೂ ಕುಂಟ ಲೋವಿಗೆ ವಿಕಾಸವಾದದ ಮೇಲೂ ಪಾರ್ಟಿ ಕಾಂಗ್ರೆಸ್ಸಿನ ಅಧಿವೇಶನದ ಮೇಲೂ ಉಪನ್ಯಾಸ ಹೊಡೆಯಲು ಸದವಕಾಶವು ದೊರೆಯಿತು. ಇನ್ನೇನು ಬೇಕು? ಅವನೀಗ ಪರಮಸುಖಿ. ಬೆಕ್ಕಿನ ನೆನಪೂ ಇಲ್ಲ, ಪಾರ್ಟಿ ಅಧಿಕಾರಿಗಳ ಮೇಲೆ ಕೋಪವೂ ಇಲ್ಲ. ಸುಖವಾಗಿ ಅಂತ್ಯವಾಗುವುದೆಲ್ಲವೂ ಒಳ್ಳೆಯದಕ್ಕೇ ಎಂದು ತಿಳಿಯ ಬೇಕಾದುದು ಇಷ್ಟಕ್ಕೆ.

ಸುಖವಾಗಿಯೇ ಸಮಾಪ್ತವಾಗಲಿ ಎಂದು ರುಬಷೊವ ಕತೆಕೇಳಿ ಬೇಸರ ಬಂದರೂ ಹೃತ್ಪೂರ್ವಕ ಬಯಸಬಹುದಾಗಿತ್ತು. ಆದರೆ ಅವನು ಬೆಲ್ಜಿಯಮಿಗೆ ಬಂದ ಕೆಲಸವನ್ನು ಯಾವ ಕ್ಷಣವೂ ಮರೆಯುವ ಹಾಗಿರಲಿಲ್ಲ; ಪ್ರಾಯಶಃ ರುಬಷೊವ ಕಲಿಯದ ಕ್ರಾಂತಿಯ ಶೀಲವೆಂದರೆ ಒಂದೇ ಒಂದೊಂದು ತೋರುತ್ತದೆ: ಆತ್ಮ ವಂಚನೆ. ಕುಂಟಲೋವಿಯನ್ನು ಕನ್ನಡಕದ ಮೂಲಕ ರುಬಷೊವ ಸಾವಕಾಶವಾಗಿ ನೋಡಿದನು. ಈ ನೋಟದ ಅರ್ಥ ತಿಳಿಯದೆ ಕುಂಟಲೋವಿ ಗಡಿಬಿಡಿಯಿಂದ ಸಲಾಮು ಮಾಡುವ ಹೊತ್ತಿನಲ್ಲಿ ರುಬಷೊವನ ಕಣ್ಣಮುಂದೆ ಬೆಕ್ಕುಗಳು ಜಗಳ ವಾಡುತ್ತಿದ್ದುವು. ನರಮಂಡಲವು ಅಶಕ್ತವಾಯಿತೋ, ಕುಡಿದದ್ದು ಹೆಚ್ಚಾ ಯಿತೋ, ಅಂತೂ ಗೂಸುಬೆನ್ನನ್ನೂ ಲೆಕ್ಕಿಸದೆ ಕುಂಟಲೋವಿಯ ಕಿವಿಯನ್ನೂ ಕಾಲನ್ನೂ ಹಿಡಿದು ಕಾಲ್ಗಂಟಿನ ಎಲುಬಿನಿಂದಬೆನ್ನುಮೂಳೆ ಯನ್ನು ಮುರಿಯಬೇಕೆಂಬ ಮಾನಸಿಕ ಭ್ರಾಂತಿಯು ಎಷ್ಟು ಪ್ರಯತ್ನ ಮಾಡಿದರೂ ರುಬಷೊವನ ಚಿತ್ತದಿಂದ ತೊಲಗಲೊಲ್ಲದು. ರುಬಷೊವ ಅಸ್ವಸ್ಥನಾದನು. ಏನೋ ಅಕಸ್ಮಾತ್ ಸ್ಪರ್ಧೆಯ ಸುಳಿಯಲ್ಲಿ ರುಬ ಷೊವ ಸಿಲುಕಿರಬೇಕೆಂದು ಬಗೆದು ಕುಂಟ ಲೋವಿ ಗೌರವಯುಕ್ತ

ಮೌನವನ್ನು ತಳೆದು ರುಬಷೊವನನ್ನು ಮನೆ ಮುಟ್ಟಿಸಿದನು. ಒಂದು ವಾರದ ತರುವಾಯ ಕುಂಟ ಲೋವಿ ನೇಣು ಹಾಕಿಕೊಂಡು ಸತ್ತನು.

ಆ ಸಂಜೆಗೂ ಕುಂಟ ಲೋವಿಯ ಮರಣಕ್ಕೂ ನಡುವೆ ಪಾರ್ಟಿ-ಗೂಡಿನಲ್ಲಿ ಹಲವು ಬಾರಿ ರುಚಿಹೀನವಾದ ಸಭೆಗಳು ಜರಗಿದುವು. ನಡೆದ ವಿಷಯ ಸರಳವಾಗಿತ್ತು.

ಎರಡು ವರ್ಷಗಳ ಹಿಂದೆ ಯುರೋಪಿನ ಹೃದಯದಲ್ಲಿ ನವೀನವಾಗಿ ಸ್ಥಾಪಿತವಾದ ಸರ್ವಾಧಿಕಾರಿ ರಾಷ್ಟ್ರದೊಡನೆ ರಾಜಕೀಯ ಮತ್ತು ಆರ್ಥಿಕ ಬಹಿಷ್ಕಾರದ ಆಯುಧದಿಂದ ಹೋರಾಡಬೇಕೆಂದು ಪಾರ್ಟಿಯು ಜಗತ್ತಿನ ಶ್ರಮಜೀವಿಗಳಿಗೆ ಕರೆ ಕೊಟ್ಟಿತ್ತು. ಶತ್ರು ರಾಷ್ಟ್ರದಿಂದ ಬರುವ ಯಾವತ್ತೂ ಸರಕುಗಳಿಗೆ ಬಹಿಷ್ಕಾರ ಹಾಕುವುದಲ್ಲದೆ ಅಲ್ಲಿನ ಯುದ್ಧೋದ್ಯಮಕ್ಕೆ ನೆರವಾಗುವ ಸರಕುಗಳನ್ನು ತಡೆ ಹಿಡಿಯಬೇಕೆಂದೂ ನಿರ್ಣಯವಾಗಿತ್ತು. ಪಾರ್ಟಿಯಲ್ಲಿ ಈ ವಿಷಯಕ್ಕೆ ಸಂಬಂಧಿಸಿದ ವಿಭಾಗಗಳು ಮೇಲಿನ ಆದೇಶದಂತೆ ವರ್ತಿಸಲು ಉತ್ಸಾಹದಿಂದ ಮುಂದೆ ಬಂದವು. ಈ ಸಣ್ಣ ರೇವಿನ ಮಜೂರರು ಶತ್ರು ರಾಷ್ಟ್ರಕ್ಕೆ ಹೋಗುವ ಮತ್ತು ಅಲ್ಲಿಂದ ಬರತಕ್ಕ ಸರಕುಗಳನ್ನು ಹಡಗಿಗೆ ಸಾಗಿಸುವುದಿಲ್ಲವೆಂದು ಸಂಪು ಹೂಡಿದರು. ಬೇರೆ ಮಜೂರ ಸಂಘಗಳು ಈ ಸಂಘದೊಡನೆ ಸಹಕರಿಸಿದುವು. ಆದರೆ ಸಂಪು ನಡೆಯುವುದು ಕಷ್ಟವಾಯಿತು. ಪೋಲೀಸರೊಡನೆ ತಿಕ್ಕಾಟ ನಡೆದು ಗಾಯ, ರಕ್ತಪಾತ ಆಗಿಯೇ ಆಯಿತು. ಹೋರಾಟದ ಅಂತಿಮ ಪರಿಣಾಮವು ವಿದಿತವಾಗುವ ಸ್ವಲ್ಪ ಪೂರ್ವದಲ್ಲಿ ಐದು ವಿಚಿತ್ರ ಕರಿ ಹಡಗುಗಳು ರೇವಿನೊಳಗೆ ಬಂದು ತಂಗಿದುವು. ಪ್ರತಿ ಹಡಗಿನ ಮೇಲೂ '**ಆ ದೇಶ**'ದಲ್ಲಿ ನಡೆದ ಕ್ರಾಂತಿಯ ಪ್ರಮುಖ ನಾಯಕನ ಹೆಸರನ್ನು ಅಲ್ಲಿನ ಲಿಪಿಯಲ್ಲಿ ಬರೆದಿದ್ದರು, ಎದುರುಗಡೆ ಕ್ರಾಂತಿ ಪತಾಕೆ ಮೆರೆಯುತಿತ್ತು. ಸಂಪು ಹೂಡುತ್ತಲಿದ್ದ ಕೂಲಿಕಾರರು ಈ ಹಡಗುಗಳನ್ನು ಜಯಜಯಕಾರದಿಂದ ಸ್ವಾಗತಿಸಿದರು. ಮರುಕ್ಷಣದಲ್ಲಿ ಸರಕನ್ನಿಳಿಸುವ ಕೆಲಸ ಆರಂಭವಾಯಿತು. ಎಷ್ಟೋ ಹೊತ್ತಿನ ಮೇಲೆ ಪೆಟ್ಟಿಗೆಗಳಲ್ಲಿದ್ದ ಸರಕು ಬಹಿಷ್ಕೃತ ದೇಶದ ಯುದ್ಧೋ

ದ್ಯಮಕ್ಕೆ ನೆರವಾಗುವ ಮತ್ತು ಅಲ್ಲಿಗೇ ಹೋಗಲಿರುವ ಅಪೂರ್ವ ಖನಿಜವೆಂಬ ಸುದ್ದಿ ಬಯಲಾಯಿತು.

ಪಾರ್ಟಿಯ ಬಂದರಿನ ಕೆಲಸಗಾರರ ವಿಭಾಗವು ಕೂಡಲೇ ಸಭೆ ಸೇರಿತು. ಸಭೆಯಲ್ಲಿ ಹೊಡೆದಾಟವೇ ಜರಗಿತು. ಚರ್ಚೆ ದೇಶದಲ್ಲೆಲ್ಲ ಸರ್ವತ್ರ ವ್ಯಾಪಿಸಿತು. ಪ್ರತಿಗಾಮಿ ಪತ್ರಿಕೆಗಳು ಈ ಸಂದರ್ಭವನ್ನು ಚೆನ್ನಾಗಿ ಉಪಯೋಗಿಸಿಕೊಂಡವು. ವಿಚಿತ್ರ ಹಡಗುಗಳ ಸರಕನ್ನಿಳಿಸ ಬೇಕೋ ಬೇಡವೋ ಎಂಬ ವಿವಾದವನ್ನು ಬಂದರ ಕೆಲಸಗಾರರು ತೀರ್ಮಾನಿಸಿಕೊಳ್ಳುವವರೆಗೆ ಪೋಲೀಸರು ತಾವು ಸಂಪಿನ ಸುದ್ದಿಗೆ ಬರುವುದಿಲ್ಲವೆಂದು ತಾಟಸ್ಥ್ಯವನ್ನು ಘೋಷಿಸಿದರು. ಪಾರ್ಟಿಯ ನಾಯಕರು ಸಂಪನ್ನು ಉಪಸಂಹರಿಸಿ, ಆ ವಿಚಿತ್ರ ಹಡಗುಗಳ ಸರಕನ್ನಿಳಿಸಬೇಕೆಂದು ಸಾರಿದರು. ಕ್ರಾಂತಿಯ ಮಹಾನ್ ದೇಶದ ಈ ವರ್ತನೆಯನ್ನು ಸಮರ್ಥಿಸಲು ಅವರು ಹಲವು ಕಾರಣಗಳನ್ನು ಕೊಟ್ಟು ವಾದಗಳಿಂದ ಸಮರ್ಥನೆ ಮಾಡಲೆಳಸಿದರೂ ಅದನ್ನು ನಂಬಿದವರು ಯಾರೂ ಇರಲಿಲ್ಲ: ಬಂದರ ಕೆಲಸಗಾರರಲ್ಲಿ ಒಡಕುಂಟಾಯಿತು: ಹಳೆಯವರಲ್ಲಿ ಹಲವರು ಪಾರ್ಟಿಯನ್ನು ತ್ಯಜಿಸಿದರು. ಆ ಮೇಲೆ ಎಷ್ಟೋ ತಿಂಗಳು ಪಾರ್ಟಿಯು ಇದ್ದೂ ಇಲ್ಲದಂತೆ ಆಯಿತು: ಆದರೆ ಬರಬರುತ್ತ ಔದ್ಯಮಿಕ ಸ್ಥಿತಿಯು ದೇಶದಲ್ಲಿ ಕೆಡುತ್ತ ಹೋದ ದೆಸೆಯಿಂದ ಪಾರ್ಟಿಯು ಹಿಂದಿನ ಜನಪ್ರಿಯತೆಯನ್ನೂ, ಪ್ರಾಬಲ್ಯವನ್ನೂ ಗಳಿಸಿಕೊಂಡಿತು.

ಎರಡು ವರ್ಷಗಳು ಕಳೆದುವು. ಯೂರೋಪಿನ ದಕ್ಷಿಣ ಭಾಗದ ಇನ್ನೊಂದು ಕ್ಷುಧಾಪೀಡಿತ ಸರ್ವಾಧಿಕಾರಿ ಪ್ರಭುತ್ವವು ಆಫ್ರಿಕದಲ್ಲಿ ಸುಲಿಗೆ ಆಕ್ರಮಣಗಳನ್ನಾರಂಭಿಸಿತು. ಪಕ್ಷವು ಮರಳಿ ಬಹಿಷ್ಕಾರದ ಕಹಳೆಯನ್ನೂದಿತು. ಹಿಂದಿಗಿಂತಲೂ ಅಧಿಕೋತ್ಸಾಹದಿಂದ ಜಗತ್ತಿನ ಕೆಲಸಗಾರರು ಪಕ್ಷದ ಕಹಳೆಯ ಕೂಗನ್ನು ಆಲಿಸಿದರು. ಏಕೆಂದರೆ ಈ ಸಲ ಬಹಿಷ್ಕೃತ ದೇಶಕ್ಕೆ ಕಚ್ಚಾಮಾಲುಗಳನ್ನು ಕಳಿಸಬಾರದೆಂದು ಪ್ರಪಂಚದಲ್ಲಿ ಹೆಚ್ಚುಕಡಮೆ ಎಲ್ಲ ರಾಷ್ಟ್ರಗಳೂ ನಿರ್ಧರಿಸಿದ್ದುವು.

ಕಚ್ಚಾಮಾಲು ಮುಖ್ಯವಾಗಿ ಪೆಟ್ರೋಲು ಇಲ್ಲದೆ ಆಕ್ರಮಣ ಕಾರನು ಸೋಲುವುದು ಖಂಡಿತ. ಆದರೆ ಪರಿಸ್ಥಿತಿಯು ಸೋಲಿಗೆ ಸಮೀಪವಾಗಿರುವಾಗ ಮತ್ತೊಮ್ಮೆ ಕರಿನಾವೆಗಳು ದೃಗ್ಗೋಚರವಾದುವು. ಆ ಪೈಕಿ ದೊಡ್ಡ ಹಡಗಿಗೆ ಯುದ್ಧದ ವಿರುದ್ಧ ಕೂಗೆಬ್ಬಿಸಿ ಕೊಲೆಗೀಡಾದ ಒಬ್ಬ ಮಹಾನುಭಾವನ ಹೆಸರಿತ್ತು. ಕೂವೆಮರದ ತುದಿಯಲ್ಲಿ ಕ್ರಾಂತಿಯ ಪತಾಕೆಯನ್ನೂ, ಒಳಗಡೆ ಆಕ್ರಮಣಕಾರನ ಆಸುರೀತೃಷೆಯನ್ನಿಂಗಿಸುವ ಪೆಟ್ರೋಲನ್ನೂ ಹೊತ್ತು ಕೊಂಡು ಈ ಐದು ಹಡಗುಗಳು ಮರಳಿ ಬೆಲ್ಜಿಯಮ್ ದೇಶದ ಈ ಚಿಕ್ಕ ರೇವನ್ನು ಸಂದರ್ಶಿಸುವುದರಲ್ಲಿದ್ದುವು. ಇನ್ನು ಇಪ್ಪತ್ತನಾಲ್ಕು ತಾಸಿನಲ್ಲಿ ಅವು ರೇವಿಗೆ ತಲಪುವುವು ಎಂದಿರುವಾಗಲೂ ಕುಂಟಲೋವಿ ಮತ್ತು ಅವನ ಸಂಗಾತಿಗಳು ಇದಾವುದನ್ನೂ ಅರಿಯರು: ಅವು ಬರುವ ಮೊದಲೇ ಇವರನ್ನೆಲ್ಲ ಸಿದ್ಧಗೊಳಿಸುವುದು ರುಬಷೊವನ ಮೇಲಿನ ಹೊಣೆಗಾರಿಕೆಯಾಗಿತ್ತು.

ಮೊದಲ ದಿನ ರುಬಷೊವ ಬಾಯಿತೆರೆಯದೆ ತನ್ನ ನೆಲೆಯನ್ನು ಗುರುತಿಸಿಕೊಂಡನು. ಎರಡನೆಯ ದಿನ ಬೆಳಗ್ಗೆ ಪಾರ್ಟಿಯ ಕೋಣೆಯಲ್ಲಿ ಚರ್ಚೆ ಆರಂಭವಾಯಿತು.

ಕೋಣೆಯು ದೊಡ್ಡದಾಗಿದ್ದರೂ ಯಾವ ಅಲಂಕಾರವೂ ಇಲ್ಲದೆ ಬೋಳಾಗಿತ್ತು, ಕೊಳಕಾಗಿತ್ತು. ಕುರ್ಚಿ ಮೇಜುಗಳನ್ನಿಟ್ಟ ಕ್ರಮದಲ್ಲಿ ಯಾವ ಓರಣವೂ ಇರಲಿಲ್ಲ, ಈ ಬಗೆಯ ಅವ್ಯವಸ್ಥೆಯಿಂದಾಗಿ ಯಾವ ದೇಶಕ್ಕೆ ಹೋದರೂ ಅಲ್ಲಿಯ ಪಾರ್ಟಿ ಕಚೇರಿಗಳು ಒಂದೇ ರೀತಿಯಾಗಿ ತೋರುತಿದ್ದುವು: ಬಡತನವೂ ಒಂದು ಕಾರಣವಿರಬಹುದು, ಜತೆಗೆ ತ್ಯಾಗ ಮತ್ತು ನಿರಾಡಂಬರದ ಪರಂಪರೆ ಬೇರೆ. ಗೋಡೆ ತುಂಬ ಮಾಸಿಹೋದ ಚುನಾವಣಾ ಪ್ರಕಟಣೆಗಳು, ರಾಜಕೀಯ ಘೋಷಣೆಗಳು, ಟೈಪ್ ಮಾಡಿದ ಕಾಗದಗಳು ಹರಡಿದ್ದುವು. ಒಂದು ಮೂಲೆಯಲ್ಲಿ ಧೂಳು ಮುಸುಕಿದ ಡುಪ್ಲಿಕೇಟರನ್ನಿಟ್ಟಿದ್ದರು. ಇನ್ನೊಂದು ಮೂಲೆಯಲ್ಲಿ ಸಂಪುಗಾರರ ಸಂಸಾರಕ್ಕೆ ಕೊಡಲು ತೆಗೆದಿರಿಸಿದ್ದ ಹಳೆಯ ಬಟ್ಟೆ ಒರೆಯುರಾಶಿ; ಆ ರಾಶಿಯ ಪಕ್ಕದಲ್ಲೇ ಹಳೆಯದಾಗಿ ಬಣ್ಣವು ಹಳದಿ

ಯಾಗುತ್ತಾ ಬರುತ್ತಿದ್ದ ಪಾರ್ಟಿಯ ಪ್ರಕಟಣೆ ಮತ್ತು ಪುಸ್ತಿಕೆಗಳನ್ನು ಅಸ್ತವ್ಯಸ್ತವಾಗಿ ಚೆಲ್ಲಿದ್ದರು. ಎರಡು ಹಲಗೆಯನ್ನು ಕತ್ತರಿಕೋಲಿನ ಮೇಲಿರಿಸಿ ಮೇಜೆಂದು ಕರೆಯುತ್ತಿದ್ದರು. ಕಿಟಕಿಗಳಿಗೆ ಬಣ್ಣ ಬಳಿದಿದ್ದರು—ಇನ್ನೂ ಒಕ್ಕಲಾಗದ ಮನೆಯಂತೆ. ಮೇಜಿನ ಮೇಲೆ ಒಂದು ಇಲೆಕ್ಟ್ರಿಕ್ ಬಲ್ಬನ್ನು ಹಗ್ಗ ಕಟ್ಟಿ ತೂಗಹಾಕಿದ್ದರು. ಅದರ ಪಕ್ಕದಲ್ಲೇ ನುಸಿ ಹಿಡಿಯಲು ಕಾಗದದ ಪುಡಿಕೆಯೊಂದು ನೇತಾಡುತ್ತಿತ್ತು. ಮೇಜಿನ ಸುತ್ತಲೂ ಕುಂಟಲೋವಿ, ಮಾಜಿ ಜಟ್ಟಿ ಪಾವ್ರಲ್, ಲೇಖಕ ಬಿಲ್ ಮತ್ತು ಬೇರೆ ಮೂವರು ಕೂತಿದ್ದರು.

ಚಿರಪರಿಚಿತ, ಸಾಂಪ್ರದಾಯಕ ಕೊಳಕತನದ ನಡುವೆ ಆರಾಮವಾಗಿ ರುಬಷೊವ ಸ್ವಲ್ಪ ಹೊತ್ತು ಮಾತಾಡಿದನು: ಈ ವಾತಾವರಣದಲ್ಲಿ ನಿನ್ನಿನ ಮದ್ಯಗೃಹದಂತೆ ನಿರಾಶೆ ಕವಿಯುವ ಸಂಭವವಿರಲಿಲ್ಲ, ಬದಲು ರುಬಷೊವಗೆ ತಾನು ಮಾಡಬೇಕಾದ ಕೆಲಸದ ಅನಿವಾರ್ಯತೆಯೂ ಪ್ರಯೋಜನವೂ ಬಹಳ ಸ್ಪಷ್ಟವಾದುವು. ವಸ್ತುಸ್ಥಿತಿಯನ್ನು ಕಾಮ್ರೇಡರ ಮುಂದೆ ಹೇಳುವಾಗ ನಿಜವಾದ ವಿಷಯವು ಬರುವಲ್ಲಿಯವರೆಗೆ ಬಹಳ ವಿಶ್ವಾಸದಿಂದಲೂ ಉತ್ಸಾಹದಿಂದಲೂ ಆತ ಮಾತಾಡಿದನೆಂದು ಒಪ್ಪತಕ್ಕದು: ಆಕ್ರಮಣಕಾರ ರಾಷ್ಟ್ರದ ವಿರುದ್ಧ ಸಾರಿದ ಬಹಿಷ್ಕಾರವು ಯುರೋಪಿನ ಕೆಲವು ಸರಕಾರಗಳ ಲೋಭತನ ಮತ್ತು ವಂಚನೆಯಿಂದಾಗಿ ವಿಫಲವಾಗಿದೆ. ಕೆಲವರು ನೋಟಕ್ಕಾದರೂ ಬಹಿಷ್ಕಾರ ಹಾಕಿದವರಂತೆ ವರ್ತಿಸುವರು, ಇನ್ನು ಕೆಲವರು ಅಷ್ಟೂ ಇಲ್ಲ. ಆಕ್ರಮಣಕಾರ ರಾಷ್ಟ್ರಕ್ಕೆ ಪೆಟ್ರೋಲು ಬೇಕಾಗಿದೆ ಹಿಂದಿನ ಕಾಲದಲ್ಲಿ ಕ್ರಾಂತಿಯ ಮಹಾನ್ ದೇಶವು ಈ ಕೊರತೆಯನ್ನು ಪೂರಯಿಸುತ್ತಿತ್ತು. ಈಗ ಪೆಟ್ರೋಲ್ ಸರಬರಾಜು ನಡೆಯದಿದ್ದಲ್ಲಿ ಬೇರ ರಾಷ್ಟ್ರಗಳು ಕೊರತೆಯನ್ನು ಪೂರೈಸಲು ಮುಂದಾಗುವವು. ಯಥಾರ್ಥವಾಗಿ ಕ್ರಾಂತಿಯ ಮಹಾನ್ ದೇಶವನ್ನು ಜಾಗತಿಕ ಮಾರ್ಕೆಟಿನಿಂದ ಹೊರದೂಡಲು ಅವು ಯಾವಾಗಲೂ ಹೊಂಚು ಹಾಕುತ್ತಲೇ ಇವೆ. ಭಾವನಾತಿರೇಕದಿಂದ ಬಹಿಷ್ಕಾರದ ಸೂತ್ರಕ್ಕೆ ಅಂಟಿಕೊಂಡರೆ ಆ ಮಹಾನ್ ದೇಶದ ಔದ್ಯಮಿಕ ವಿಕಾಸವು ಜಗದ ವಿಶ್ವದ ಕ್ರಾಂತಿ ಚಳುವಳಿಗೆ ಅಪಾರ ಹಾನಿ

ಸಂಭವಿಸಬಹುದು. ಅರ್ಥಾತ್, ಇಷ್ಟರಿಂದ ನಿರ್ಣಯವು ಎಲ್ಲರಿಗೂ ಸ್ವತಃ ಸಿದ್ಧವಾಗತಕ್ಕದು.

ಪಾವ್ರಲ್ ಮತ್ತು ಬೇರೆ ಮೂವರು ಗೋಣಲ್ಲಾಡಿಸಿದರು. ಅವರ ವಿಚಾರದ ವೇಗ ಮಂದ; ಆ ಮಹಾನ್ ದೇಶದ ಕಾಮ್ರೇಡ್ ಹೇಳಿದುದೆಲ್ಲವೂ ಅವರಿಗೆ ತರ್ಕಶುದ್ಧವಾಗಿ ಕಂಡಿತು; ತತ್ತ್ವಪ್ರವಚನವಲ್ಲದೆ ಕೂಡಲೇ ಕಾರ್ಯಗತವಾಗತಕ್ಕ ವಿಚಾರವೇನೂ ಅದರಲ್ಲಿದ್ದಂತೆ ಅವರಿಗೆ ಅನಿಸಲಿಲ್ಲ. ಈ ಮಾತಿಗೆಲ್ಲ ಗುರಿ ಯಾವುದು ಎಂಬುದಾಗಲಿ, ಐದು ಕರಿ ಹಡಗುಗಳು ತಮ್ಮ ರೇವಿನ ಕಡೆಗೆ ದ್ರುತಗತಿಯಿಂದ ಸಾಗುತ್ತಿರುವುವೆಂಬುದಾಗಲಿ ಅವರಿಗೊಬ್ಬರಿಗೂ ತಿಳಿಯದು. ಕುಂಟ ಲೋವಿ ಮತ್ತು ಲೇಖಕ ಬಿಲ್ ಪರಸ್ಪರ ಒಂದು ಬಾರಿ ನೋಡಿಕೊಂಡರು. ರುಬಷೊವ ಕೂಡ ಅವರ ಸಂಜ್ಞೆಯನ್ನು ಗಮನಿಸಿದನು. ಬಳಿಕ ಹಿಂದಿಗಿಂತ ಶುಷ್ಕವಾದ ಸ್ವರದಲ್ಲಿ ತತ್ತ್ವದ ವಿಚಾರವಾಗಿ ನಾನು ಹೇಳಬೇಕಾದ್ದು ಇಷ್ಟೇ. ಕೇಂದ್ರ ಸಮಿತಿಯ ನಿರ್ಣಯವನ್ನು ನೀವು ಪಾಲಿಸತಕ್ಕದ್ದು; ಅಲ್ಲದೆ ನಿಮ್ಮಲ್ಲಿ ರಾಜಕೀಯದಲ್ಲಿ ಹೆಚ್ಚು ಪರಿಶ್ರಮವಿಲ್ಲದ ಯಾರಿಗಾದರೂ ಸಂದೇಹಗಳು ಬರುವಂತಿದ್ದರೆ ಅವರಿಗೆ ವಿಷಯದ ವಿವರಗಳನ್ನು ಹೇಳಿ ಸಮಾಧಾನ ಮಾಡಬೇಕಾದುದೂ ನಿಮ್ಮ ಕರ್ತವ್ಯ. ಈಗ ನಾನು ಇದಕ್ಕಿಂತ ಹೆಚ್ಚು ಯಾವುದನ್ನೂ ಹೇಳಬೇಕಾಗಿಲ್ಲ" ಎಂದನು.

ಒಂದು ಮಿನಿಟು ಎಲ್ಲವೂ ಮೌನವಾಗಿತ್ತು. ರುಬಷೊವ ಕನ್ನಡಕವನ್ನು ತೆಗೆದು ಸಿಗರೇಟ ಹಚ್ಚಿದನು. ಕುಂಟ ಲೋವಿ ಅನಿಶ್ಚಿತ ಸ್ವರದಲ್ಲಿ 'ಭಾಷಣಕರ್ತರಿಗೆ ನಮ್ಮ ಧನ್ಯವಾದ! ಯಾರಿಗಾದರೂ ಪ್ರಶ್ನೆ ಕೇಳಲಿಕ್ಕಿದೆಯೆ?' ಎಂದನು.

ಯಾರೂ ಪ್ರಶ್ನೆ ಕೇಳಲಿಲ್ಲ. ತುಸು ತಡೆದು ಒಬ್ಬ ಕೂಲಿಕಾರನು ಸಂಕೋಚಪಟ್ಟು 'ನಾವೇನು ಹೇಳುವುದಿದೆ? ಆ ಮಹಾನ್ ದೇಶದ ಕಾಮ್ರೇಡರಿಗೆ ಸರ್ವವೂ ವಿದಿತವಾಗಿರುತ್ತದೆ; ನಾವಂತೂ ಬಹಿಷ್ಕಾರವನ್ನು ಯಶಸ್ವಿಗೊಳಿಸಲು ನಿರಂತರವಾಗಿ ದುಡಿಯುವವರು. ನೀವು ನಮ್ಮ ಮೇಲೆ ಈ ವಿಷಯದಲ್ಲಿ ಸಂದೇಹವೇ ಪಡಬೇಕಾದ್ದಿಲ್ಲ.

ಆ ಹಡಗುಗಳ ದೇಶಕ್ಕೆ ನಮ್ಮ ಬಂದರಿನಿಂದ ಒಂದು ಕಡ್ಡಿಯನ್ನೂ
ನಾವು ರವಾನೆ ಮಾಡೆವು. ಇದು ನಿಶ್ಚಯ' ಎಂದನು.

ಅವನ ಇಬ್ಬರು ಸಂಗಾತಿಗಳು ಇದಕ್ಕೆ ಗೋಣಲ್ಲಾಡಿಸಿ ಸೈಗುಟ್ಟಿ
ದರು. 'ಇಲ್ಲಿಂದಲೇ? ಸಾಧ್ಯವಿಲ್ಲ' ಎಂಬ ಮಾತನ್ನು ಜಟ್ಟ ಪಾವ್ಲ
ಕೂಡಿಸಿ ಹೋರಾಡುವ ಮುಖಮುದ್ರೆಯನ್ನು ನಟಿಸಿ ಕಿವಿಗಳನ್ನು ತಮ
ಷೆಗೆ ಹಾರಿಸಿದನು.

ರುಬಷೊವನಿಗೆ ಒಂದರೆಕ್ಷಣ ತಾನು ವಿರೋಧಿ ಗುಂಪಿನ ಮಧ್ಯೆ
ಕೂತಂತೆ ಅನಿಸಿತು; ತನ್ನ ಮಾತಿನ ಜಾಡೇ ಅವರಿಗೆ ಅರ್ಥವಾಗಲಿಲ್ಲ
ವೆಂದು ಅವನಿಗೆ ನಿಧಾನವಾಗಿ ತಿಳಿಯಿತು. ಕುಂಟ ಲೋವಿಯಾದರೂ
ಅವರ ತಿಳಿವಳಿಕೆಯನ್ನು ತಿದ್ದಿಯಾನೆಂದು ರುಬಷೊವ ಆತನ ಕಡೆಗೆ
ನೋಡಿದನು. ಕುಂಟ ಲೋವಿ ಕಣ್ಣು ತಗ್ಗಿಸಿ ಮೌನವಾದನು.
ಹಠಾತ್ತಾಗಿ ಲೇಖಕನು 'ನಿಮ್ಮ ವ್ಯಾಪಾರಕ್ಕೆ ಈ ಸಲ ಬೇರೊಂದ
ರೇವನ್ನು ಹುಡುಕಿದರೇನಾಗುತ್ತದೆ? ಪ್ರತಿ ಸಲವೂ ನಮಗೇ ಏಕೆ ಈ
ಕೆಲಸ ಹಚ್ಚುತ್ತೀರಿ?' ಎಂದು ಕೇಳಿದನು.

ಬಂದರಿನ ಕೆಲಸಗಾರರಿಗೆ ಆಶ್ಚರ್ಯವಾಯಿತು. ಬಿಲ್ ಹೇಳಿ
'ವ್ಯಾಪಾರ'ವೆಂಬ ಮಾತಿನ ಅರ್ಥವೇ ಅವರಿಗಾಗಲಿಲ್ಲ. ಹೊ
ಕಾರುತ್ತ ತಮ್ಮ ರೇವಿನ ಕಡೆಗೆ ಧಾವಿಸುತ್ತಿರುವ ಕರಿ ಹಡಗಿ
ತಂಡವನ್ನು ಅವರು ಕಲ್ಪನೆಯ ಕಣ್ಣಿಂದಲೂ ಕಾಣಲಾರರು. ರುಬ
ಷೊವ ಬಿಲ್ ಹಾಕಿದ ಪ್ರಶ್ನೆಯನ್ನು ನಿರೀಕ್ಷಿಸದೆ ಇರಲಿಲ್ಲ.

'ರಾಜಕೀಯವಾಗಿಯೂ, ಭೌಗೋಲಿಕವಾಗಿಯೂ ಇದು ಉತ್ತಮ
ಮಾರ್ಗವೆಂದು ನಮಗೆ ತೀಳಿದಿದೆ. ಇಲ್ಲಿಂದ ಸರಕುಗಳನ್ನು ನೇರವಾ
ನೆಲದ ಮೇಲಿಂದ ಒಯ್ಯಬಹುದು. ನಮಗೆ ಯಾವುದನ್ನೂ ಗುಪ್ತವಾಗಿ
ಬೇಕಾದ ಅಗತ್ಯವಿಲ್ಲ; ಆದರೆ ಪ್ರತಿಗಾಮಿ ಪತ್ರಿಕೆಗಳಿಗೆ ತಿಳಿಯದ ಹಾ
ಕೆಲಸ ನಡೆಸುವುದು ಮುಂಜಾಗ್ರತೆಯ ಲಕ್ಷಣವೆಂದು ಹೀಗೆ ಮಾ
ಬೇಕಾಗಿದೆ", ಎಂದು ರುಬಷೊವ ನುಡಿದನು.

ಲೇಖಕನು ಕುಂಟ ಲೋವಿಯ ಕಡೆ ಮತ್ತೊಮ್ಮೆ ದೃಷ್ಟಿ
ಹೊರಳಿಸಿದನು. ರುಬಷೊವನ ಮಾತು ಅರ್ಥವಾಗದವರಂತೆ ಬಂದರ

ಕೆಲಸಗಾರರು ಅವನನ್ನೇ ನೋಡಹತ್ತಿದರು, ಅವರು ಸಾವಕಾಶವಾಗಿ ಎಲ್ಲ ವಿಚಾರವನ್ನೂ ಗ್ರಹಿಸುತ್ತಿರುವಂತೆ ತೋರಿತು. ಫಕ್ಕನೆ ಪಾವುಲ್ ಕರ್ಕಶ ಸ್ವರದಲ್ಲಿ 'ನೀವು ವಾಸ್ತವವಾಗಿ ಏನು ಹೇಳಬೇಕೆಂದು ಬಂದಿರಿ?' ಎಂದು ಕೇಳಿದನು.

ಎಲ್ಲರೂ ಈಗ ಪಾವುಲನ ಕಡೆಗೆ ತಿರುಗಿದರು. ಅವನ ಕೊರಳು ಕೆಂಪಾಗಿತ್ತು. ಕೆಕ್ಕರಿಸಿದ ಕಣ್ಣುಗಳಿಂದ ಅವನು ರುಬಷೊವನನ್ನು ನೋಡುತ್ತಿದ್ದನು. ಕುಂಟ ಲೋವಿ ಸಂಯಮದಿಂದ 'ನಿನಗೆ ಗೊತ್ತಾದುದು ಈಗಲೋ?' ಎಂದು ಕೇಳಿದನು.

ರುಬಷೊವ ಒಮ್ಮೆ ಅವನನ್ನೂ ಒಮ್ಮೆ ಇವನನ್ನೂ ನೋಡಿ 'ನಿಮಗೆ ವಿವರ ಹೇಳಲು ಮರೆತೆ. ನಮ್ಮ ಮಹಾನ್ ದೇಶದ ವಿದೇಶೀ ವ್ಯಾಪಾರ ಕಚೇರಿಯ ಐದು ಸರಕಿನ ಹಡಗುಗಳು ಗಾಳಿ ಸರಿಯಾಗಿದ್ದರೆ ನಾಳೆ ಬೆಳಿಗ್ಗೆ ಇಲ್ಲಿ ಬಂದು ಮುಟ್ಟುವುವು' ಎಂದು ಸಾವಕಾಶವಾಗಿ ಹೇಳಿದನು.

ಅವರಿಗೆ ಈ ಮಾತಿನ ಅರ್ಥವಾಗಲು ಸ್ವಲ್ಪ ಹೊತ್ತು ಹಿಡಿಯಿತು. ಯಾರೂ ಮಾತಾಡಲಿಲ್ಲ. ಎಲ್ಲರೂ ರುಬಷೊವನನ್ನೇ ನೋಡುತ್ತಿದ್ದರು. ಪಾವುಲ್ ಸಾವಕಾಶವಾಗಿ ಎದ್ದು ನಿಂತು, ತಲೆಯ ಟೊಪ್ಪಿಯನ್ನು ನೆಲಕ್ಕೆ ಅಪ್ಪಳಿಸಿ, ಕೋಣೆಯಿಂದ ಹೊರನಡೆದನು. ಅವನ ಇಬ್ಬರು ಸಂಗಾತಿಗಳು ಅವನು ಹೋಗುವುದನ್ನೇ ನೋಡಿದರು. ಯಾರೂ ಮಾತಾಡಲಿಲ್ಲ. ಕುಂಟ ಲೋವಿ ಗಂಟಲು ಕೆರೆದು, 'ಭಾಷಣಕಾರ ಕಾಮ್ರೇಡರು ಈ ಪ್ರಸಂಗದ ಕಾರಣಗಳನ್ನು ನಮಗೆ ವಿವರಿಸಿ ಹೇಳಿದ್ದಾರೆ. ನಾವು ಸರಬರಾಜು ಮಾಡದೆ ಇದ್ದರೆ ಬೇರೆಯವರು ಮಾಡುತ್ತಾರಂತೆ. ಇನ್ನು ಯಾರಿಗೆ ಮಾತಾಡುವ ಇಚ್ಛೆ ಇದೆ?' ಎಂದನು.

ಮೊದಲು ಮಾತನಾಡಿದ ಬಂದರ ಕೆಲಸಗಾರನು ಕೂತಲ್ಲೆ ಸ್ವಲ್ಪ ಚಲಿಸಿ 'ನಮಗೆ ಈ ಸ್ವರವೇನೂ ಹೊಸದಲ್ಲ. ಸಂಪಿನ ಸಮಯ ನಾವು ಮಾಡದೆ ಇದ್ದಲ್ಲಿ ಬೇರೆಯವರು ಮಾಡುತ್ತಾರಲ್ಲಾ

ಎನ್ನುವ ಸಂಚಕಾರಿಗಳು ಯಾವ ಕಾಲಕ್ಕೂ ಇರುತ್ತಾರೆ. ನಮಗೆ ಇಂಥ ಮಾತುಗಳನ್ನು ಕೇಳಿ ಸಾಕಾಗಿದೆ."

ಇನ್ನೊಮ್ಮೆ ವಿರಾಮ. ಹೊರಗಿನ ಬಾಗಿಲನ್ನು ಪಾವುಲ್ ರಪ್ಪೆಂದು ಬೀಸಿ ಇಕ್ಕಿಕೊಂಡು ಹೊರಗೆ ಹೋದ ಸದ್ದು ಒಳಗಿನ ಮೌನವನ್ನು ಒಡೆಯಿತು. ರುಬಷೊವ ಗಡಸಾಗಿ 'ಕಾಮ್ರೇಡರೆ, ನಮ್ಮ ಮಹಾನ್ ದೇಶದ ಔದ್ಯಮಿಕ ಬೆಳವಣಿಗೆಯ ಹಿತಸಾಧನೆಗೆ ಪ್ರಥಮ ಪ್ರಾಶಸ್ತ್ಯ ಸಲ್ಲಬೇಕಾಗಿದೆ. ಉದ್ರೇಕದಿಂದ ಯಾವುದೂ ಸಾಧನೆಯಾಗದು. ನೀವೇ ವಿಚಾರಿಸಿ ನೋಡಿ' ಎಂದನು.

ಬಂದರ ಕೆಲಸಗಾರನು ಗಲ್ಲವನ್ನು ಎತ್ತರಿಸಿ 'ನಾವು ಈ ವಿಷಯ ಬೇಕಾದಷ್ಟು ಆಲೋಚನೆ ಮಾಡಿ ಆಯಿತು. ಕೇಳಿದ್ದೂ ಸಾಕು. ಆ ಮಹಾನ್ ದೇಶಕ್ಕೆ ಸೇರಿದ ನೀವು ಇನ್ನು ಕೆಲ ವಿಷಯಗಳನ್ನು ಕಾರ್ಯತಃತೋರಿಸುವ ಕಾಲ ಬಂದಿದೆ. ಇಡೀ ಪ್ರಪಂಚ ನಿಮ್ಮನ್ನು ನಿರೀಕ್ಷಿಸುತ್ತಿದೆ. ಐಕ್ಯ, ತ್ಯಾಗ, ಶಿಸ್ತು ಎಂದು ಆಡುವ ನೀವೇ ಈ ರೀತಿ ನಿಮ್ಮ ನೌಕಾ ಪಡೆಯನ್ನು ಕಳ್ಳ ಸಾಗಾಟಕ್ಕೆ ಉಪಯೋಗಿಸುತ್ತಿದ್ದೀರಲ್ಲಾ?' ಎಂದು ಸವಾಲು ಹಾಕಿದನು.

ಇದನ್ನು ಕೇಳುತ್ತಲೇ ಕುಂಟ ಲೋವಿ ಒಮ್ಮೆಲೆ ತಲೆ ಎತ್ತಿದನು. ಅವನ ಮುಖ ವಿವರ್ಣವಾಗಿತ್ತು. ರುಬಷೊವನನ್ನು ನಳಿಗೆಯಿಂದ ಪ್ರಣಾಮಿಸಿ ತಗ್ಗಿದ ಸ್ವರದಲ್ಲಿ 'ಈಗ ಮಾತಾಡಿದ ಕಾಮ್ರೇಡ್ ಹೇಳಿದ ಅಭಿಪ್ರಾಯಕ್ಕೆ ನನ್ನ ಸಮ್ಮತಿ ಇದೆ. ಬೇರೆ ಯಾರಿಗಾದರೂ ಮಾತಾಡುವ ಇಚ್ಛೆ ಇದೆಯೆ? ಸಭೆ ಬರ್ಖಾಸ್ತಾಯಿತು' ಎಂದನು.

ರುಬಷೊವ ಊರುಗೋಲುಗಳ ಆಧಾರದಿಂದ ಕುಂಟುತ್ತ ಹೊರ ನಡೆದನು. ಘಟನೆಗಳು ಪೂರ್ವನಿಶ್ಚಿತವೂ, ಅಪರಿಹಾರ್ಯವೂ ಆದ ಮಾರ್ಗದಲ್ಲೇ ನಡೆದುವು. ಪಂಚನಾವೆಗಳು ರೇವನ್ನು ಸಮೀಪಿಸುತ್ತಿದ್ದಂತೆ ರುಬಷೊವ ಆ ಮಹಾನ್ ದೇಶದ ಅಧಿಕಾರಿಗಳೊಡನೆ ತಂತಿಯ ಮೂಲಕ ವಿಚಾರವಿನಿಮಯ ನಡೆಸಿದನು. ಮೂರುದಿನ ಕಳೆದ ಮೇಲೆ ಬಂದರ ಕೆಲಸಗಾರರ ನಾಯಕರನ್ನು ಪಾರ್ಟಿಯಿಂದ ಹೊರತಳ್ಳಲಾಯಿತು. ಕುಂಟ ಲೋವಿಯು ಶತ್ರುಗಳೊಡನೆ ಸೇರಿಕೊಂಡ ಬೇಹು

ಕಾರನೆಂದು ಅವನ ಮೇಲೆ ಪಾರ್ಟಿಯ ಮುಖಪತ್ರದಲ್ಲಿ ಆರೋಪ ಮಾಡ
ಲಾಯಿತು. ಅದಾದ ಮೂರು ದಿವಸಗಳಲ್ಲಿ ಕುಂಟ ಲೋವಿ ನೇಣು
ಹಾಕಿಕೊಂಡು ಪ್ರಾಣತ್ಯಾಗ ಮಾಡಿದನು.

## ೧೩

ರಾತ್ರಿ ಸ್ಥಿತಿ ಇನ್ನಷ್ಟು ಹಾಳಾಯಿತು. ರುಬಷೊವಗೆ ಬೆಳಗಿನ
ತನಕವೂ ನಿದ್ದೆ ಬರಲಿಲ್ಲ. ಆಗಿಂದಾಗ ಮೈನಡುಕವೇಳುತಿತ್ತು, ಹಲ್ಲು
ಸೆಡೆಯುತಿತ್ತು. ಮಿದುಳಿನ ಮಿಲನ ಕೇಂದ್ರಗಳೆಲ್ಲ ಉರಿಯುತ್ತಿರುವುವೆಂಬ
ಒಂದು ಭಾವನೆ ಅವನ ಮನಸ್ಸಿನಲ್ಲಿ ಉಂಟಾಯಿತು; ಆದರೂ ಚಿತ್ರ
ಗಳೂ, ಸ್ವರಗಳೂ ಮಾನಸಿಕಪಟಲದಲ್ಲಿ ಎದ್ದು ಬೀಳುವ ವೇದನಾ
ಮಯ ಪ್ರಕ್ರಿಯೆಯು ನಿಲ್ಲುವಂತಿಲ್ಲ. ಒಮ್ಮೆ ಭಾನುವಾರದ ಕರಿಖುಡುಪಿನ,
ಊದಿಕೊಂಡ ಕಣ್ಣಿನ ರಿಚರ್ಡ 'ನನ್ನನ್ನು ತೋಳಗಳಿಗೆ ಬಲಿಕೊಡಬೇಡಿ,
ಕಾಮ್ರೇಡ್' ಎಂದ ದೃಶ್ಯವು ಹಾಯುವುದು. ಮರುಕ್ಷಣ 'ಇನ್ನು
ಯಾರು ಮಾತಾಡಲಿಚ್ಛಿಸುತ್ತಾರೆ?' ಎಂಬ ಕುಂಟ ಲೋವಿಯು ನಿಲು
ವೆಯ ಚಿತ್ರವು ಕಣ್ಣಿಗೆ ಕಟ್ಟುವುದು. ಮಾತಾಡುವ ಇಚ್ಛೆ ಎಲ್ಲರಿಗೂ
ಇದೆ. ಚಳವಳಿಯಲ್ಲಿ ಸೂಕ್ಷ್ಮ ಭಾವಗಳಿಗೆ ಎಡೆ ಇಲ್ಲ, ಮುಳುಗಿ
ಸತ್ತವರ ಶವಗಳನ್ನು ದಾರಿಯ ತಿರವುಗಳಲ್ಲಿ ಎಸೆಯುತ್ತ ಚಳವಳಿಯು
ನಿಶ್ಚಿಂತೆಯಿಂದ ತನ್ನ ಲಕ್ಷ್ಯದ ಕಡೆಗೆ ಧಾವಿಸುವುದು. ದಾರಿಯಲ್ಲಿ
ಎಷ್ಟು ತಿರವು ಮುರವುಗಳು! ತಿರವು ಮುರವು ಅದರ ಅಸ್ತಿತ್ವದ
ಲಕ್ಷಣವೋ ಏನೋ. ವಕ್ರಗತಿಯನ್ನು ಅನುಸರಿಸಲಾಗದವರನ್ನು
ದಡಕ್ಕೆ ಅಪ್ಪಳಿಸಿ ಹೆಣವಾಗಿಸುವುದೂ ಚಳವಳಿಯ ಧರ್ಮವಿದ್ದಂತೆ
ಕಾಣುವುದು. ವ್ಯಕ್ತಿಯ ಉದ್ದೇಶಗಳ ಗೋಜಿಲ್ಲ, ಅವನ ಆತ್ಮದ
ಗೊಡವೆ ಇಲ್ಲ, ಅವನ ಹೃದಯದೊಳಗೂ ಮಸ್ತಿಷ್ಕದಲ್ಲಿಯೂ ಏನು
ನಡೆದೀತೆಂಬುದರ ಪರವೆ ಇಲ್ಲ. ಪಾರ್ಟಿಗೆ ಗೊತ್ತಿರುವ ಅಪರಾಧವೆಂದರೆ
ಒಂದೇ ಒಂದು: ಹಾಕಿದ ಹಾದಿಯನ್ನು ಬಿಟ್ಟು ನಡೆಯುವುದು.
ದಂಡನೆಯೂ ಒಂದೇ ಒಂದು: ಮರಣ. ಚಳವಳಿಯಲ್ಲಿ ಮರಣವೆಂಬುದು

ರಹಸ್ಯವಾದ ಘಟನೆಯಲ್ಲ, ಅದರಲ್ಲಿ ಮಹೋನ್ನತವಾದ ಯಾವ ತತ್ವವೂ ಇರಲಿಲ್ಲ. ಅದು ರಾಜಕೀಯ ಭಿನ್ನಾಭಿಪ್ರಾಯಗಳ ತರ್ಕಶುದ್ಧವಾದ ಪರಿಹಾರವಾಗಿತ್ತು.

ನಸುಕು ಹರಿಯುವುದಕ್ಕೆ ಕಿಂಚಿತ್ ಪೂರ್ವದಲ್ಲಿ ರಾತ್ರಿಯ ಎಚ್ಚರದ ಆಯಾಸಕ್ಕೆ ರುಬಷೊವಗೆ ಕಣ್ಣು ತೂಕಡಿಕೆ ಬಂದು ಆತ ಮಂಚದಲ್ಲಿ ನಿದ್ದೆಹೋದನು. ಹೊಸ ದಿನವನ್ನು ಸಾರುವ ತುತೂರಿಯ ಮೊಳಗಿನಿಂದ ಆತನಿಗೆ ಎಚ್ಚರವಾಯಿತು; ಸ್ವಲ್ಪ ಹೊತ್ತಿನಲ್ಲಿ ಮುದಿ ಕಾವಲುಗಾರನೂ ಮತ್ತಿಬ್ಬರು ಅಧಿಕಾರಿಗಳೂ ಆತನನ್ನು ಡಾಕ್ಟರರಲ್ಲಿಗೆ ಒಯ್ದರು.

ಸೀಳ್ಬಾಯಿಯವನ ಮತ್ತು ೪೦೭ರವನ ಬಾಗಿಲುಗಳಲ್ಲಿರುವ ಕಾರ್ಡಿನಿಂದ ಅವರ ಹೆಸರನ್ನು ತಿಳಿಯಬಹುದೆಂದು ರುಬಷೊವ ಭಾವಿಸಿದ್ದನು. ಆದರೆ ಅವನ ದಾರಿ ಅವರ ಕೋಣೆಗಳನ್ನು ಹಾದು ಹೋಗಲಿಲ್ಲ. ಬಲಗಡೆಯಲ್ಲಿದ್ದ ಖಾಲಿ ಕೋಣೆಯನ್ನು ಹಾದರೆ ಆ ಮೇಲೆ ಕೋಣೆಗಳಿಲ್ಲ. ಆದರೆ ಏಕಾಂತವಾಸದ ವಿಭಾಗದಿಂದ ಇತರ ವಿಭಾಗಗಳಿಗೆ ಹೋಗಬೇಕಾದರೆ ನಡುವೆ ಕಾಂಕ್ರೀಟಿನ ಬಾಗಿಲೊಂದಿತ್ತು. ಮುದಿ ಕಾವಲುಗಾರನು ಅದನ್ನು ಕಷ್ಟದಿಂದ ತೆರೆದನು. ಸ್ವಲ್ಪದೂರ ನಡೆದ ಮೇಲೆ ಕೋಣೆಯ ಬಾಗಿಲಿನ ಮೇಲೆ ನಾಲ್ಕಾರು ಹೆಸರುಗಳನ್ನು ಬರೆದಿತ್ತು; ಸಣ್ಣ ಅಪರಾಧಗಳ ಕೈದಿಗಳ ವಿಭಾಗವೆಂದು ಒಳಗಿನವರ ಗದ್ದಲ, ನಗೆ, ಸಂಗೀತಗಳಿಂದ ತಿಳಿದು ಬರುತಿತ್ತು. ಕ್ಷೌರದ ಕೋಣೆಯಲ್ಲಿ ಒಬ್ಬ ಹಳೇ ಅಪರಾಧಿಯಂತೆ ಕಾಣುವ ಮೊನಚುಮೂಗಿನ ಕೈದಿಯೊಬ್ಬನು ಗಡ್ಡ ಬೋಳಿಸಿಕೊಳ್ಳುತ್ತಿದ್ದನು. ಇನ್ನೆರಡು ಜನ ತಲೆಯನ್ನು ಬೋಳುಮಾಡಿಸಿಕೊಳ್ಳುತ್ತಿದ್ದರು. ರುಬಷೊವನನ್ನು ನೋಡುತ್ತಲೇ ಮೂವರೂ ಕುತೂಹಲದಿಂದ ತಿರುಗಿ ನೋಡಿದರು. ಕೆಂಪು ಕ್ರಾಜಿಯ ಗುರುತುಳ್ಳ ಕೋಣೆಯೊಂದು ಸಮೀಪಿಸಿತು. ಕಾವಲುಗಾರನು ಗೌರವದಿಂದ ಕದವನ್ನು ತಟ್ಟಿ ರುಬಷೊವನನ್ನು ಕರೆದುಕೊಂಡು ಒಳ ನಡೆದನು; ಸಮವಸ್ತ್ರಧಾರಿಗಳು ಹೊರಗಡೆ ಕಾದು ನಿಂತರು.

ಸೆರೆಮನೆಯ ವೈದ್ಯಶಾಲೆ ಸಣ್ಣದಾಗಿ ಕಾರ್ಬೊಲಿಕ್ ಮತ್ತು ಹೊಗೆಸೊಪ್ಪಿನ ದುರ್ವಾಸನೆಯಿಂದ ತುಂಬಿತ್ತು. ಒಂದು ಬಕೀಟ ಮತ್ತು ಎರಡು ಬಟ್ಟಲುಗಳಲ್ಲಿ ಹೊಲಸಾದ ಪಟ್ಟಿಗಳನ್ನೂ, ಹತ್ತಿಯ ಚೂರುಗಳನ್ನೂ ಕುತ್ತಿಗೆಯವರೆಗೆ ತುಂಬಿಸಿಟ್ಟಿದ್ದರು. ಡಾಕ್ಟರನು ಬೆನ್ನುತಿರುಗಿಸಿ ಬ್ರೆಡ್ ಚೂರನ್ನು ಮೆಲ್ಲುತ್ತ ವರ್ತಮಾನ ಪತ್ರವನ್ನೋದುತ್ತಿದ್ದನು. ವರ್ತಮಾನ ಪತ್ರವು ವೈದ್ಯಕೀಯ ಉಪ ಕರಣಗಳ ರಾಶಿಯ ಮೇಲೆ ಹರಡಿಕೊಂಡಿತ್ತು. ಬಾಗಿಲು ಇಕ್ಕುವ ಶಬ್ದ ಕೇಳಿ ಡಾಕ್ಟರನು ತಿರುಗಿದನು. ಅವನ ಬಕ್ಕ ತಲೆಯು ಬಹಳ ಚಿಕ್ಕದಿದ್ದು ಅದರ ಮೇಲೆ ಬಿಳೀ ಕೂದಲುಗಳ ಗುಂಪು ಎದ್ದಿದ್ದುವು. ರುಬಷೊವಗೆ ಅವನನ್ನು ಕಂಡೊಡನೆ ಉಷ್ಟ್ರಪಕ್ಷಿಯು ನೆನಪಾಯಿತು.

ಮುದಿಯನು 'ಇವನಿಗೆ ಹಲ್ಲುನೋವಂತೆ' ಎಂದನು.

'ಹಲ್ಲುನೋವೇ, ಸರಿ, ತಡಮಾಡಬೇಡ. ಬಾಯಿ ತೆರೆದು ತೋರಿಸು' ಎಂದು ಡಾಕ್ಟರ ಹೇಳಿದನು.

ರುಬಷೊವ ಕನ್ನಡಕದ ಮೂಲಕ ಡಾಕ್ಟರನನ್ನು ನೋಡಿ ಸಾವಕಾಶ ವಾಗಿ 'ನಾನು ರಾಜಕೀಯ ಕೈದಿಯಾಗಿರುವುದರಿಂದ ನೀವು ನಿಮ್ಮ ವರ್ತ ನೆಯನ್ನು ಸರಿಯಾಗಿಟ್ಟುಕೊಳ್ಳಬೇಕೆಂದು ನಿಮಗೆ ಮೊದಲಾಗಿ ನಾನು ತಿಳಿಸಬೇಕಾಗಿದೆ' ಎಂದನು.

ಡಾಕ್ಟರ ಕಾವಲುಗಾರನ ಕಡೆ ನೋಡಿ,

'ಈ ಹಕ್ಕಿಯ ಹೆಸರೇನು?' ಎಂದು ಕೇಳಿದನು.

ಕಾವಲುಗಾರ ರುಬಷೊವನ ಹೆಸರನ್ನು ಹೇಳಲಾಗಿ ಒಂದು ಕ್ಷಣ ಕಾಲ ಡಾಕ್ಟರನ ದೃಷ್ಟಿ ರುಬಷೊವನ ಮೇಲೆ ನೆಟ್ಟಿತು.

'ನಿನ್ನ ಗಲ್ಲ ಬಾತು ಹೋಗಿದೆ. ಬಾಯಿ ತೆರೆ' ಎಂದಾಗ ಹಲ್ಲು ನೋಯುತ್ತಿರಲಿಲ್ಲವಾದುದರಿಂದ ರುಬಷೊವ ಬಾಯಿಯನ್ನು ತೆರೆದನು. 'ನಿನ್ನ ಮೇಲಿನ ಸಾಲಿನ ಎಡಗಡೆಯಲ್ಲಿ ಹಲ್ಲುಗಳೇ ಉಳಿದಿಲ್ಲ' ಎಂದು ಡಾಕ್ಟರ ಬೆರಳಿಂದ ಬಾಯಿಯನ್ನು ಪರೀಕ್ಷಿಸಿ ಹೇಳಿದನು. ರುಬಷೊವ ವಿವರ್ಣನಾಗಿ ಗೋಡೆಯ ಮೇಲೆ ಒರಗಬೇಕಾಯಿತು. ಇಗೋ, ಸಿಕ್ಕಿತು, ಬಲಗಡೆಯ ದೊಡ್ಡ ಹಲ್ಲಿನ ಬೇರು ಕಿತ್ತು ಹೋದರೂ ಅದಿನ್ನೂ ಒಸಡಿ

ನಲ್ಲಿ ಸಿಕ್ಕಿ ಕೊಂಡಿದೆ' ಎಂದು ಡಾಕ್ಟರ ನುಡಿದನು. ರುಬಷೊವ ಹಲವು ಬಾರಿ ಆಳವಾದ ನಿಟ್ಟುಸಿರು ಬಿಟ್ಟನು. ನೋವು ಹಲ್ಲಿಂದ ಕಣ್ಣಿಗೆ ಹೋಗಿ ಅಲ್ಲಿಂದ ಹಿಂದಲೆಯಲ್ಲಿ ಸಿಡಿಯುತ್ತಿತ್ತು. ರಕ್ತವು ಹಾರುವ ಪ್ರತಿಯೊಂದು ಸಂಕೋಚನ–ವ್ಯಾಕೋಚನವನ್ನೂ ರುಬಷೊವ ಅನುಭವಿಸುತ್ತಿರುವಂತೆ ತೋರಿತು. ಡಾಕ್ಟರ ಮೇಜಿನ ಮೇಲೆ ಕೂತು ಮರಳಿ ವರ್ತಮಾನ ಪತ್ರವನ್ನು ಹಿಡಿದು 'ನೀನು ಹೇಳಿದರೆ ಆ ಬೇರನ್ನು ನಾನು ತೆಗೆದೇನು, ಆದರೆ ನಮ್ಮ ಹತ್ತಿರ ಎನೆಸ್ತೆಟಿಕ್ಸ್ ಇಲ್ಲ. ಒಪರೇಷನಿಗೆ ಅರ್ಧ ತಾಸಿನಿಂದ ಒಂದು ತಾಸು ಹಿಡಿಯಬಹುದು' ಎಂದನು.

ರುಬಷೊವಗೆ ಡಾಕ್ಟರನ ಸ್ವರವು ಮಂಜಿನ ಹೊಗೆಯ ನಡುವಣಿಂದ ಬರುವಂತೆ ತೋರಿತು ಗೋಡೆಗೆ ಸರಿಯಾಗಿ ಒರಗಿ ಅವನು ಉದ್ದವಾಗಿ ಉಸಿರೆಳೆದು 'ಉಪಕಾರ, ಈಗ ಬೇಡ' ಎಂದನು. ಅವನಿಗೆ ಸೀಳ್ವಾಯಿಯವನಿಗೆ ಕೊಟ್ಟ ಉಗಿಸ್ನಾನದ ನೆನಪಾಯಿತು. ಹೀಗೇ ಆದರೆ ನಿಸ್ತಾರವಿಲ್ಲವೆಂದು ಯೋಚಿಸಿದನು.

ಕೋಣೆಯಲ್ಲಿ ಮಂಚದ ಮೇಲೆ ಕಾಲು ಚಾಚುತ್ತಲೇ ರುಬಷೊವಗೆ ನಿದ್ದೆ ಬಂದು ಬಿಟ್ಟಿತು.

ಮಧ್ಯಾಹ್ನ ಗಂಜಿಯ ಪಟ್ಟಿಯಲ್ಲಿ ಅವನನ್ನೂ ಸೇರಿಸಿಕೊಂಡರು. ಆ ಮೇಲೆ ಪ್ರತಿದಿನವೂ ಅವನ ಪಾಲಿನ ಊಟ ಅವನಿಗೆ ಕ್ರಮವಾಗಿ ಸಿಗುತಿತ್ತು. ಹಲ್ಲು ನೋವು ತಡೆದುಕೊಳ್ಳುವಂತಿತ್ತು; ಬೇರಿನ ಕುರ ತನ್ನಷ್ಟಕ್ಕೆ ಒಡೆದಿರಬೇಕೆಂದು ರುಬಷೊವ ಭಾವಿಸಿದನು.

ಮೂರು ದಿನಗಳ ಮೇಲೆ ಅವನನ್ನು ಪ್ರಥಮಬಾರಿ ವಿಚಾರಣೆಗೆ ಒಯ್ಯಲಾಯಿತು.

## ೧೪

ಒಯ್ಯುವವರು ಬಂದಾಗ ಹನ್ನೊಂದು ಗಂಟೆಯಾಗಿರಬಹುದು. ಕಾವಲುಗಾರನ ಗಂಭೀರ ಮುಖ ಮುದ್ರೆಯಿಂದಲೇ ರುಬಷೊವಗೆ ತಾನು ಹೋಗುವುದೆಲ್ಲಿಗೆ ಎಂಬುದು ತಿಳಿಯಿತು. ಅಪಾಯದ ಪ್ರಸಂಗ

ಗಳಲ್ಲಿ, ಅನಿರೀಕ್ಷಿತವಾದ ವರದಾನದಂತೆ ಅವನ ಮನಸ್ಸು ಗಂಭೀರ ವಾಗಿಯೂ, ಅವಿಚಲವಾಗಿಯೂ, ಪ್ರಶಾಂತವಾಗಿಯೂ ಇರುತಿತ್ತು. ಅದೇ ಶಾಂತಚಿತ್ತದಿಂದ ಅವನು ಇಂದು ಕಾವಲುಗಾರನ ಬೆನ್ನ ಹಿಂದೆ ನಡೆದನು.

ಮೂರು ದಿನಗಳ ಹಿಂದೆ ಡಾಕ್ಟರರಲ್ಲಿಗೆ ಹೋಗುವ ದಾರಿಯಲ್ಲಿ ಅವರು ತೆರಳಿದರು. ಕಾಂಕ್ರಿಟ ಬಾಗಿಲು ತೆರೆದು ಕ್ಷಣದಲ್ಲಿ ಇಕ್ಕಿಕೊಂಡಿತು. ರುಬಷೊವಗೆ ತಾನು ಈ ಸೆರೆಮನೆಗೆ ಚಿರಪರಿಚಿತ ನೆಂಬಂತೆ ಭಾಸವಾಯಿತು. ಅವನು ಈ ಹಿಂದೆ ನೋಡಿದ ಸೆರೆಮನೆಗಳ ಹಳಸಿದ ವಾತಾವರಣಗಳೆಲ್ಲ ಇಲ್ಲಿ ಏಕೀಭವಿಸಿದಂತೆ ಅವನಿಗೆ ತೋರಿತು.

ಕ್ಷೌರದಂಗಡಿಯೂ, ಡಾಕ್ಟರರ ಕೊಠಡಿಯೂ ಹಾದು ಹೋದುವು. ಡಾಕ್ಟರರ ಕೊಠಡಿಯ ಮುಂದುಗಡೆ ಮೂವರು ಕೈದಿಗಳು ಕಾದು ನಿಂತಿದ್ದರು.

ಡಾಕ್ಟರರ ಬಾಗಿಲಿಂದ ಆಚೆಗಿನ ಪ್ರದೇಶವು ರುಬಷೊವಗೆ ಹೊಸ ದಾಗಿತ್ತು. ತಿರುಗುವ ಮೆಟ್ಟಲುಗಳಲ್ಲಿ ಕೆಳಗೆ ಇಳಿಯುತ್ತಿರುವಾಗ ರುಬಷೊವ ಕೆಳಗಡೆ ಏನಿರಬಹುದು? ಉಗ್ರಾಣವೋ, ದಂಡನೆಯ ಅರೆಗಳೋ? ಎಂದು ಯೋಚಿಸಿದನು.ಸೆರೆಮನೆಯ ತಜ್ಞನು ಲೆಕ್ಕಹಾಕು ವಂತೆ ರುಬಷೊವ ನಿರೀಹವಾಗಿ ಊಹಿಸಿದನು. ಆದರೆ ಆ ತಿರುಗುವ ಮೆಟ್ಟಲುಗಳ ಏಣಿಯ ನೋಟವೇ ಅವನಿಗೆ ಹಿಡಿಸಲಿಲ್ಲ.

ಅಲ್ಲಿಂದ ಅವರು ಕಿಟಿಕಿಯಿಲ್ಲದ, ಕತ್ತಲು ತುಂಬಿದ ಒಂದು ಅಂಗಳಕ್ಕೆ ಬಂದರು. ಅಂಗಳದ ಆಚೆ ಕಡೆಯ ನಡವೆಗಳು ಹೆಚ್ಚು ಪ್ರಕಾಶಮಾನವಾಗಿದ್ದುವು. ಅದರಲ್ಲಿ ಅಧಿಕಾರಿಗಳು ಅತ್ತಿತ್ತ ಅವಸರ ದಿಂದ ಹೋಗುತ್ತಿದ್ದರು. ಒಂದು ಕೋಣೆಯಲ್ಲಿ ರೇಡಿಯೋ ಹಾಡ್ತ ತಿತ್ತು. ಇನ್ನೊಂದರಿಂದ ಟೈಪರೈಟರಿನ ಸದ್ದು ಕೇಳಿಸುತ್ತಿತ್ತು. ತಾವು ಆಡಳಿತೆಯ ವಿಭಾಗವನ್ನು ತಲಪಿದೆವೆಂದು ರುಬಷೊವಗೆ ತಿಳಿಯಿತು.

ನಡವೆಯ ತುದಿಯಲ್ಲಿದ್ದ ಬಾಗಿಲನ್ನು ಕಾವಲುಗಾರ ತಟ್ಟಿದನು. ಒಳಗಿಂದ ಟೆಲಿಫೋನಿನ ಸದ್ದು ಕೇಳಬರುತ್ತಿತ್ತು. ಮೃದುವಾದ ಸ್ವರವೊಂದು 'ಒಂದು ಮಿನಿಟು' ಎಂದು ಹೇಳಿ ತಾಳ್ಮೆಯಿಂದ 'ಸರಿ',

'ಸರಿ ಸರಿ' ಎನ್ನುತ್ತಿತ್ತು: ಆ ಸ್ವರದ ಪರಿಚಯವು ರುಬಷೊವಗೆ ಹಿಂದೆ ಎಲ್ಲೋ ಆಗಿರುವಂತೆ ಭಾಸವಾಯಿತು, ಎಲ್ಲಿಂದು ತಿಳಿಯದು. ಗಂಡಸುತನದ ಈ ಗಡಸು ಸ್ವರವನ್ನು ತಾನು ಹಿಂದೆಲ್ಲೋ ಕೇಳಿದ್ದು ಖಂಡಿತವೆಂದುಕೊಂಡನು ರುಬಷೊವ. 'ಒಳಗೆ ಬನ್ನಿ' ಎಂದು ಆ ಸ್ವರದ ಆಜ್ಞೆ ಬಂದ ಕೂಡಲೇ ಕಾವಲುಗಾರನು ರುಬಷೊವನನ್ನು ಕೋಣೆಯೊಳಕ್ಕೆ ಕಳಿಸಿ ಕದ ಚಾಚಿದನು.

ರುಬಷೊವಗೆ ಮೊದಲು ಕಂಡದ್ದು ಒಂದು ಡೆಸ್ಕ್. ಆ ಮೇಲೆ ಅದರ ಹಿಂದೆ ಕೂತ ತನ್ನ ಹಳೆಯ ಕಾಲೇಜ ಸ್ನೇಹಿತ ಮತ್ತು ಮಾಜಿ ದಳಾಧಿಕಾರಿ ಐವನೊವ. ಟೆಲಿಫೋನನ್ನು ಕೆಳಗಿಟ್ಟು ಮುಗುಳ್ನಗೆಯಿಂದ ರುಬಷೊವನನ್ನು ನೋಡುತ್ತ ಐವನೊವ 'ಸರಿ, ಮತ್ತೆ ಭೆಟ್ಟಿಯಾದೆವು' ಎಂದನು.

ರುಬಷೊವ ಇನ್ನೂ ಬಾಗಿಲ ಬಳಿಯೇ ನಿಂತಿದ್ದನು. ಶುಷ್ಕವಾಗಿ 'ಏನಾಶ್ಚರ್ಯ, ಸಂತೋಷ' ಎಂದನು.

'ಕೂತಿರು' ಎಂದು ಐವನೊವ ಸವಿನಯವಾಗಿ ಹೇಳಿ ಎದ್ದು ನಿಂತನು. ರುಬಷೊವಗಿಂತ ಸ್ವಲ್ಪ ಉದ್ದವಿರಬಹುದು ಆತ. ಡೆಸ್ಕಿನ ಆಚೆಗೆ ಐವನೊವ, ಈಚೆಗೆ ರುಬಷೊವ ಕೂತುಕೊಂಡರು. ಐವನೊವ ಮುಗುಳ್ನಗುತ್ತಲೇ ಇದ್ದನು. ಸ್ವಲ್ಪ ಹೊತ್ತು ಇಬ್ಬರೂ ಕುತೂಹಲದಿಂದ ಒಬ್ಬರನ್ನೊಬ್ಬರು ನೋಡಿಕೊಂಡರು–ಐವನೊವನ ಮುಖದಲ್ಲಿ ನಗೆ ಮಿನುಗುತಿದ್ದರೆ, ರುಬಷೊವನ ಮುಖದಲ್ಲಿ ನಿರೀಕ್ಷೆ, ಜಾಗರೂಕತೆ ಒಡೆದು ತೋರುತಿದ್ದುವು. ಡೆಸ್ಕಿನ ಕೆಳಗಡೆಯಲ್ಲಿದ್ದ ಐವನೊವನ ಕಾಲುಗಳ ಮೇಲೆ ರುಬಷೊವನ ದೃಷ್ಟಿ ಬಿದ್ದಿತು.

'ಅದೇನೂ ತೊಂದರೆ ಇಲ್ಲ. ತುಕ್ಕುಹಿಡಿಯದ ಕ್ರೋಮಿಯಮ್ ಪ್ಲೇಟಿಂಗ್ ಹಾಕಿದೆ. ತಮ್ಮಷ್ಟಕ್ಕೆ ತಿರುಗುವ ಕೀಲುಗಳಿವೆ. ಕಾಲು ಕೃತಕವಾದರೂ ಈಜು, ಕುದುರೆ ಸವಾರಿ, ಮೋಟಾರ, ಡಾನ್ಸ್, ಯಾವುದಕ್ಕೂ ತೊಂದರೆ ಇಲ್ಲ. ಸಿಗರೇಟ್ ತೆಕೋ.' ಎಂದು ಹೇಳಿ ಐವನೊವ ಮರದ ಕರಡಿಗೆಯನ್ನು ರುಬಷೊವಗೆ ಕೊಡಲು ಮುಂದಾದನು.

ತೆರೆದ ಕೇಸಿನಲ್ಲಿದ್ದ ಸಿಗರೇಟುಗಳನ್ನು ನೋಡುತ್ತಿದ್ದಂತೆ ರುಬಷೊವಗೆ ಐವನೊವನ ಕಾಲನ್ನು ಕತ್ತರಿಸಿದ ಮಿಲಿಟರಿ ಆಸ್ಪತ್ರೆಯು ನೆನಪಾಯಿತು. ತನಗೆ ವಿಷ ತಂದುಕೊಡಬೇಕೆಂದು ಹೇಳಿ ಒಂದು ಇಡಿ ಅಪರಾಹ್ನ ಪ್ರತಿಯೊಬ್ಬ ಮನುಷ್ಯನಿಗೂ ಆತ್ಮಹತ್ಯೆ ಮಾಡಿಕೊಳ್ಳುವ ಹಕ್ಕಿದೆ ಎಂಬುದರ ಕುರಿತು ಐವನೊವ ಆಸ್ಪತ್ರೆಯಲ್ಲಿ ರುಬಷೊವನ ಹತ್ತಿರ ಜಗಳವಾಡಿದ್ದನು. ವಿಚಾರಮಾಡುತ್ತೇನೆ ಎಂದು ಹೇಳಿದ ರುಬಷೊವಗೆ ಆ ರಾತ್ರಿಯೇ ಬೇರೊಂದು ಊರಿಗೆ ವರ್ಗಾವಣೆ ಮಾಡಿಬಿಟ್ಟರು. ಆದುದರಿಂದ ಆ ಮೇಲೆ ಬಹಳಕಾಲ ಐವನೊವನ ಭೆಟ್ಟಿಯೇ ಆಗಿರಲಿಲ್ಲ. ಮರದ ಕೇಸಿನ ಸಿಗರೇಟುಗಳು ಉತ್ತಮ ಅಮೇರಿಕನ್ ಹೊಗೆಸೊಪ್ಪಿನಿಂದ ತಯಾರಿಸಿದುವೆಂದು ರುಬಷೊವ ನೋಟದಿಂದ ಊಹಿಸಿದನು.

ಇದಿನ್ನೂ ಖಾಸಗಿ ಸ್ನೇಹಿತಿಕೆಯೋ? ಅಥವಾ ವಿರೋಧಭಾವ ಆರಂಭವಾಯಿತೇ? ವಿರೋಧವು ಆರಂಭವಾಯಿತೆಂದರೆ. 'ನನಗೆ ಸಿಗರೇಟ ಬೇಡ. ಶಿಷ್ಟಾಚಾರ ನಿನಗೆ ಗೊತ್ತಿಲ್ಲವೆ?' ಎಂದು ರುಬಷೊವ ಕೇಳಿದನು.

'ಮಣ್ಣಾಗಟ್ಟಿ' ಎಂದು ಐವನೊವ ಮರು ನುಡಿದನು.

'ಮಣ್ಣಾಗಟ್ಟಿಯಾದರೆ ಮಣ್ಣಾಗಟ್ಟಿ' ಎಂದು ಹೇಳಿ ರುಬಷೊವ ಸಿಗರೇಟು ಹಚ್ಚಿದನು. ತನ್ನ ಆನಂದವನ್ನು ತೋರ್ಪಡಿಸಬಾರದೆಂದು ಹೊಗೆಯನ್ನು ಉದ್ದವಾಗಿ ಎಳೆಯುತ್ತ 'ನಿನ್ನ ಹೆಗಲಿನ ವಾತ ಹೇಗಿದೆ?' ಎಂದು ಪ್ರಶ್ನಿಸಿದನು.

'ಸರಿಯಾಗಿದೆ, ತೊಂದರೆ ಇಲ್ಲ. ನಿನ್ನ ಕೈಯ ಸುಟ್ಟ ಕಲೆ ಹೇಗಿದೆ?' ಎಂದು ಐವನೊವ ಮರುಸವಾಲು ಕೇಳಿ ರುಬಷೊವನ ಎಡಗೈಯ ಕಡೆ ತೋರಿಸಿದನು. ಹಿಂಗೈಯ ನೀಲ ರಕ್ತನಾಳಗಳ ನಡುವೆ ಮೂರು ದಿನಗಳ ಹಿಂದೆ ಸಿಗರೇಟ ತುಂಡನ್ನು ತಿಕ್ಕಿದ ಸ್ಥಳದಲ್ಲಿ ತಾಮ್ರದ ನಾಣ್ಯದಷ್ಟು ದೊಡ್ಡ ಬೊಕ್ಕೆ ಎದ್ದಿತ್ತು. ಒಂದು ಕ್ಷಣ ಇಬ್ಬರೂ ಆ ಬೊಕ್ಕೆಯನ್ನು ಪರೀಕ್ಷಿಸಿದರು. ಇವನಿಗೆ ಹೇಗೆ ಗೊತ್ತಾಗಬೇಕು ಈ ವಿಚಾರ? ಸರಿ, ನನ್ನನ್ನು ನೋಡಿಕೊಳ್ಳಲು ಗುಪ್ತಚಾರರನ್ನಿಟ್ಟಿದ್ದಾನೋ ಎಂದು ಕೊಂಡನು ರುಬಷೊವ ಅವನಿಗೆ ಸಿಟ್ಟಿಗಿಂತ ಹೆಚ್ಚಾಗಿ ನಾಚಿಕೆ

ಯಾಯಿತು. ಸಿಗರೇಟನ್ನು ಆಳವಾಗಿ ಒಮ್ಮೆ ಎಳೆದು ಅದನ್ನು ಬಿಸುಟು 'ನನ್ನ ಮಟ್ಟಿಗೆ ಹೇಳುವುದಾದರೆ ಖಾಸಗಿ ವಿಚಾರದ ಭಾಗವು ಮುಗಿದು ಹೋಯಿತು.'

ಹೊಗೆಯ ಚಕ್ರಗಳನ್ನು ಬಿಡುತ್ತ, ರುಬಷೊವನನ್ನು ಕರುಣೆಯ ದೃಷ್ಟಿಯಿಂದ ನೋಡುತ್ತ, ತುಸು ವ್ಯಂಗ್ಯವಾಗಿ ಐವನೊವ 'ಹಾಗೆ ಮೈಮೇಲೆ ಎರಗಬೇಡ' ಎಂದನು.

'ಸ್ವಲ್ಪ ಆಲೋಚನೆ ಮಾಡು. ನಿಮ್ಮನ್ನು ನಾನು ಸೆರೆಹಿಡಿದದ್ದೋ ನನ್ನನ್ನು ನೀವು ಸೆರೆಹಿಡಿದದ್ದೋ?' ಎಂದು ರುಬಷೊವ ಪ್ರಶ್ನಿಸಿದನು.

'ನಿನ್ನನ್ನು ನಾವು ಹಿಡಿದದ್ದು' ಎಂದು ಹೇಳಿ ಐವನೊವ ಸಿಗರೇಟನ್ನು ನಂದಿಸಿ ಇನ್ನೊಂದನ್ನು ಹೊತ್ತಿಸಿ ರುಬಷೊವಗೂ ಕೊಡಹೋದನು. ರುಬಷೊವ ಚಲಿಸಲಿಲ್ಲ. 'ಇಷ್ಟ ಬಂದ ಹಾಗೆ ಮಾಡುವಿಯಂತೆ' ಎಂದು ಹೇಳಿ 'ನಿನಗೆ ವಿಷದ ಕಥೆ ನೆನಪಿದೆಯೆ?' ಎಂದು ಐವನೊವ ಕೇಳಿದನು. ರುಬಷೊವನ ಕಡೆಗೆ ಬಗ್ಗಿ ಹೊಗೆಯ ಸುರುಳಿಯನ್ನು ಅವನ ಮುಖಕ್ಕೆ ಊದಿದನು.

'ನನಗೆ ನಿನ್ನನ್ನು ಕೊಲ್ಲಬೇಕೆಂಬ ಇಚ್ಛೆ ಇಲ್ಲ' ಎಂದು ಅವನು ಸಾವಕಾಶವಾಗಿ ನುಡಿದು ಕುರ್ಚಿಗೆ ಒರಗಿದನು. 'ಆದರೆ ನಿನ್ನಿಷ್ಟ' ಎಂದು ಮತ್ತೆ ಮುಗುಳ್ನಕ್ಕನು.

'ಬಹಳ ಕರುಣಾವಂತನಯ್ಯಾ ನೀನು. ಅದಿರಲಿ ನನ್ನನ್ನು ಕೊಲ್ಲುವುದರಲ್ಲಿ ನಿಮ್ಮ ಉದ್ದೇಶವಾದರೂ ಏನು?' ಎಂದು ರುಬಷೊವ ಕೇಳಿದನು.

ಕೆಲವು ಕ್ಷಣಗಳು ಕ್ರಮಿಸಿದುವು. ಬ್ಲಾಟಿಂಗ್ ಕಾಗದದ ಮೇಲೆ ಐವನೊವ ಪೆನ್ಸಿಲಿಂದ ಏನೇನೋ ಆಕೃತಿಗಳನ್ನು ಗೀಚಿದನು, ಸಿಗರೇಟ ಸೇದಿದನು. ಸರಿಯಾದ ಪದಗಳನ್ನು ಆತ ಮನಸ್ಸಿನಲ್ಲಿ ಅರಸಿಕೊಳ್ಳುವಂತೆ ತೋರಿತು.

'ರುಬಷೊವ, ಇಲ್ಲಿ ಕೇಳು. ನಿನಗೆ ನಾನೊಂದು ವಿಷಯವನ್ನು ಖುದ್ದಿಷ್ಟವಾಗಿ ಸೂಚಿಸಬೇಕಾಗಿದೆ. ನೀನು ಈಗ ಪದೇ ಪದೇ 'ನೀವು'

ಎಂದರೆ ರಾಷ್ಟ್ರ ಮತ್ತು ಪಾರ್ಟಿ ಎಂಬರ್ಥದಲ್ಲಿಯೂ, 'ನಾನು' ಎಂದರೆ 'ನೀವು' ಎಂಬುದಕ್ಕೆ ವಿರುದ್ಧವಾಗಿ ನಿಕೊಲಸ ಸಲ್ರನೊವಿಚ್ ರುಬ ಷೊವ ಎಂಬರ್ಥದಲ್ಲಿಯೂ ಸಂಬೋಧನೆ ಮಾಡಿರುವುದನ್ನು ನಾನು ಕಿವಿಯಾರೆ ಕೇಳಿದೆ. ಸಾರ್ವಜನಿಕರ ಪ್ರಯೋಜನಾರ್ಥವಾಗಿ ವಿಚಾ ರಣೆ, ನ್ಯಾಯಸಮರ್ಥನೆ ಎಲ್ಲ ಬೇಕಾಗಬಹುದು. ಆದರೆ ನಮ್ಮ ನಮ್ಮೊಳಗೆ ನಾನು ಇಷ್ಟು ಹೇಳಿದ್ದೇ ಸಾಕೆಂದು ನನಗೆ ತೋರುತ್ತದೆ, ಎಂದು ಐವನೊವ ಹೇಳಿದ ಧಾಟಿಯನ್ನು ಕೇಳಿ ರುಬಷೊವ ಅವಾಕ್ಕಾ ದನು. ಅವನಿಗೆ ಯೋಚನೆ ಬಲವಾಯಿತು. ತನ್ನ ಮನಸ್ಸು ಪ್ರತಿಶ್ರುತಿ ಕೊಡುವ ಯಾವುದೋ ಒಂದು ಹೃತ್ತಂತಿಯನ್ನು ಐವನೊವ ಮಿಡಿದ ಹಾಗಿತ್ತು. ಕಳೆದ ನಲ್ವತ್ತು ವರ್ಷಗಳಿಂದ ತಾನು ನಂಬಿದ, ಹೋರಾಡಿದ ಮತ್ತು ಉಪದೇಶಮಾಡಿದ ವಿಚಾರಗಳೆಲ್ಲವೂ ದುರ್ದಮನೀಯವಾದ ಒಂದು ಮಹಾತರಂಗದಂತೆ ರುಬಷೊವನ ಮನ ಸ್ಸಿನ ಮೇಲೆ ಅಪ್ಪಳಿಸಿದುವು. ವ್ಯಕ್ತಿ ಎಂದರೆ ಒಂದು ಕ್ಷುದ್ರಕಣ, ಪಾರ್ಟಿಯೇ ಬ್ರಹ್ಮಾಂಡ. ಮರದಿಂದ ಉದುರಿದ ಗೆಲ್ಲು ಬಾಡ ತಕ್ಕದ್ದು ನ್ಯಾಯ........ರುಬಷೊವ ಕನ್ನಡಕವನ್ನು ಅಂಗಿಯ ತೋಳಿನಿಂದ ಒರಸಿ ದನು. ಐವನೊವ ಕುರ್ಚಿಗೊರಗಿ ಸಿಗರೇಟ ಸೇದುತ್ತಲೇ ಇದ್ದನು, ಈಗ ಅವನ ಮುಖದಲ್ಲಿ ನಗುವಿರಲಿಲ್ಲ. ಫಕ್ಕನೆ ರುಬಷೊವನ ಕಣ್ಣಿಗೆ ಗೋಡೆಯಲ್ಲಿ ಒಂದು ಚಚ್ಚಾಕದ ಕಲೆ ತೋರಿತ್ತು. ಹಳೇ ಪ್ರತಿನಿಧಿಗಳ ಫೋಟೋ ಇದ್ದ ಜಾಗವಿರಬೇಕು. ಐವನೊವ ರುಬಷೊವನ ದೃಷ್ಟಿ ಯನ್ನೇ ಹಿಂಬಾಲಿಸುತ್ತಿದ್ದನು.

ರುಬಷೊವ 'ನೀವಂದ ಮಾತಿನಲ್ಲಿ ಈಗಿನ ಕಾಲಕ್ಕೆ ಸರಿಯಾಗದ ಅಸಂಗತ ವಾದವುಂಟು. ನಾವು ಯಾವಾಗಲೂ ಸಾಧ್ಯವಾದಷ್ಟು ಮಟ್ಟಿಗೆ ಉತ್ತಮ ಪುರುಷ ಏಕ ವಚನವನ್ನು ಬಿಟ್ಟು ಬಹುವಚನದ 'ನಾವು' ಎಂಬುದನ್ನೇ ಬಳಸುತ್ತಿದ್ದವರಲ್ಲವೇ ಎಂದು ನೀನು ಹೇಳಿದ ಮಾತು ನಿಜ. ಆದರೆ ಆ ರೀತಿ ಮಾತನಾಡುವ ಅಭ್ಯಾಸ ನನಗೆ ತಪ್ಪಿ ಹೋಗಿದೆ, ನೀನಿನ್ನೂ ಇಟ್ಟು ಕೊಂಡಿದ್ದೀಯಾ. ನೀವು ಇವತ್ತು ಯಾರ ಹೆಸರಿನಲ್ಲಿ ಮಾತಾಡುತ್ತಿದ್ದೀರೋ ಆ 'ನಾವು' ಎಂದರೆ ಯಾರು? ಅದರ ಪರಿಭಾಷೆ

ಯನ್ನು ಹೊಸದಾಗಿ ರಚಿಸುವ ಕಾಲ ಬಂದಿದೆ. ಇದು ಮುಖ್ಯ ವಿಷಯ.'
ಎಂದನು.

'ನನ್ನದೂ ಸಂಪೂರ್ಣವಾಗಿ ಅದೇ ಅಭಿಪ್ರಾಯ. ನಮ್ಮ ಚರ್ಚೆಯ ಸಾರಾಂಶವನ್ನು ಇಷ್ಟು ಬೇಗನೇ ನೀನು ಅರ್ಥಮಾಡಿಕೊಂಡಿ ಎಂದು ನನಗೆ ಸಂತೋಷವಾಯಿತು. 'ನಾವು'—ಅರ್ಥಾತ್ ಪಾರ್ಟಿ, ರಾಷ್ಟ್ರ ಮತ್ತು ಅದರ ಬೆನ್ನಲ್ಲಿರುವ ಜನತೆ—ಕ್ರಾಂತಿಯ ಹಿತವನ್ನು ಈಗ ಪ್ರತಿನಿಧಿಸುತ್ತಿಲ್ಲವೆಂಬ ಅಂಶವು ನಿನಗೆ ಖಚಿತವಾಗಿದೆ ಎಂದು ನೀನು ಒಪ್ಪಿಕೊಂಡ ಹಾಗಾಯಿತು.' ಎಂದು ಐವನೊವ ನುಡಿದನು.

ಅದಕ್ಕೆ ರುಬಷೊವ 'ಜನತೆಯನ್ನು ಲೆಕ್ಕದಿಂದ ಬಿಟ್ಟು ಬಿಡುವುದು ಒಳ್ಳೆಯದೆಂದು ನನಗೆ ತೋರುತ್ತದೆ' ಎಂದನು.

'ಜನತೆಯ ಕುರಿತು ಇಂಥ ತಿರಸ್ಕಾರ ನಿನ್ನಲ್ಲಿ ಎಂದಿನಿಂದ ಆರಂಭವಾಯಿತು? ಅದಕ್ಕೂ 'ನಾವು' 'ನಾನಾ'ದ ವ್ಯಾಕರಣ ಪರಿವರ್ತನೆಗೂ ಏನಾದರೂ ಸಂಬಂಧವಿರಬಹುದೆ?' ಎಂದು ಐವನೊವ ವಕ್ರೋಕ್ತಿಯನ್ನು ನುಡಿದನು.

ಆತ ಡೆಸ್ಕಿನ ಕಡೆಗೆ ಬಗ್ಗಿದುದರಿಂದಾಗಿ ಈಗ ಗೋಡೆಯಲ್ಲಿನ ಗುರುತು ಕಾಣುತ್ತಿದ್ದಿಲ್ಲ. ರುಬಷೊವಗೆ ಚಿತ್ರ ಶಾಲೆಯಲ್ಲಿ 'ಪೇತಾ' ಚಿತ್ರವನ್ನು ತನ್ನ ಕಣ್ಣಿಗೆ ಕಾಣಿಸದಂತೆ ಮುಚ್ಚಿದ ರಿಚರ್ಡನ ತಲೆಯ ನೆನಪಾಯಿತು. ಅದೇ ಕ್ಷಣ ಬಾಯಿಯ ಮೇಲೊಸಡಿನಿಂದ ಕಿವಿ ಮತ್ತು ಹಣೆಯವರೆಗೆ ನೋವಿನ ಸುಳಿಯೊಂದು ಹಾದುದರಿಂದ ಅವನು ಕಣ್ಣು ಮುಚ್ಚಿಕೊಳ್ಳುವ ಪ್ರಸಂಗ ಬಂದಿತು. 'ಸರಿ. ಋಣ ಸಲ್ಲಿಸುವುದು ಆರಂಭವಾದಂತೆ ತೋರುವುದು' ಎಂದು ಆತನಿಗೆ ಅನಿಸಿತು. ಅನೈಚ್ಛಿಕವಾಗಿ ಆತನು ಗಟ್ಟಿಯಾಗಿ ಮಾತನಾಡಲು ತೊಡಗಿದಂತಿತ್ತು. ಮನಸ್ಸಿನ ಯೋಚನೆಯು ತುಟಿಮೀರಿರಬೇಕೆಂದು ಕಾಣುತಿತ್ತು.

'ಅಂದರೆ ಏನರ್ಥ?' ಎಂದು ಕೇಳಿದ ಐವನೊವನ ಸ್ವರ ತನ್ನ ಕಿವಿಯ ಸಮೀಪ ವ್ಯಂಗ್ಯವಾಗಿಯೂ, ತುಸು ಆಶ್ಚರ್ಯಭಾವದಿಂದಲೂ ಕೇಳಿಸುವಂತೆ ರುಬಷೊವಗೆ ಅನಿಸಿತು.

ನೋವು ತಗ್ಗಿದಮೇಲೆ ಅವನ ಮನಸ್ಸಿನಲ್ಲಿ ಸ್ತಬ್ಧತೆಯು ವ್ಯಾಪಿಸಿದಂತೆ ಭಾಸವಾಯಿತು. 'ಜನತೆಯ ಸುದ್ದಿ ಎತ್ತಬೇಡಿ' ಎಂದು ಮತ್ತೊಮ್ಮೆ ಹೇಳಿ, 'ನಿಮಗೆ ಜನತೆಯನ್ನು ಅರ್ಥಮಾಡಿಕೊಳ್ಳುವ ಯೋಗ್ಯತೆ ಇಲ್ಲ; ನನಗೂ ಪ್ರಾಯಃ ಆ ಶಕ್ತಿ ಇಲ್ಲವೆಂದೇ ಇಟ್ಟುಕೊಳ್ಳಬಹುದು. 'ನಾವು' ಎಂಬ ದೊಡ್ಡತನವು ನಮ್ಮಲ್ಲಿ ಇನ್ನೂ ಉಳಿದಿದ್ದಾಗ ಅವರನ್ನು ನಾವು ಅರ್ಥಮಾಡಿಕೊಂಡಿದ್ದೆವು ಎನ್ನೋಣ, ಆ ಹಿಂದೆ ಯಾರಿಗೂ ಅರ್ಥವಾಗದ ರೀತಿಯಲ್ಲಿ ಅವರನ್ನು ಅರಿವು ಮಾಡಿಕೊಂಡೆವು ಎನ್ನೋಣ. ಅವರ ಅಂತರಾಳದ ತಳಕ್ಕಿಳಿದು, ಇತಿಹಾಸದ ಅಸ್ಪಷ್ಟ ಮೂಲವಸ್ತುವನ್ನು ಕೈಯಲ್ಲಿ ಹಿಡಿದು ಅದನ್ನು ತಿದ್ದುವ ಪ್ರಯತ್ನವನ್ನು ನಾವು ಒಂದು ಕಾಲದಲ್ಲಿ ನಡೆಸುತ್ತಿದ್ದೆವೆಂಬುದನ್ನು ಒಪ್ಪೋಣ........' ಎಂದು ನುಡಿದನು.

ಐವನೊವನ ಸಿಗರೇಟ ಪೆಟ್ಟಿಗೆಯಿಂದ ಅರಿವಿಲ್ಲದೆಯೆ ರುಬಷೊವ ಒಂದು ಸಿಗರೇಟಿಗೆ ಕೈ ಹಚ್ಚಿದನು. ಐವನೊವ ಮುಂದಕ್ಕೆ ನಸುಬಾಗಿ ಅದನ್ನು ಅವನಿಗೋಸ್ಕರ ಹಚ್ಚಿಕೊಟ್ಟನು.

'ಆ ಕಾಲದಲ್ಲಿ ನಮಗೆ ಜನತೆಯ ಪಕ್ಷವೆಂಬ ಹೆಸರಾದುದು ನಿಜ, ಇತಿಹಾಸದ ಕುರಿತು ಇತರರು ಕಂಡದ್ದೇನು, ತಿಳಿದದ್ದೆಷ್ಟು? ಕಿರುತೆರೆ, ಸಣ್ಣ ಸಣ್ಣ ಸುಳಿ, ಮೇಲೆ ಹಾಯುವ ತರಂಗಗಳ ವಿಷಯವಲ್ಲದೆ ಅವರಿಗೆ ಬೇರೇನು ಜ್ಞಾನವಿತ್ತು? ಮೇಲ್ಭಾಗದ ಪರಿವರ್ತನಶೀಲ ಸ್ವಭಾವದ ಕಾರಣವೂ ಅವರಿಗೆ ತಿಳಿದಿರಲಿಲ್ಲ. ಅಂಧಕಾರದಲ್ಲಿ ನಾವು ರೂಪವಿಲ್ಲದ ನಾಮವಿಲ್ಲದ, ಸರ್ವ ಕಾಲದಲ್ಲಿಯೂ ಇತಿಹಾಸದ ಹೂರಣವಾಗಿರುವ, ಆಳವಾದ ತಳಕ್ಕಿಳಿದು ಇತಿಹಾಸದ ಚಾಲಕ ಸೂತ್ರಗಳನ್ನು ಕಂಡುಹಿಡಿದೆವು. ಇತಿಹಾಸದ ಜಡತ್ವದ, ನಿಧಾನವಾಗಿ ಬದಲಾಗುವ ಅಣುರಚನೆಯ ಮತ್ತು ಆಕಸ್ಮಾತ್ ಸ್ಫೋಟನೆಯ ಸೂತ್ರಗಳನ್ನು ಶೋಧಿಸಿದೆವು. ಫ್ರಾನ್ಸಿನ ಕ್ರಾಂತಿಕಾರರು ನೀತಿಪರರಾಗಿದ್ದರೆ ನಾವು ಪರಿಣಾಮವಾದಿಗಳಾಗಿದ್ದೆವು. ಇತಿಹಾಸದ ಭೂಗರ್ಭದಲ್ಲಿರುವ ಪ್ರಾಕ್ತನ ಕೆಸರನ್ನಗೆದು ಅದರ ನಿಯಮಗಳನ್ನು ಗುರುತಿಸಿಕೊಂಡವರು ನಾವು. ಮಾನವ ಜನಾಂಗದ ವಿಷಯ ಈ ವರೆಗೆ ಮನುಷ್ಯರು ತಿಳಿದುಕೊಂಡುದಕ್ಕಿಂತ ಹೆಚ್ಚಿನಂಶ

ಗಳು ನಮಗೆ ತಿಳಿದಿರಲಾಗಿ ನಮ್ಮ ಕ್ರಾಂತಿಯು ಯಶಸ್ವಿಯಾಯಿತು. ಆದರೆ ಈಗ ನೀವು ಅದನ್ನು ಮತ್ತೆ ಮಣ್ಣುಗೂಡಿಸಿದಿರಿ........'

ಕಾಲುಗಳನ್ನು ನೀಟಾಗಿರಿಸಿ ಬ್ಲಾಟಿಂಗ್ ಪೇಪರಿನಲ್ಲಿ ಗೀಚುತ್ತ ಐವನೊವ ಆಲಿಸುತ್ತಿದ್ದನು.

'ಸರಿ, ಮುಂದುವರಿಸು. ನಿನ್ನ ಮಾತಿನ ಲಕ್ಷ್ಯ ಯಾವುದೆಂದು ತಿಳಿಯಲು ನಾನು ಉತ್ಸುಕನಾಗಿದ್ದೇನೆ' ಎಂದನು.

'ತಲೆತಿರುಗಿದಂತೆ ಮಾತ್ರವೇ ಅಲ್ಲ, ತಲೆಯು ಕೊರಳಿಂದ ಬೇರಾಗಿ ಹಾರುವಲ್ಲಿಯ ವರೆಗೆ ನಾನು ಉದ್ಬುದ್ಧ ಮಾತಾಡುತ್ತಿದ್ದೇನೆಂದು ನಿನಗೆ ಅನಿಸುವುದಲ್ಲವೆ?' ಎಂದು ಹೇಳಿ ರುಬಷೊವ ಗೋಡೆಯಲ್ಲಿ ಪ್ರತಿನಿಧಿಗಳ ಫೋಟೊಗ್ರಾಫ ಇದ್ದ ಮಾಸಲು ಜಾಗವನ್ನು ನೋಡಿದನು. ಈ ಸಲ ಐವನೊವ ರುಬಷೊವನ ದೃಷ್ಟಿಯನ್ನು ಹಿಂಬಾಲಿಸಲಿಲ್ಲ. 'ಅದರಲ್ಲೇ ನಂತೆ, ಹತ್ತರ ಕೂಡೆ ಹನ್ನೊಂದು. ವ್ಯಕ್ತಿಗಳು, ಅವರ ಜ್ಞಾನ, ವಿವೇಕ ಮತ್ತು ಆಸೆಗಳು---ಎಲ್ಲವನ್ನೂ ಮಣ್ಣುಗೂಡಿಸಿದವರು ನೀವು. 'ನಾವು' ಹತವಾದುದು ನಿಮ್ಮ ಕೈಯಿಂದ, ಅದನ್ನು ನಾಶ ಗೊಳಿಸಿದವರು ನೀವು. ಜನತೆಯು ನಿಮ್ಮ ಬೆಂಗಡೆ ಇದೆಯೆಂದು ನೀವು ವಾಸ್ತವವಾಗಿ ನಂಬಿದ್ದೀರಾ? ನಿಮ್ಮಷ್ಟೇ ಅಧಿಕೃತವಾಗಿ ಯುರೋಪಿನ ಬೇರೆ ದುರಾಕ್ರಮಿಗಳೂ ಜನತೆಯ ಬೆಂಬಲ ತಮಗೇ ಇದೆ ಎಂದು ನಟಿಸಬಹುದು........'

ಇನ್ನೊಂದು ಸಿಗರೇಟನ್ನು ತೆಗೆದು ರುಬಷೊವ ಅದನ್ನು ತಾನೇ ಹಚ್ಚಿಕೊಂಡನು. ಈ ಸಲ ಐವನೊವ ಅವನಿಗೆ ನೆರವಾಗಲು ತವಕ ಪಡಲಿಲ್ಲ.

'ನನ್ನ ಮಾತುಗಳು ಅನಾವಶ್ಯಕವಾಗಿ ಉದ್ದವಾಗಿದ್ದರೆ ನನ್ನನ್ನು ಕ್ಷಮಿಸು. ನಿಮಗೆ ಜನತೆಯ ಬೆಂಬಲವಿದೆ ಎಂದು ನೀವು ನಿಜ ವಾಗಿಯೂ ನಂಬುತ್ತೀರಾ? ಯುರೋಪಿನ ಇತರ ದೇಶಗಳಲ್ಲಿ ಹೇಗೋ ಹಾಗೆ ನಿಮ್ಮಲ್ಲಿಯೂ ನಿಮ್ಮನ್ನು ಮೂಕವಾಗಿಯೂ ನಿರುಪಾಯ ವಾಗಿಯೂ ಜನತೆಯು ತಡೆದುಕೊಂಡಿರುವುದಲ್ಲದೆ ಅದರ ಹೃದಯದಲ್ಲಿ ನಿಮ್ಮ ಮೇಲೆ ವಿಶ್ವಾಸವಿಲ್ಲ. ಜನತೆಯು ಮರಳಿ ಕಿವುಡಾಗಿದೆ.

ಮೂಕವಾಗಿದೆ. ಇತಿಹಾಸದ ಮಹಾಮೌನಿಯಾಗಿ ಹಡಗುಗಳ ಚಲನೆಗೆ ಉದಾಸೀನವಾಗಿರುವ ಸಾಗರವಾಗಿದೆ. ದಾರಿಯಲ್ಲಿ ಹಾಯುವ ದೀಪಗಳೆಲ್ಲ ಅದರ ಮೇಲೆ ಪ್ರತಿಫಲಿಸಿದರೂ ಒಳಗಡೆಯ ಗರ್ತದಲ್ಲಿ, ತಳದಲ್ಲಿ ಎಲ್ಲೆಲ್ಲಿಯೂ ಅಂಧಕಾರ, ಮೌನ. ಗರ್ತವನ್ನು ನಾವು ಕಲಕಿದ್ದು ಬಹುಕಾಲ ಹಿಂದೆ. ಆ ಕಥೆ ಈಗ ಮುಗಿದಿದೆ. ಬೇರೆಯೇ ಮಾತಿನಲ್ಲಿ ಹೇಳುವುದಾದರೆ--ರುಬಷೊವ ಕನ್ನಡಕವನ್ನು ಏರಿಸಿಕೊಳ್ಳುತ್ತ ಮುಂದುವರಿಸಿದನು—ಆ ಕಾಲದಲ್ಲಿ ನಾವು ಇತಿಹಾಸವನ್ನು ಸೃಷ್ಟಿಮಾಡಿದೆವು, ಈಗ ನೀವು ರಾಜಕೀಯವನ್ನು ಉತ್ಪಾದಿಸುತಿದ್ದೀರಿ. ಅಷ್ಟೇ ವ್ಯತ್ಯಾಸ.'

ಐವನೊವ ಕುರ್ಚಿಯ ಬೆನ್ನಿಗೊರಗಿ ಹೊಗೆಸುರುಳಿಗಳನ್ನು ಬಿಡುತ್ತಲೇ ಇದ್ದನು. 'ನನಗೇಕೋ ವ್ಯತ್ಯಾಸವು ಸ್ಪಷ್ಟವಾಗಿ ತಿಳಿಯದಾಗಿದೆ. ದಯವಿಟ್ಟು ಸ್ವಲ್ಪ ವಿವರಿಸಿ ಹೇಳುತ್ತೀಯಾ?' ಎಂದು ಆತ ಕೇಳಿದನು.

'ಅದರಲ್ಲೇನಂತೆ? ಬೀಜ ಗಣಿತವು ಸೋಮಾರಿಗಳಿಗೆ ಹೇಳಿಸಿದ ಶಾಸ್ತ್ರವೆಂದು ಒಬ್ಬ ಗಣಿತಜ್ಞ ಹೇಳಿದ್ದಾನೆ. Xನ ಅರ್ಥ ಗೊತ್ತಿಲ್ಲದಿದ್ದರೂ ಗೊತ್ತಿರುವ ಹಾಗೆ ಅದನ್ನುಪಯೋಗಿಸುವ ವಿದ್ಯೆಯೇ ಬೀಜ ಗಣಿತವೆನಿಸುವುದಂತೆ. ನಮ್ಮ ಚರ್ಚೆಗೆ ಈ ಮಾತನ್ನು ಅನ್ವಯಿಸುವುದಾದರೆ: X ಎಂದರೆ ಅನಾಮಧೇಯ ಜನತೆ ಎಂದು ಗ್ರಹಿಸೋಣ. Xನ ನಿಜವಾದ ಲಕ್ಷಣಗಳೇನೆಂಬುದರ ಕುರಿತು ಚಿಂತೆಯೇ ಇಲ್ಲದೆ ಅದನ್ನು ನಮ್ಮ ಕಾರ್ಯಕ್ಕೆ ಬಳಸುವುದೇ ರಾಜಕೀಯ. ಸಮೀಕರಣದಲ್ಲಿ Xನ ನಿಜವಾದ ಸ್ವರೂಪವನ್ನರಿತುಕೊಳ್ಳುವುದೇ ಇತಿಹಾಸದ ಸೃಷ್ಟಿ.'

ಇದನ್ನು ಕೇಳಿ ಐವನೊವ 'ಚೆನ್ನಾಗಿದೆ, ಆದರೂ ಸುಲಭವಾಗಿ ಸ್ಪಷ್ಟವಾಗಿಲ್ಲ. ಕೇವಲ ಕಲ್ಪನಾ ಲೋಕದಿಂದ ಪದಾರ್ಥಪ್ರಪಂಚಕ್ಕೆ ಇಳಿಯೋಣ. ಒಟ್ಟಿನಲ್ಲಿ ನಿಷ್ಕರ್ಷ: ನಾವು, ಅರ್ಥಾತ್ ಪಾರ್ಟಿ ಮತ್ತು ರಾಷ್ಟ್ರ, ಕ್ರಾಂತಿಯ ಹಿತಸಂಬಂಧಗಳನ್ನಾಗಲಿ, ಜನತೆಯ ಯೋಗಕ್ಷೇಮವನ್ನಾಗಲಿ, ಅಷ್ಟೇ ಏಕೆ ಬೇಕಾದರೆ ಮಾನವ ಕೋಟಿಯ ಪ್ರಗತಿಯನ್ನಾಗಲಿ ಪ್ರತಿನಿಧಿಸುವ ಕಾಲ ಸಂದು ಹೋಯಿತು ಎಂದು ನಿನ್ನ ಅಭಿಪ್ರಾಯತಾನೆ?' ಎಂದನು.

ರುಬಷೊವ ನಗುತ್ತ 'ಈಗ ನಿನಗರ್ಥವಾಯಿತು' ಎಂದನು. ಐವನೊವ ಪ್ರತಿಯಾಗಿ ನಗಲಿಲ್ಲ.

'ಈ ಅಭಿಪ್ರಾಯ ನಿನ್ನಲ್ಲಿ ಯಾವಾಗಿನಿಂದ ಬೆಳೆಯಿತೋ?'

'ಸಾವಕಾಶವಾಗಿ, ಕಳೆದ ಕೆಲ ವರ್ಷಗಳಿಂದ, ಎನ್ನಬಹುದು'

'ನಿಷ್ಕರ್ಷೆಯಾಗಿ ಇಂತಿಷ್ಟೇ ಎಂದು ಹೇಳಲು ಸಾಧ್ಯವಿಲ್ಲವೆ? ಒಂದು ವರ್ಷ? ಎರಡು? ಮೂರು?'

'ಇದು ಮಡ್ಡತನದ ಪ್ರಶ್ನೆ. ನೀನು ಪ್ರಾಪ್ತವಯಸ್ಕನಾದುದು ಯಾವ ವರ್ಷದಿಂದ? ಹದಿನೇಳರಿಂದಲೋ? ಹದಿನೆಂಟೂವರೆ ಯಿಂದಲೋ? ಹತ್ತೊಂಭತ್ತರಲ್ಲಿಯೋ ಎಂದರೆ?'

'ಮಡ್ಡತನವನ್ನು ನಟಿಸುತ್ತಿರುವವನು ನೀನು. ಒಬ್ಬನ ಆಧ್ಯಾತ್ಮಿಕ ಬೆಳವಣಿಗೆಯ ಪ್ರತಿಯೊಂದು ಮೆಟ್ಟಲೂ ನಿಷ್ಕೃಷ್ಟ ಅನುಭವಗಳ ಪರಿಣಾಮವಾಗಿರುತ್ತದೆ. ನಿನಗೆ ಹೇಳಲೇಬೇಕಾದರೆ ಕೇಳು, ನನಗೆ ವಯಸ್ಸು ಬಂದದ್ದು ಹದಿನೇಳರಲ್ಲಿ, ನನ್ನನ್ನು ಪ್ರಥಮತಃ ದೇಶ ಭ್ರಷ್ಟನಾಗಿ ಮಾಡಿದಾಗ.'

'ಆಗ ನೀನು ಒಳ್ಳೆ ಮರ್ಯಾದಸ್ಥನಾಗಿದ್ದಿ. ಈಗೇಕೆ ಆ ಭಾರ? ಮರೆತು ಬಿಡು.' ಎಂದು ರುಬಷೊವ ಹೇಳಿದನು.

ಐವನೊವ ತುಸು ಮುಂದೆ ಬಂದು 'ನಾನು ಇನ್ನೊಮ್ಮೆ ಪ್ರಶ್ನೆ ಕೇಳುತ್ತೇನೆ. ಸಂಘಟಿತ ವಿರೋಧಿಪಕ್ಷಕ್ಕೆ ನೀನು ಸೇರಿದ್ದು ಯಾವಾಗ. ಈಗೆಷ್ಟು ಸಮಯದ ಹಿಂದೆ?' ಎಂದು ಕೇಳಿದನು.

ಟೆಲಿಫೋನ್ ಬಾರಿಸಿತು. ಐವನೊವ ಅದನ್ನು ಕೈಯಲ್ಲಿ ಹಿಡಿದು ಕೊಂಡು 'ನನಗೆ ಬೇರೆ ಕೆಲಸವಿದೆ' ಎಂದು ಹೇಳಿ ರಿಸೀವರನ್ನು ಕೆಳಗಿರಿಸಿ ದನು. ಕುರ್ಚಿಯ ಬೆನ್ನಿಗೆ ಒರಗಿ ಕಾಲನ್ನು ಚಾಚಿ ರುಬಷೊವನ ಉತ್ತರಕ್ಕೆ ಕಾದುಕೊತನು.

'ನಾನು ಯಾವ ವಿರೋಧಿಪಕ್ಷಕ್ಕೂ ಸೇರಲಿಲ್ಲವೆಂದು ನನಗೆ ಗೊತ್ತಿರುವಷ್ಟೇ ನಿನಗೂ ಗೊತ್ತಿದೆ' ಎಂದನು ರುಬಷೊವ.

'ನಿನ್ನಿಷ್ಟ. ನಾನು ನೌಕರದಾರನ ಹಾಗೆ ನಿನ್ನ ಹತ್ತಿರ ಮಾತನಾಡಬೇಕೆಂಬುದು ನಿನ್ನಿಷ್ಟವಾದರೆ ನಾನೇನು ಮಾಡಲಿ?' ಎಂದು ಹೇಳಿ ಡ್ರಾಯರಿನಿಂದ ಫೈಲಿನ ಕಟ್ಟನ್ನು ತೆಗೆದನು.

ಫೈಲುಗಳನ್ನು ಎದುರಲ್ಲಿ ತೆಗೆದಿರಿಸಿ, ೧೯೩೩ರಿಂದ ಆರಂಭ ಮಾಡೋಣವೆ?" ಎಂದು ಕೇಳಿದನು. 'ಯಾವ ದೇಶದಲ್ಲಿ ಕ್ರಾಂತಿಯು ಸುಲಭದಲ್ಲಿ ಸಫಲವಾಗುವುದೆಂದು ಭಾವಿಸಲಾಗಿತ್ತೊ ಆ ದೇಶದಲ್ಲಿ ಸರ್ವಾಧಿಕಾರಿ ಸರಕಾರವು ಸ್ಥಾಪನೆಗೊಂಡ ವರ್ಷದಿಂದ ಆಲೋಚಿಸೋಣ. ಅಯೋಗ್ಯರನ್ನು ವಿಸರ್ಜಿಸಿ ಪಾರ್ಟಿಯ ಪುನಸ್ಸಂಘಟನೆಯನ್ನು ಮಾಡಲೆಂದು ನಿನ್ನನ್ನು ಬೇಕಾಯದೇಶೀರ ಎಂದರೂ ಸರಿಯೇ ಅಲ್ಲಿಗೆ ಕಳಿಸಲಾಯಿತು.'

ರುಬಷೊವ ಕುರ್ಚಿಗೆ ಒರಗಿ ತನ್ನ ಚರಿತ್ರೆಯನ್ನು ಐವನೊವನ ಬಾಯಿಯಿಂದ ಆಲಿಸುತ್ತಿದ್ದನು. ರಿಚರ್ಡನನ್ನೂ, ಆ ಸಂಜೆಯ ನಸುಕಿನಲ್ಲಿ ವಸ್ತು ಸಂಗ್ರಹಾಲಯದ ಹತ್ತಿರ ಟ್ಯಾಕ್ಸಿ ಹಿಡಿದ ಪ್ರಸಂಗವನ್ನೂ ಆತ ಜ್ಞಾಪಿಸಿಕೊಂಡನು.

'........ಮೂರು ತಿಂಗಳ ಮೇಲೆ ನಿನ್ನನ್ನು ಸೆರೆಹಿಡಿಯಲಾಯಿತು: ಎರಡು ವರ್ಷದ ಸಜೆ ಆಯಿತು. ನಡತೆ ಉತ್ಕೃಷ್ಟವಾದುದರಿಂದ ನಿನ್ನ ವಿರುದ್ಧ ಯಾವ ಆರೋಪವನ್ನೂ ಸಾಬೀತು ಮಾಡಲು ಆಗಲಿಲ್ಲ. ಬಿಡುಗಡೆಯಾಯಿತು, ತದನಂತರ ನೀನು ವಿಜಯದ ಹೂಮಾಲೆಯನ್ನು ಕೊರಳಲ್ಲಿ ಹಾಕಿಕೊಂಡು ಸ್ವದೇಶಕ್ಕೆ ಪುನರಾಗಮನ ಮಾಡಿದಿ........'

ಐವನೊವ ತುಸು ತಡೆದು ಚರಿತ್ರೆಯನ್ನು ಮುಂದುವರಿಸಿದನು; 'ಬಂದ ಮೇಲೆ ನಿನಗೆ ಭಾರೀ ಆದರ ಸತ್ಕಾರಗಳು ಜರಗಿದುವು. ನಿನಗೆ ಬಹಳ ಕೆಲಸವಿತ್ತೊ ಏನೊ, ನನಗೆ ನೀನು ಆಗ ಭೆಟ್ಟಿಯಾಗಲಿಲ್ಲ. ನಾನೇನೂ ತಪ್ಪು ತಿಳಿಯಲಿಲ್ಲ, ಎನ್ನು, ಎಲ್ಲಾ ಸ್ನೇಹಿತರನ್ನು ನೋಡುವುದೆಂದರೆ ಸಾಧ್ಯವೆ? ಆದರೆ ನಾನು ನಿನ್ನನ್ನು ಎರಡು ಬಾರಿ ಸಭೆಗಳಲ್ಲಿ ವೇದಿಕೆಯ ಮೇಲೆ ನೋಡಿದೆ. ನೀನಿನ್ನೂ ಕಂಕುಳಿನಲ್ಲಿ ಊರುಗೋಲಿಲ್ಲದೆ ನಡೆಯಲು ಅಶಕ್ತನಾಗಿದ್ದಿ. ನೋಡುವಾಗಲೂ ಬಹಳ ಸೊರಗಿದ ಹಾಗೆ ಕಾಣುತ್ತಿದ್ದಿ. ನ್ಯಾಯವಾಗಿ ನೀನು ಕೆಲವು ತಿಂಗಳು ಯಾವು

ದಾದರೂ ಸೆನಟೋರಿಯಮಿನಲ್ಲಿ ವಿಶ್ರಮಿಸಿ ಆ ಮೇಲೆ ಸರಕಾರದಲ್ಲಿ ಒಂದು ಸ್ಥಾನ ಹಿಡಿದು ತೆಪ್ಪಗೆ ಕೂತಿರಬೇಕಾಗಿತ್ತು—ಅದರಲ್ಲಿಯೂ ನಾಲ್ಕು ವರ್ಷ ವಿದೇಶಗಳಲ್ಲಿ ಕೆಲಸ ಮಾಡಿದ್ದುದರಿಂದ. ಆದರೆ ನೀನೇನು ಮಾಡಿದೆ? ಹದಿನೈದೇ ದಿವಸಗಳಲ್ಲಿ ಯಾವುದಾದರೊಂದು ಪರದೇಶದಲ್ಲಿ ದೌತ್ಯವನ್ನು ಕೊಡಿರೆಂದು ಬೇಡಿದೆ........'

ಒಮ್ಮೆಲೆ ಮೋರೆಯನ್ನು ಮುಂದಕ್ಕೆ ಚಾಚಿ ರುಬಷೊವನ ಮೋರೆಗೆ ಸಮೀಪದಲ್ಲಿ 'ಯಾತಕ್ಕಾಗಿ?—' ಎಂದು ಕೇಳುವಾಗ ಐವನೊವನ ಸ್ವರವು ಮೊದಲಬಾರಿಗೆ ತೀಕ್ಷ್ಣವಾಗಿತ್ತು. 'ನಿನಗಿಲ್ಲಿ ಹಿತವಾಗಿರಲಿಲ್ಲ, ಅಲ್ಲವೆ? ನೀನಿಲ್ಲದಾಗ ಇಲ್ಲಿ ನಡೆದ ಕೆಲವು ಬದಲಾವಣೆಗಳು ನಿನ್ನ ಮನಸ್ಸಿಗೆ ಬರಲಿಲ್ಲ, ಅಲ್ಲವೆ?'

ರುಬಷೊವ ಇದಕ್ಕೇನಾದರೂ ಪ್ರತಿನುಡಿಯುವನೋ ಎಂಬುದನ್ನು ನೋಡಿ, ಆತನು ಕನ್ನಡಕವನ್ನುಜ್ಜುತ್ತ ಮೌನವಾಗಿರುವುದನ್ನು ಕಂಡು ಐವನೊವ 'ವಿರೋಧಕರ ಒಂದು ಪೈರನ್ನು ಸಕಾಲದಲ್ಲಿ ನಿರ್ಮೂಲ ಮಾಡಿದ ಸಮಯ ಅದು. ನಿನಗೆ ನಷ್ಟವಾದ ಜನರಲ್ಲಿ ಹಲವರು ಸ್ನೇಹಿತರಿದ್ದರು. ವಿರೋಧಿಗಳ ಅವನತ ಸ್ಥಿತಿಯು ಯಾವ ನೀಚ ಆಳಕ್ಕಿಳಿದಿದೆಯೆಂಬುದು ದೇಶಕ್ಕೆ ತಿಳಿದೊಡನೆ ಯಾವ ರೀತಿ ಜನತೆಯ ಕ್ರೋಧ ಸರ್ವವ್ಯಾಪಿಯಾಗಿ ಧಗಧಗಿಸಿತೆಂಬುದನ್ನು ನೀನು ಕಣ್ಣಾರೆ ಕಂಡರೂ ಯಾವ ಮಾತನ್ನೂ ಆಡಲಿಲ್ಲ. ಊರುಗೋಲಿಲ್ಲದೆ ನಡೆಯಲಾಗದಿದ್ದರೂ ಹದಿನೈದೇ ದಿನಗಳಲ್ಲಿ ನೀನು ವಿದೇಶಕ್ಕೆ ತೆರಳಿದಿ....'

ರುಬಷೊವನ ಮೂಗಿಗೆ ಚಿಕ್ಕ ರೇವಿನ ಸಮುದ್ರದ ಹುಲ್ಲು ಮತ್ತು ಪೆಟ್ರೋಲ ಮಿಶ್ರಿತವಾದ ವಾಸನೆ ಹೊಡೆಯಿತು. ಕಿವಿ ಅಲುಗಿಸುವ ಜಟ್ಟಿ ಪಾವ್ಲ್, ಪೈಪಿನಿಂದ ಸಲಾಮು ಹೊಡೆಯುವ ಕುಂಟ ಲೋವಿ—ಇವರ ಚಿತ್ರ ಕಣ್ಣಿಗೆ ಕಟ್ಟಿತು. ಕುಂಟಲೋವಿ ಅಟ್ಟದ ಜಂತಿಗೆ ಹಗ್ಗ ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡಿದ್ದನು. ಆ ಹರಕಲು ಅಟ್ಟದ ಮುರುಕಲುಮನೆಯ ದಾರಿಯಲ್ಲಿ ಲಾರಿಗಳು ಹೋಗುವಾಗ ಗಡಗಡನೆ ನಡುಗುತ್ತಿತ್ತು. ಕುಂಟಲೋವಿಯ ಶವದ ಪತ್ತೆ ಯಾವ ದಿನ ಪತ್ರದಲ್ಲಿ

ಸ್ವಲ್ಪ ಚಲನೆಯಿದ್ದುದರಿಂದ ಕುಂಟಲೋನಿಯ ಶರೀರವು ಜೀವವಿರುವಂತೆ ತನ್ನ ಅಕ್ಷದಲ್ಲೇ ತಿರುಗಿತೆಂಬುವನ್ನು ನೋಡಿದವರು ರುಬಷೊವಗೆ ಹೇಳಿದ್ದರು........

'ನಿನ್ನ ಕೆಲಸವು ಯಶಸ್ವಿಯಾಗಿ ಮುಕ್ತಾಯವಾದ ಮೇಲೆ ನಿನ್ನನ್ನು ಬಿ. ದೇಶಕ್ಕೆ ಹೋಗುವ ವ್ಯಾಪಾರಿ ನಿಯೋಗದ ನಾಯಕನಾಗಿ ನೇಮಿಸಲಾಯಿತು. ಅದರಲ್ಲಿಯೂ ನಿನ್ನ ಕರ್ತವ್ಯ ನಿರ್ವಹಣೆ ಸಮರ್ಪಕವಾಗಿತ್ತು. ಬಿ. ಯೊಡನೆ ನಡೆದ ಹೊಸ ವ್ಯಾಪಾರಿ ಒಪ್ಪಂದವು ನಿಜವಾಗಿಯೂ ಯಶಸ್ವೀ ಒಪ್ಪಂದವೆನ್ನಬೇಕು. ನೋಟಕ್ಕೆ ನಿನ್ನ ವರ್ತನೆ ನಿಷ್ಕಳಂಕವಾಗಿಯೂ, ಬೇರೆಯವರಿಗೆ ಉದಾಹರಣೆಯ ರೂಪವಾಗಿಯೂ ಇರುತ್ತಿತ್ತು. ನಿನ್ನ ಈ ಹೊಸ ಹುದ್ದೆಯಲ್ಲಿ ಆರುತಿಂಗಳಾಗುವುದರೊಳಗೆ ನಿಮ್ಮ ಸಹಯೋಗಿಗಳ ಪೈಕಿ ಇಬ್ಬರನ್ನು—ಅವರಲ್ಲಿ ಒಬ್ಬಳು ನಿನ್ನ ಕಾರ್ಯದರ್ಶಿ ಅರ್ಲೋವಾ—ವಿರೋಧಿಗಳ ಒಳಸಂಚಿಗೆ ಸೇರಿದವರೆಂಬ ಸಂದೇಹದ ಮೇಲೆ ನಾವು ಹಿಂದಕ್ಕೆ ಕರೆದುಕೊಳ್ಳಬೇಕಾಯಿತು. ವಿಚಾರಣೆಯಲ್ಲಿ ಅವರ ಮೇಲಿನ ಸಂದೇಹಗಳು ಸತ್ಯವೆಂದು ಸ್ಥಾಪನೆಯಾದರೂ, ನೀನು ಅವರನ್ನು ಸಾರ್ವಜನಿಕವಾಗಿ ನಿರಾಕರಿಸಲಿಲ್ಲ. ನೀನು ಮೌನವಾಗಿದ್ದಿ........

'ಮತ್ತೆ ಆರು ತಿಂಗಳಲ್ಲಿ ನಿನ್ನನ್ನೇ ಹಿಂದಕ್ಕೆ ಕರೆಯಲಾಯಿತು. ವಿರೋಧಿಗಳ ಎರಡನೆಯ ವಿಚಾರಣೆಗೆ ಸಿದ್ಧತೆಗಳು ನಡೆಯುತಿದ್ದುವು. ವಿಚಾರಣೆಯಲ್ಲಿ ನಿನ್ನ ಹೆಸರು ಎಷ್ಟೋ ಸಲ ಮುಂದೆ ಬಂದಿತು; ಅರ್ಲೋವಾ ತನ್ನನಿರಪರಾಧಿತ್ವಕ್ಕೆ ನಿನ್ನನ್ನು ಸಾಕ್ಷಿ ಕೊಟ್ಟಳು. ಇಷ್ಟಿದ್ದರೂ ನೀನು ಮೌನವಾಗಿಯೇ ಇದ್ದುದನ್ನು ನೋಡುವಾಗ ನೀನು ಅಪರಾಧಕ್ಕೆ ಹೊಣೆಯಾಗಿರಬೇಕೆಂದು ಎಲ್ಲರೂ ಭಾವಿಸುವಂತಾಯಿತು. ನಿನಗದು ಗೊತ್ತಿತ್ತು. ಆದರೂ ಪಾರ್ಟಿಯು ನಿನಗೆ ಕೊನೆಯ ಎಚ್ಚರಿಕೆ ಕಳಿಸುವ ವರೆಗೆ ನೀನು ಸಾರ್ವಜನಿಕವಾಗಿ ಬಾಯಿ ಬಿಡಲಿಲ್ಲ. ತಲೆ ಹೋಗುವ ಕಾಲಕ್ಕೆ ಮಾತ್ರ ನೀನು ನಿನ್ನ ರಾಷ್ಟ್ರನಿಷ್ಠೆಯ ಸಾರ್ವಜನಿಕ ಘೋಷಣೆಯನ್ನು ಮಾಡಿದಿ. ನಿನ್ನ ಘೋಷಣೆಯಿಂದ ಅರ್ಲೋವಾಳ ಕತೆ ಮುಗಿಯಿತು. ಅವಳ ಗತಿ ಏನಾಯಿತೆಂದು ನೀನು ಬಲ್ಲೆ........'

ರುಬಷೊವ ಮೌನವಾಗಿದ್ದನು. ಅವನ ಹಲ್ಲು ನೋಯಲು ಆರಂಭವಾಯಿತು. ಹೌದು, ಅವನಿಗೆ ಅರ್ಲೋವಳ ಗತಿ ತಿಳಿದಿತ್ತು. ಕುಂಟ ಲೋವಿಯ ಗತಿಯೂ ತಿಳಿದಿತ್ತು. ತನ್ನ ಸ್ವಂತಗತಿ ಏನಾಗುವುದೆಂದೂ ತಿಳಿದಿತ್ತು. ಗೋಡೆಯ ಮೇಲಿನ ಮಾಸಲು ಜಾಗದಲ್ಲಿದ್ದ ಫೋಟೋದವರ ತಲೆಗಳ ಗತಿ ಏನಾಯಿತೆಂಬುದೂ ಅವನಿಗೆ ತಿಳಿಯದ ವಿಷಯವಲ್ಲ. ಇತಿಹಾಸವು ಪ್ರಗತಿಶೀಲವಾಗಿ ಹರಿದಂತೆ ಕಂಡ ಗತ ಕಾಲದಲ್ಲಿ ಮಾನವ ಜನಾಂಗಕ್ಕೆ ಗೌರವ ಯುಕ್ತವಾದ ಜೀವನವು ಲಭಿಸುವ ಒಂದು ಆಕಾಂಕ್ಷೆ ಇತ್ತು, ಅದೀಗ ಮುಗಿದು ಹೋಗಿದೆ. ಆದುದರಿಂದ ಈ ಮಾತುಗಳೂ, ಸಂಭ್ರಮಗಳೂ ಏತಕ್ಕೆ? ಮನುಷ್ಯರಲ್ಲಿ ಸಾವಿಗೀಡಾಗದೆ ಉಳಿಯುವ ಅಂಶವೇನಾದರೂ ಇರುವಲ್ಲಿ ಅರ್ಲೋವಾ ಎಂಬ ಆ ತರುಣಿ ಯಾರು ತನ್ನ ಆರಾಧ್ಯ ಮೂರ್ತಿಯಾಗಿದ್ದನೋ, ಯಾರು ತನ್ನನ್ನು ಮೃತ್ಯುವಿನ ಕೈಯಲ್ಲಿ ಕೊಟ್ಟನೋ ಅಂಥ ರುಬಷೊವ ಮಹಾನುಭಾವನನ್ನು ತನ್ನ ನಿರಪರಾಧಿ ಕಣ್ಣುಗಳಿಂದ ನೋಡುತ್ತ ಅನಂತ ಶೂನ್ಯದಲ್ಲಿ ಎಲ್ಲೋ ಇರಬೇಕಲ್ಲವೆ?........ಅವನ ಹಲ್ಲುನೋವು ಅಧಿಕವಾಯಿತು.

'ನೀನು ಆ ಸಮಯದಲ್ಲಿಮಾಡಿದ ಸಾರ್ವಜನಿಕ ಹೇಳಿಕೆಯನ್ನು ಓದಲೇ?' ಎಂದು ಐವನೊವ ಕೇಳಿದನು.

'ಬೇಡ, ಉಪಕಾರ' ಎಂದನು ರುಬಷೊವ. ಅವನ ಸ್ವರ ಅದೇಕೋ ಗಡುಸಾಗಿತ್ತು.

'ನಿನ್ನ ಘೋಷಣೆಯ—ಅದನ್ನು ಅಪರಾಧ ನಿವೇದನೆ ಎಂದರೂ ಸರಿಯೇ–ಅಂತ್ಯದಲ್ಲಿ ನೀನು ವಿರೋಧಪಕ್ಷವನ್ನು ತೀವ್ರವಾಗಿ ಧಿಕ್ಕರಿಸಿ ಪಾರ್ಟಿಯ ಧೋರಣೆಗೂ, ಒಂದನೆಯ ನಂಬರಿನವನ ವ್ಯಕ್ತಿತ್ವಕ್ಕೂ ನಿರುಪಾಧಿಕ ನಿಷ್ಠೆಯನ್ನು ಪ್ರದರ್ಶಿಸಿದಿ.'

ರುಬಷೊವ ರುಷ್ಟನಾಗಿ 'ಸಾಕು, ನಿಲ್ಲಿಸು. ಇಂಥ ಹೇಳಿಕೆಗಳನ್ನು ತಯಾರಿಸುವ ಕ್ರಮವೇನೆಂದು ನಿನಗೆ ಗೊತ್ತಿದೆ. ಗೊತ್ತಿಲ್ಲವಾದರೆ ಒಳಿತಾಯಿತು. ಅಂತೂ ದಯಮಾಡಿ ಈ ಪ್ರಹಸನವನ್ನು ಮುಗಿಸು' ಎಂದನು.

ಐವನೊವ ‘ಇನ್ನೇನು, ಎಲ್ಲವೂ ಮುಗಿದಹಾಗೆಯೇ. ಇಂದಿಗೆ ಎರಡು ವರ್ಷಗಳ ಹಿಂದಿನತನಕ ನಾವು ಬಂದಾಯಿತು. ಈ ಎರಡು ವರ್ಷಗಳ ಕಾಲ ನೀನು ‘ರಾಷ್ಟ್ರೀಯ ಅಲ್ಯುಮಿನಿಯಮ್ ಮಂಡಲ’ದ ಅಧ್ಯಕ್ಷನಾಗಿದ್ದೆ. ಈಗೊಂದು ವರ್ಷದ ಕೆಳಗೆ ನಡೆದ ವಿರೋಧಿಗಳ ತೃತೀಯ ವಿಚಾರಣೆಯಲ್ಲಿ ಮೊದಲನೆಯ ಆರೋಪಿಯು ನಿನ್ನ ಹೆಸರನ್ನು ಮೇಲಿಂದ ಮೇಲೆ ಕೆಲವು ಅಸ್ಪಷ್ಟ ಸಂದರ್ಭಗಳಲ್ಲಿ ಉಪಯೋಗಿಸಿದ್ದಾನೆ. ಗಟ್ಟಿಯಾಗಿ ಕೈಗೆ ಸಿಕ್ಕುವ ಯಾವ ಆರೋಪವೂ ನಮಗೆ ನಿನ್ನ ವಿಷಯದಲ್ಲಿ ಸಿಗಲಿಲ್ಲವಾದರೂ ಪಕ್ಷದ ವರ್ಗಗಳಲ್ಲಿ ಸಂದೇಹ ಬೆಳೆಯುತ್ತಿದೆ. ನೀನು ಇನ್ನೊಂದು ಸಾರ್ವಜನಿಕ ಹೇಳಿಕೆಯನ್ನು ಹೊರಡಿಸಿ ಧುರೀಣರ ಧೋರಣೆಯನ್ನು ಸಮರ್ಥಿಸಿ ವಿರೋಧಿಗಳ ದ್ರೋಹವನ್ನು ಹಿಂದಿಗಿಂತಲೂ ಉಗ್ರವಾಗಿ ಟೀಕಿಸಿದಿ........ಇದಾಗಿ ಆರು ತಿಂಗಳಾಯಿತು. ಧುರೀಣರ ಧೋರಣೆಯು ದೋಷಯುಕ್ತವೆಂದು ನೀನು ಹಲವು ವರ್ಷಗಳಿಂದ ನಂಬಿಕೊಂಡು ಬಂದಿರುವಿ ಎಂದು ಇವತ್ತು ನೀನು ಒಪ್ಪಿಕೊಂಡಿರುವಿ........’

ವಿರಾಮ ತೆಗೆದುಕೊಂಡು ಕುರ್ಚಿಯಲ್ಲಿ ಸುಖಾಸೀನನಾಗಿ,

‘ಆದುದರಿಂದ ನಾಯಕನಿಷ್ಠೆಯ ಬಗ್ಗೆ ನೀನು ಈ ಹಿಂದೆ ಕೊಟ್ಟಿರುವ ಘೋಷಣೆಗಳಿಗೂ ಹೇಳಿಕೆಗಳಿಗೂ ಒಂದು ನಿಶ್ಚಿತವಾದ ಗುರಿ ಇತ್ತೆಂದು ಇದರಿಂದ ಸ್ಪಷ್ಟವಾಗುತ್ತದೆ. ನಿನ್ನ ಗುರಿಯನ್ನು ಮುಟ್ಟಲು ನಿನ್ನ ಹೇಳಿಕೆಗಳು ಸಾಧನವಾಗಿದ್ದುವು ಎಂದಾಯಿತು. ನಾನು ನೀತಿ ಪಾಠ ಹೇಳುತ್ತಿದ್ದೇನೆಂದು ದಯವಿಟ್ಟು ಭಾವಿಸಬೇಡ. ನಾವಿಬ್ಬರೂ ಬೆಳೆದ ಪರಂಪರೆ ಒಂದೇ ಎಂಬುದರಿಂದ ನಮ್ಮ ವಿಚಾರಗಳೂ ಈ ವಿಷಯದಲ್ಲಿ ಬೇರೆ ಬೇರಾಗಲು ಸಾಧ್ಯವಿಲ್ಲ. ನಮ್ಮ ಧೋರಣೆ ತಪ್ಪೆಂದೂ, ನಿನ್ನದು ಸರಿಯೆಂದೂ ನಿನಗೆ ಆಗಿನಿಂದಲೂ ನಿಶ್ಚಯವಿತ್ತು. ಅದನ್ನು ಬಹಿರಂಗವಾಗಿ ಹೇಳಿದರೆ ಎಲ್ಲಿ ಪಾರ್ಟಿಯಿಂದ ಹೊರ ಬೀಳಬೇಕಾದೀತೋ, ನಿನ್ನ ವಿಚಾರಗಳ ಪ್ರಚಾರಕಾರ್ಯಕ್ಕೆ ಅನುವು ತಪ್ಪಿಹೋದೀತೋ ಎಂದು ಯೋಚಿಸಿ ನೀನು ಅವನ್ನು ಹೊರಗೆ ಪ್ರಕಟಿಸಲಿಲ್ಲ. ನಿನ್ನ ಯೋಜನೆಯಲ್ಲಿ ಸರಿಯಾದ ಮಾರ್ಗವೆಂದು ಕಂಡುದನ್ನು

ಸಾಧಿಸಲಿಕ್ಕೋಸ್ಕರ ನೀನು ಏನನ್ನು ಹೇಳಲಿಕ್ಕೂ ಸಿದ್ಧನಾಗಿದ್ದಿ. ನಿನ್ನ ಸ್ಥಾನದಲ್ಲಿ ನಾನಿದ್ದರೂ ಪ್ರಾಯಶಃ ಹಾಗೆಯೇ ಮಾಡುತ್ತಿದ್ದೆನೋ ಏನೋ .ಇದು ವರೆಗೆ ಎಲ್ಲವೂ ಚೊಕ್ಕಟವಾಗಿದೆ.'

'ಸರಿ, ಇನ್ನು ಮುಂದಿನದೇನು?'

ಐವನೊವ ಮರಳಿ ಹಸನ್ಮುಖದಿಂದ 'ನನಗೆ ಅರ್ಥವಾಗದಿರು ವುದು ಇಷ್ಟೆ. ನಾವು ಹಲವು ವರ್ಷಗಳಿಂದೀಚೆಗೆ ಕ್ರಾಂತಿಯನ್ನು ನಾಶ ಮಾಡುವ ಕೆಲಸದಲ್ಲಿದ್ದೇವೆಂದು ನಿನಗೆ ಖಚಿತಾಭಿಪ್ರಾಯವಿತ್ತೆಂದು ನೀನು ಬಹಿರಂಗವಾಗಿ ಒಪ್ಪಿಕೊಳ್ಳುತ್ತೀ; ಆದರೆ ಅದೇ ಉಸಿರಿನಲ್ಲಿ ನೀನು ವಿರೋಧಿಪಕ್ಷದವನಾಗಿದ್ದು ನಮ್ಮ ಮೇಲೆ ಒಳಸಂಚು ನಡೆಸಿದಿ ಎಂದು ನಾವನ್ನುವುದನ್ನು ಅಲ್ಲಗಳೆಯುತ್ತೀ: ದೇಶವನ್ನೂ ಪಾರ್ಟಿಯನ್ನೂನಾವು ವಿನಾಶದ ಹಾದಿಯಲ್ಲಿ ಒಯ್ಯುತ್ತಿರುವುದನ್ನು ನೀನು ತೆಪ್ಪಗೆ ಕೂತು ಅವಲೋಕಿಸುತ್ತಿದ್ದಿ ಎಂದರೆ ನಾವು ನಂಬುತ್ತೇವೆ ಎಂದು ಭಾವಿಸಿ ದಿಯಾ?' ಎಂದನು.

ರುಬಷೊವ ಭುಜ ಹಾರಿಸಿ 'ಪ್ರಾಯಶಃ ನನಗೆ ವಯಸ್ಸಾದ್ದ ರಿಂದಲೋ, ಆಯಾಸವಾದ್ದರಿಂದಲೋ ನಾನು ಸುಮ್ಮಗೆ ಕೂತಿರಬ ಹುದು........ನಂಬಿದರೆ ನಂಬಿ ಬಿಟ್ಟರೆ ಬಿಡಿ, ಅಥವಾ ನಿಮಗೆ ಬೇಕಾ ದ್ದನ್ನು ನಂಬಿ.'

ಐವನೊವ ಇನ್ನೊಂದು ಸಿಗರೇಟ ಹಚ್ಚಿದನು. 'ನಿನ್ನ ಜೀವ ಉಳಿಸಿ ಕೊಳ್ಳುವುದಕ್ಕಾಗಿ ಮಾತ್ರವೇ ನೀನು ಅರ್ಲೋವಳನ್ನು ಬಲಿಕೊಟ್ಟೆ ಎಂದೂ, ಗೋಡೆಯ ಮೇಲಿನ ಪಠದಲ್ಲಿರುವವರನ್ನು ನಿರಾಕರಿಸಿದಿ ಎಂದೂ ನಾನು ನಂಬಬೇಕೆನ್ನುತ್ತೀಯಾ'? ಎಂದು ಛೇದಕಸ್ವರದಲ್ಲಿ ಆತ ಕೇಳಿದನು.

ರುಬಷೊವ ಮಾತಾಡಲಿಲ್ಲ. ನಡುವೆ ಸ್ವಲ್ಪ ಹೆಚ್ಚು ಹೊತ್ತು ಸಂದಿತು. ಐವನೊವನ ತಲೆ ಡೆಸ್ಕಿಗೆ ಇನ್ನಷ್ಟು ಬಗ್ಗಿತು.

'ನನಗೆ ನಿನ್ನ ಅರ್ಥವೇ ಆಗುವುದಿಲ್ಲ. ಈಗರ್ಧತಾಸಿನ ಹಿಂದೆ ನೀನು ಮಾಡಿದ ಭಾಷಣದಲ್ಲಿ ನಮ್ಮ ಧೋರಣೆಗೆ ವಿರುದ್ಧ ಉದ್ರಿಕ್ತ

ಟೀಕೆಗಳನ್ನು ಮಾಡಿದಿ. ಆ ಟೀಕೆಗಳಲ್ಲಿ ಒಂದೊಂದು ಅಂಶವೂ ನಿನ್ನ ನಾಶಕ್ಕೆ ಸಾಕು. ಆದರೆ ನೀನು ವಿರೋಧ ಪಂಗಡವೊಂದಕ್ಕೆ ಸೇರಿದವನಿರಬೇಕೆಂಬ ನಮ್ಮ ತರ್ಕಸಿದ್ಧ ತೀರ್ಮಾನವನ್ನು ನೀನು ಒಪ್ಪಿಕೊಳ್ಳಲು ಸಿದ್ಧನಾಗಿಲ್ಲವೆಂದರೆ ನನಗೆ ಆಶ್ಚರ್ಯವಾಗುತ್ತಿದೆ. ಏನಿದ್ದರೂ ನೀನು ವಿರೋಧಿ ಪಂಗಡದವನೆಂಬುದಕ್ಕೆ ನಮ್ಮ ಹತ್ತಿರ ಸಾಕಷ್ಟು ಪುರಾವೆಗಳಿವೆ.'

'ಹೌದೇ? ಹಾಗಿದ್ದರೆ ನಿಮಗೆ ನನ್ನ ಒಪ್ಪಿಗೆ ಏಕೆ? ನಿಮ್ಮ ಹತ್ತಿರ ಪುರಾವೆ ಇದೆ ಎಂದಿರಲ್ಲ, ಯಾವುದರ ಪುರಾವೆ?'

ಐವನೊವ ಸಾವಕಾಶವಾಗಿ, 'ಒಂದನೆಯ ನಂಬರಿನವನ ಪ್ರಾಣಕ್ಕೆ ಸಂಚಕಾರ ಕೊಡುವ ಪ್ರಯತ್ನವೂ ಅವುಗಳ ಪೈಕಿ ಒಂದು.'

ಮತ್ತೆ ಮೌನ. ರುಬಷೊವ ಕನ್ನಡಕವನ್ನು ಹಾಕಿಕೊಂಡು 'ನಾನೂ ಒಂದು ಪ್ರಶ್ನೆ ಕೇಳಲಾ? ನೀನು ಇಂಥ ಮೂರ್ಖತನದ ಸುದ್ದಿಗಳನ್ನು ನಿಜವಾಗಿಯೂ ನಂಬುತ್ತೀಯಾ ಅಥವಾ ನಂಬುವ ನಟನೆ ತೋರಿಸುತ್ತಿರುವಿಯಾ?'

ಐವನೊವನ ತುಟಿಗಳಲ್ಲಿ ಕೋಮಲ ಮಂದಹಾಸವು ಚಿಗುರಿತು: ನಮ್ಮ ಹತ್ತಿರ ಪುರಾವೆಗಳಿವೆಯೆಂದು ನಾನು ಹೇಳಿದೆನಲ್ಲವೆ? ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಅಪರಾಧ ಮಾಡಿದವನ ನಿವೇದನೆಯೇ ನಮ್ಮ ಹತ್ತಿರ ಇದೆ. 'ಯಾರು ನಿನ್ನ ಪ್ರೇರಣೆಯಿಂದ ಒಂದನೆಯ ನಂಬರಿನ ಕೊಲೆ ಮಾಡಬೇಕಾಗಿತ್ತೋ ಅವನದೇ ಹೇಳಿಕೆ ಇದೆ.'

'ಅಭಿನಂದನೆಗಳು, ಅವನ ಹೆಸರೇನು?'

'ಕೇಳಬಾರದ ಪ್ರಶ್ನೆ'

'ಇರಲಿ, ನಾನು ಆ ನಿವೇದನೆಯನ್ನು ನೋಡಬಹುದೋ? ಅಥವಾ ಆ ಮನುಷ್ಯನನ್ನಾದರೂ ನೋಡಬಹುದೋ?

ಐವನೊವ ನಸುನಕ್ಕು ಸಿಗರೇಟಿನ ಹೊಗೆಸುರುಳಿಯನ್ನು ರುಬಷೊವನ ಮುಖದ ಹತ್ತಿರಕ್ಕೆ ತಮಾಷೆಯಾಗಿ ಊದುತ್ತಾ 'ನಿನಗೆ ವಿಷದ ಕಥೆ ನೆನಪುಂಟಲ್ಲವೆ? ಈ ಪ್ರಶ್ನೆ ಒಮ್ಮೆ ಕೇಳಿದೆನೆಂದು ತೋರುತ್ತದೆ. ಆದರೆ ಈ ಸಲ ನಮ್ಮ ಪಾತ್ರಗಳು ಬದಲಾಗಿವೆ. ತಲೆಕೆಳಗಾಗಿ

ದರಿಗೆ ಹಾರಿ ಪ್ರಾಣಕಳೆದುಕೊಳ್ಳುತ್ತೇನೆ ಎನ್ನುವವನು ಇವತ್ತು ನೀನು. ಆದರೆ ಇದರಲ್ಲಿ ಖಂಡಿತವಾಗಿಯೂ ನನ್ನ ಸಹಾಯ ಸಿಗಲಾರದು. ಆತ್ಮಹತ್ಯೆಯು ಕ್ಷುದ್ರ ಬೂರ್ಜ್ವ ಸಮಾಜದ ಭಾವಾಧಿಕ ವ್ಯಾಧಿ ಎಂದು ನೀನು ಅವತ್ತು ನನಗೆ ಹೇಳಿರುವಿ. ನೀನು ಈ ವ್ಯಾಧಿಗೆ ತುತ್ತಾಗದ ಹಾಗೆ ನೋಡುವುದು ನಮ್ಮ ಕೆಲಸ. ಆ ಮೇಲೆ ಬೇಕಾದರೆ ನಾವು ಸ್ನೇಹ ಕಡಿದುಕೊಳ್ಳೋಣ.'

ರುಬಷೊವ ಮೌನವಾಗಿದ್ದನು. ಐವನೊವ ಹೇಳುತ್ತಿರುವ ಮಾತು ಸತ್ಯವೋ, ಸುಳ್ಳೋ ಎಂದು ಆತ ತಲೆಯಲ್ಲಿ ವಿಚಾರ ಮಥನ ಮಾಡುತ್ತಿರುವಾಗ ಅವನಿಗೆ ಗೋಡೆಯಲ್ಲಿ ಫೊಟೊಗ್ರಾಫನ್ನಿಟ್ಟ ಜಾಗ ವನ್ನೊಮ್ಮೆ ಬೆರಳಿನಿಂದ ಮುಟ್ಟಿ ನೋಡುವ ಪ್ರಬಲ ಈಪ್ಸೆ ಉಂಟಾ ಯಿತು. ಇದು ನರಗಳ ದೌರ್ಬಲ್ಯ, ರೋಗ. ಕಪ್ಪು ಕಲ್ಲಿನ ಮೇಲೆ ಮಾತ್ರ ನಡೆಯುವುದು, ಅರ್ಥವಿಲ್ಲದೆ ಪದಗಳನ್ನು ಗೊಣಗುವುದು, ಅಂಗಿಯ ತೋಳಿನಿಂದ ಕನ್ನಡಕವನ್ನೊರಸುವುದು, ಹೌದು ಎಲ್ಲವೂ ಮಾನಸಿಕ ಪೀಡೆಯ ಲಕ್ಷಣಗಳು, ಇಗೋ ಅದನ್ನೇ ಮತ್ತೆ ಮಾಡು ತ್ತಿದ್ದೇನೆ ಎಂದುಕೊಂಡನು ರುಬಷೊವ.

'ನನ್ನ ವಿಮೋಚನೆಗೆ ಯಾವ ಯೋಜನೆ ನಿನ್ನ ಕೈಯಲ್ಲಿದೆ ಎಂಬುದನ್ನು ತಿಳಿಯಲು ನಾನು ಆತುರನಾಗಿದ್ದೇನೆ. ನೀನು ನನ್ನನ್ನು ಈ ವರೆಗೆ ಪರೀಕ್ಷೆ ಮಾಡಿದ ವಿಧಾನವನ್ನು ನೋಡಿದರೆ ನಿನ್ನ ಉದ್ದೇ ಶವು ವಿಮೋಚನೆಗೆ ತದ್ವಿರುದ್ಧವಾದ ಬೇರಾವುದೋ ಇರಬೇಕೆಂದು ನನಗೆ ಹೊಳೆಯುತ್ತಿದೆ.'

ಐವನೊವನು ಮಂದಹಾಸವನ್ನು ಬೀರುತ್ತ, ಡೆಸ್ಕಿನ ಈಚೆಗೆ ಕೈ ಚಾಚಿ ರುಬಷೊವನ ಕೋಟಿನ ಗುಂಡಿಯನ್ನು ಹಿಡಿದು 'ಛೀ ಹುಚ್ಚಾ. ಒಂದು ಸಲ ನಿನ್ನ ಪಟಾಕಿ ಒಡೆಯದಿದ್ದರೆ ನೀನೆಲ್ಲಿ ಅಸಮಯದಲ್ಲಿ ಸ್ಫೋಟವಾದಿಯೋ ಇಂದು ಭಾವಿಸಿ ನಿನಗೊಂದು ಸಂದರ್ಭವನ್ನು ಕಲ್ಪಿಸಿಕೊಟ್ಟೆ. ನನ್ನ ಹತ್ತಿರ ಸ್ಟೆನೊಗ್ರಾಫರ್ ಕೂಡ ಇಲ್ಲವೆಂದು ನಿನಗೆ ತೋರುವುದಿಲ್ಲವೆ?' ಎಂದನು.

ಕೋಟಿನ ಗುಂಡಿಯನ್ನು ಹಿಡಿದಿದ್ದಂತೆಯೇ ಒಂದು ಸಿಗರೇಟನ್ನು ಕೇಸಿನಿಂದ ಹೊರಗೆಳೆದು ರುಬಷೊವನ ಬಾಯಿಗೆ ತುರುಕಿಸಿ 'ನೀನು ಮಗುವಿನ ಹಾಗೆ ಮಾಡುತ್ತಿದ್ದೀಯಾ, ವಿಚಿತ್ರವಾದ ಮಗುವಿನ ಹಾಗೆ. ಇನ್ನು ನಿನ್ನದೊಂದು ಸಣ್ಣ ನಿವೇದನೆಯನ್ನು ಬರೆದುಕೊಂಡರೆ ನಮ್ಮ ಇವತ್ತಿನ ಕೆಲಸ ಮುಗಿಯಿತು' ಎಂದನು.

ರುಬಷೊವ ಕೊನೆಗೊಮ್ಮೆ ಐವನೊವನ ಹಿಡಿತದಿಂದ ತಪ್ಪಿಸಿಕೊಂಡು, ಕನ್ನಡಕದ ಮೂಲಕ ಅವನನ್ನು ಪ್ರಖರವಾಗಿ ಪರೀಕ್ಷಿಸಿ, 'ನಿವೇದನೆಯಲ್ಲಿ ಏನೆಲ್ಲಾ ಸೇರಿಸಬೇಕೆಂದಿದ್ದೀಯಾ?'

ಐವನೊವನ ಮಂದಹಾಸವು ಕೊಂಚವೂ ಕಡಮೆಯಾಗಲಿಲ್ಲ. 'ಇಂಥ ಒಂದು ವರ್ಷದಿಂದ ಇಂಥ ಒಂದು ವಿರೋಧಿ ಗುಂಪಿಗೆ ನೀನು ಸೇರಿಕೊಂಡಿದ್ದಿ ಎಂಬುದಾಗಿಯೂ, ಆದರೆ ಕೊಲೆಯ ಪ್ರಕರಣದಲ್ಲಿ ನೀನು ಸರ್ವಥಾ ನಿರ್ದೋಷಿ ಎಂಬುದಾಗಿಯೂ, ವಿರೋಧಿಗಳ ಭಯೋತ್ಪಾದಕ ಮತ್ತು ಕೊಲೆಪಾತಕ ಪ್ರವೃತ್ತಿಗಳೂ ಯೋಜನೆಗಳೂ ನಿನಗೆ ಅರಿವಾಗುತ್ತಲೇ ನೀನು ಗುಂಪನ್ನು ಬಿಟ್ಟು ನಡೆದಿ ಎಂಬುದಾಗಿಯೂ ನಿವೇದನೆಯಲ್ಲಿ ಬರೆಯೋಣ.'

ಇಡೀ ಚರ್ಚೆಯ ನಡುವೆ ಮೊದಲ ಸಲ ರುಬಷೊವ ಮುಗುಳ್ನಕ್ಕನು.

'ಈ ಮಾತುಕತೆಯ ಉದ್ದೇಶವೇ ಇದು ಎಂಬುದಾದರೆ ನಾವು ಇಲ್ಲಿಗೇ ಮಾತು ನಿಲ್ಲಿಸಬಹುದು.' ಎಂದನು.

ಐವನೊವ ಇದಕ್ಕೂ ತಾಳ್ಮೆ ತಪ್ಪದೆ ನುಡಿದನು: 'ನೀನು ಹಿಂಜರಿಯುತ್ತಿ ಎಂದು ನಾನು ಬಲ್ಲೆ. ಮೊದಲನೆಯದಾಗಿ ನಾವು ಈ ಪ್ರಶ್ನೆಯ ನೈತಿಕ ಅಥವಾ ಭಾವನಾತ್ಮಕ ಅಂಶವನ್ನು ವಿಚಾರಿಸೋಣ. ನೀನೀಗ ಒಪ್ಪಿದುದರಿಂದ ಯಾರಿಗೂ ತೊಂದರೆ ಇಲ್ಲ. ನೀನು ಯಾರನ್ನೂ ಕೈಬಿಟ್ಟಂತೆ ಆಗುವುದಿಲ್ಲ. ನಿನಗಿಂತ ಎಷ್ಟೋ ಮೊದಲು ಈ ಗುಂಪಿನವರೆಲ್ಲರನ್ನು ಸೆರೆ ಹಿಡಿದಾಗಿದೆ. ಎಷ್ಟೋ ಮಂದಿಯನ್ನು ಇಷ್ಟು ಹೊತ್ತಿಗೆ ವಿಸರ್ಜನೆ ಮಾಡಿಯಾಗಿದೆ. ಇದು ನಿನಗೂ ಗೊತ್ತು. ಉಳಿದವರಿಂದ ಇದಕ್ಕಿಂತ ಉಪಯೋಗಕರವಾದ, ಅಪಾಯಕರವಾದ ನಿವೇದನೆ

ಯನ್ನು ನಾವು ತೆಗೆದುಕೊಂಡಿರುವೆವು.......ನನ್ನ ಸ್ಪಷ್ಟವಾದಿತನವನ್ನು ನೀನು ಅರ್ಥಮಾಡಿಕೊಳ್ಳುವಿ ಎಂದು ನಾನು ನಂಬಿದ್ದೇನೆ.'

'ಅರ್ಥಾತ್, ಒಂದನೆಯ ನಂಬರಿನವನ ವಿರುದ್ಧ ನಾನು ಒಳ ಸಂಚು ನಡೆಸಿದ ಕತೆಯಲ್ಲಿ ನಿನಗೆ ನಂಬಿಕೆ ಇಲ್ಲವೆಂದಾಯಿತು. ಯಾರು ನಿಮಗೆ ಈ ರೀತಿ ಹೇಳಿಕೊಟ್ಟನೋ ಅವನನ್ನು ನನ್ನ ಮುಂದೆ ತಂದು ನಿಲ್ಲಿಸಬಾರದೆ?'

'ಸ್ವಲ್ಪ ವಿಚಾರ ಮಾಡಿ ನೋಡು. ನನ್ನ ಸ್ಥಾನವಲ್ಲಿ ನೀನಿದ್ದರೆ ಏನು ಮಾಡುತ್ತಿದ್ದಿ ಎಂದು ವಿಚಾರ ಮಾಡು. ನಾನಿರುವಲ್ಲಿ ನೀನೂ, ನೀನಿರುವಲ್ಲಿ ನಾನೂ ಇರುವುದು ಅಸಂಭವವೇನೂ ಅಲ್ಲವೆಂಬುದನ್ನು ಯೋಚಿಸಿ ಉತ್ತರ ಕೊಡು.'

ರುಬಷೊವ ವಿಚಾರ ಮಾಡಿದನು. 'ನನ್ನ ಕುರಿತು ವಿಚಾರಣೆ ಮಾಡಲು ನಿನಗೆ ವಿಶೇಷ ಅಪ್ಪಣೆ ಬಂದಿರಬೇಕಲ್ಲವೆ?' ಎಂದು ಕೇಳಿದನು.

ಐವನೊವ ನಸುನಕ್ಕು 'ನಿನ್ನ ಅಂದಾಜು ಸ್ವಲ್ಪ ಗುರಿ ತಪ್ಪಿತು. ನಿಜವಾಗಿ ನಿನ್ನ ಕೇಸನ್ನು 'A' ವರ್ಗಕ್ಕೆ ಸೇರಿಸಬೇಕೋ 'P' ವರ್ಗಕ್ಕೆ ಸೇರಿಸಬೇಕೋ ಎಂಬುದು ಇನ್ನೂ ನಿಶ್ಚಯವಾಗಿಲ್ಲ.

ರುಬಷೊವ ಹೌದೆಂದು ಗೋಣಲ್ಲಾಡಿಸಿದನು.

ಐವನೊವ 'ನಿನಗೆ ಅರ್ಥವಾಗಲು ಆರಂಭವಾಯಿತು ನೋಡು. P ವರ್ಗವೆಂದರೆ ಸಾರ್ವಜನಿಕರ ಸಮ್ಮುಖ ನಡೆಯುವ ಬಹಿರಂಗ ವಿಚಾರಣೆ, ಆದರೆ ರಾಜಕೀಯ ಕೇಸುಗಳನ್ನು, ಅವುಗಳಲ್ಲಿ ಬಹಿರಂಗ ವಾಗಿ ಮಾಡಿ ಪ್ರಯೋಜನ ಬಾರವವುಗಳನ್ನು ಆಡಳಿತ ವರ್ಗವೇ ವಿಚಾರಣೆ ಮಾಡುವುದು ನಿಯಮ. ನೀನು 'A'ಗೆ ಸೇರುವುದಾದರೆ ನನ್ನ ಕೈಯೊಳಗಿರುವುದಿಲ್ಲ. ಆಡಳಿತ ಮಂಡಳಿಯ ವಿಚಾರಣೆ, ಗುಪ್ತ ವಾಗಿಯೂ, ಸಂಕ್ಷಿಪ್ತವಾಗಿಯೂ ನಡೆಯತಕ್ಕದ್ದು. ಅವನು ಯಾರು ತೋರಿಸಿ ಎಂದರೆ ಅಲ್ಲಿ ಯಾರೂ ತೋರಿಸುವವರಿಲ್ಲ............ಇವರ ಗುಟ್ಟನ್ನು ಯೋಚಿಸು........ ಎಂದು ಐವನೊವ ಗೋಡೆಯ ಫೋಟೋದಲ್ಲಿನ ಮೂರು ನಾಲ್ಕು ಹೆಸರುಗಳನ್ನು ಜ್ಞಾಪಿಸಿದನು. ಅವನು ಈಗ

ರುಬಷೊವನನ್ನು ದಿಟ್ಟಿಸಿ ನೋಡುತ್ತಿದ್ದವರೂ ಅವನ ಕಣ್ಣಿನ ಗುರಿ ರುಬಷೊವಗಿಂತ ಹಿಂದುಗಡೆ ಎಲ್ಲೋ ಬೀಳುವಂತಿತ್ತು, ಮುಖದಲ್ಲಿ ವೇದನೆಯ ವಿಕಾರವಿತ್ತು, ಕಣ್ಣಿನಲ್ಲಿ ವಿಲಕ್ಷಣ ನಿಶ್ಚಲತೆ ಇತ್ತು.

ತಗ್ಗುಧ್ವನಿಯಲ್ಲಿ ಐವನೊವ ತನ್ನ ಪೂರ್ವದ ಮಿತ್ರರ ಹೆಸರುಗಳನ್ನು ಮತ್ತೊಂದು ಬಾರಿ ಉಚ್ಚರಿಸಿದನು. 'ನಿನಗೆ ಪರಿಚಯವಿದ್ದಷ್ಟೇ ಅವರು ನನಗೂ ಪರಿಚಿತರು. ನಿಮಗೆ ನಾವು ಕ್ರಾಂತಿಯನ್ನು ಮಣ್ಣುಗೂಡಿಸುವವರೆಂದು ಎಷ್ಟು ನಿಶ್ಚಯವಾಗಿ ತಿಳಿದಿರುವುದೋ ಅಷ್ಟೇ ನಿಶ್ಚಯವಾಗಿ ನಿನ್ನಂಥವರಿಂದ ಮತ್ತು ಅವರಂಥವರಿಂದ ಕ್ರಾಂತಿಯು ಭಗ್ನವಾಗುವುದೆಂದು ನಾವು ನಂಬಿರುತ್ತೇವೆ. ಮುಖ್ಯ ವಿಚಾರವೆಂದರೆ ಇದು. ಇನ್ನು ದಾರಿಗಳು ಹೇಗೂ ತರ್ಕಸಿದ್ಧವಾಗಿರುವವು ಕಾಯಿದೆ ಕಾನೂನಿನ ಸೂಕ್ಷ್ಮಾತಿಸೂಕ್ಷ್ಮ ಸಿಕ್ಕುಗಳಲ್ಲಿ ಮಗ್ನರಾಗಿರುವುದು ನಮಗೇ ಕೇಡೆಂದು ನಮಗೆ ತಿಳಿಯದಿಲ್ಲ. ನಿನ್ನ ಕಾಲದಲ್ಲಿ ನೀನು ನ್ಯಾಯ ಸೂಕ್ಷ್ಮತೆಗಳಿಗೆ ಕೊಡುತ್ತಿದ್ದ ಪ್ರಾಶಸ್ತ್ಯವೆಷ್ಟೆಂದು ನೀನೇ ಯೋಚಿಸಿಕೊ.'

ರುಬಷೊವ ಮಾತಾಡಲಿಲ್ಲ.

'ನಿನ್ನನ್ನು P ವರ್ಗಕ್ಕೆ ಸೇರಿಸಿ, ನನ್ನ ಕೈಯಲ್ಲೇ ಕೇಸು ಇರುವುದಾದರೆ ಚಿಂತಿಲ್ಲ. ಬಹಿರಂಗ ವಿಚಾರಣೆಗೆ ಕೇಸುಗಳನ್ನು ಆಯುವ ವಿಧಾನ ಮತ್ತು ದೃಷ್ಟಿ ಯಾವುದೆಂದು ನಿನಗೂ ಗೊತ್ತಿದೆ. ನೀನು ಸ್ವಲ್ಪ ಮಟ್ಟಿಗೆ ನಾವು ಹೇಳುವಂತೆ ಕೇಳುವ ಚಿಹ್ನೆ ತೋರಿಸಬೇಕು. ಸ್ವಲ್ಪಮಟ್ಟಿಗೆ ನಿನ್ನ ನಿವೇದನೆಯಂತೆಯೇ ಕಾಣಬೇಕಾದ ಹೇಳಿಕೆಯನ್ನು ನೀನು ನನಗೆ ಒಪ್ಪಿಸಬೇಕು, ಅಂದರೆ ಎಲ್ಲವೂ ಸರಿಹೋಗುತ್ತದೆ. ಅದನ್ನು ಬಿಟ್ಟು ನೀನು ನಿನ್ನ ಶೌರ್ಯತನದ ಛಲವನ್ನೇ ಮೆರೆಸುವುದಾದರೆ X ನಿನ್ನ ವಿಷಯದಲ್ಲಿ ಈಗಾಗಲೇ ಕೊಟ್ಟಿರುವ ನಿವೇದನೆಯ ಮೇಲಿಂದ ನಿನ್ನನ್ನು ಕೊನೆಗೊಳಿಸುವುದು ಕಷ್ಟವಲ್ಲ. ನಿನ್ನ ನಿವೇದನೆಯಲ್ಲಿ ನೀನು ಅಂಶತಃ ಆದರೂ ಸರಿಯೇ ನಿನ್ನ ತಪ್ಪನ್ನು ಒಪ್ಪಿಕೊಂಡಲ್ಲಿ ನಿನ್ನನ್ನು ಮತ್ತಷ್ಟು ವಿವರವಾಗಿ ವಿಚಾರಿಸಬೇಕೆಂದು ನಾವು ಇಚ್ಛಿಸಬಹುದು.

ನಿನ್ನ ನಿವೇದನೆಯ ಆಧಾರದ ಮೇಲಿಂದ Xನ್ನು ನಿನ್ನಿದಿರು ತಂದು ನಿಲ್ಲಿಸುವುದೂ ಸುಲಭ, ಆರೋಪದಲ್ಲಿ ಗಂಭೀರವಾದವುಗಳನ್ನು ನಿರಾಕರಿಸಿ ಒಂದು ಮಿತಿಯಲ್ಲಿ ಅಪರಾಧವನ್ನೊಪ್ಪಿಕೊಳ್ಳಲೂ ಸಾಧ್ಯವಾಗುವುದು. ಇಷ್ಟಾಗಿಯೂ ಇಪ್ಪತ್ತು ವರ್ಷಕ್ಕಿಂತ ಕಡಿಮೆ ಶಿಕ್ಷೆಯ ತೀರ್ಪು ಕೊಡುವುದು ಸಾಧ್ಯವಿಲ್ಲ; ತೀರ್ಪು ಇಪ್ಪತ್ತಾದರೂ ಎರಡು ಮೂರು ವರ್ಷಗಳ ತರುವಾಯ ಉಳಿದ ಶಿಕ್ಷಾವಧಿಯನ್ನು ಮನ್ನಾಮಾಡಬಹುದು. ಅಂತೂ ನಾಲ್ಕೈದು ವರ್ಷಗಳಲ್ಲಿ ನೀನು ಪುನಃ ಪಾರ್ಟಿಯೊಳಗೆ ಬರಬಹುದು. ಇದನ್ನೆಲ್ಲ ವಿಚಾರಮಾಡಿ ಆ ಮೇಲೆ ಉತ್ತರ ಹೇಳುವಿಯಂತೆ' ಎಂದು ಐವನೊವ ಹೇಳಿದನು.

ಅದಕ್ಕೆ ರುಬಷೊವ 'ನಾನು ಬೇಕಾದಷ್ಟು ವಿಚಾರ ಮಾಡಿ ಆಗಿದೆ. ವಿಚಾರಮಾಡಿಯೇ ನಿನ್ನ ಸೂಚನೆಯನ್ನು ನಿರಾಕರಿಸುತ್ತಿದ್ದೇನೆ. ತಾರ್ಕಿಕವಾಗಿ ನೋಡಿದರೆ ನಿನ್ನದೇ ಮಾತು ನಿಜವಾಗಿರಬಹುದು; ಆದರೆ ಇಂಥ ತರ್ಕದಿಂದ ನನಗೆ ಬೇಸರಿಕೆ ಬಂದಿದೆ. ಇನ್ನು ನಾನು ಈ ಆಟವನ್ನಾಡುವುದಿಲ್ಲ. ದಯಮಾಡಿ ನನ್ನನ್ನು ನನ್ನ ಕೋಣೆಗೆ ಹಿಂದೆ ಕಳಿಸು' ಎಂದನು.

ಐವನೊವ 'ನಿನ್ನಿಷ್ಟ. ನೀನು ಒಂದೇ ಸಲಕ್ಕೆ ಒಪ್ಪಿಕೊಳ್ಳುತ್ತೀ ಎಂದು ನಾನೇನೂ ಎಣಿಸಿರಲಿಲ್ಲ. ನಾವು ಈಗ ನಡೆಸಿದಂಥ ಸಂಭಾಷಣೆಯ ಪರಿಣಾಮ ಸ್ವಲ್ಪ ಕಾಲದ ನಂತರ ಸಫಲವಾಗುತ್ತದೆ. ನಿನಗೆ ಹದಿನೈದು ದಿನಗಳ ಅವಧಿ ಕೊಟ್ಟಿದ್ದೇನೆ. ಸಾಕಷ್ಟು ಯೋಚನೆಮಾಡಿ ನಿನಗೆ ಇಚ್ಛೆಯಾದರೆ ಇಲ್ಲಿಗೆ ಬಾ, ಅಥವಾ ನಿನ್ನ ಹೇಳಿಕೆಯನ್ನು ಬರೆದು ಕಳಿಸು. ನೀನು ಹೇಳಿಕೆಯನ್ನು ಖಂಡಿತವಾಗಿಯೂ ಕಳಿಸುತ್ತೀ ಎಂದು ನನ್ನ ನಂಬಿಕೆ' ಎಂದನು.

ರುಬಷೊವ ಎದ್ದು ನಿಂತನು, ಐವನೊವನೂ ರುಬಷೊವಗೆ ಒಂದು ತಲೆ ಎತ್ತರವಾಗಿ ಎದ್ದು ನಿಂತನು. ಡೆಸ್ಕಿನ ಬಳಿಯ ವಿದ್ಯುತ್ತಿನ ಗಂಟೆಯನ್ನು ಒತ್ತಿ, ಕಾವಲುಗಾರನು ರುಬಷೊವನನ್ನು ಒಯ್ಯಲು ಬರುವುದಕ್ಕೆ ಮುನ್ನ 'ಕೆಲ ತಿಂಗಳುಗಳ ಹಿಂದೆ ನೀನು ಬರೆದ ನಿನ್ನ ಕೊನೆಯ ಲೇಖನದಲ್ಲಿ ಮುಂದಿನ ಹತ್ತು ವರ್ಷಗಳು ಪ್ರಪಂಚದ ಇಡೀ ಯುಗದ ಭವಿಷ್ಯವನ್ನು ನಿರ್ಣಯಿಸುವುವು ಎಂದು ಬರೆದಿದ್ದಿ. ಅಂಥ ಸ್ವರ್ಣ

ಯುಗದಲ್ಲಿ ಜೀವಿಸಿರಬೇಕೆಂಬ ಇಚ್ಛೆ ಇಲ್ಲವೆ ನಿನಗೆ?' ಎಂದು ಕೇಳಿ ಐವನೊವ ಮಂದಹಾಸವನ್ನು ಬೀರಿದನು.

ಹೊರಗಿನ ನಡವೆಯಲ್ಲಿ ಹೆಜ್ಜೆಗಳ ಸದ್ದು ಸಮೀಪಕ್ಕೆ ಬರುತಿತ್ತು. ಇಬ್ಬರು ಕಾವಲುಗಾರರು ಒಳ ಬಂದು ಪ್ರಣಾಮಮಾಡಿದರು. ಮೌನ ವಾಗಿ ರುಬಷೊವ ಅವರ ಮಧ್ಯೆ ಹೋಗಿ ನಿಂತನು. ಕೋಣೆಯ ಕಡೆಗೆ ಆ ಮೂವರು ನಡೆದರು. ನಡವೆಯಲ್ಲಿ ಸದ್ದು ಅಡಗಿತ್ತು; ಕೆಲವು ಕೋಣೆಗಳಿಂದ ಗೊರಕೆ ಹೊಡೆಯುವ ಸದ್ದು ನೋವಿನಿಂದ ನರಳುವ ಧ್ವನಿಯಂತೆ ಕೇಳಿ ಬರುತ್ತಿತ್ತು. ಕಟ್ಟಡದಲ್ಲಿ ಎಲ್ಲೆಲ್ಲೂ ಹಳದಿ ಬಣ್ಣದ ವಿದ್ಯುದ್ದೀಪಗಳು ಉರಿಯುತಿದ್ದುವು.

# ದ್ವಿತೀಯ ವಿಚಾರಣೆ

ಧರ್ಮದ ಜೀವ ಜೀವಾಳಕ್ಕೆಯೆ ಸಂಚಕಾರ ಬರುವ ಅಪಾಯಕಾರಿ ಪ್ರಸಂಗದಲ್ಲಿ ಧರ್ಮ ಸಂಸ್ಥೆಗಳನ್ನು ನೀತಿಯ ಬಂಧನದಿಂದ ಮುಕ್ತಗೊಳಿಸಬೇಕಾಗುತ್ತದೆ. ಐಕ್ಯವು ನಮ್ಮ ಲಕ್ಷ್ಯವಾಗಿರುವಾಗ ಕುತಂತ್ರ, ದ್ರೋಹ, ಹಿಂಸೆ, ಧರ್ಮದ ವ್ಯಾಪಾರ, ಕಾರಾಗೃಹ, ಕೊಲೆ ಮುಂತಾದ ವಿಧಾನ ಮತ್ತು ಸಾಧನದ ಉಪಯೋಗವು ಪವಿತ್ರವೆನಿಸುವುದು. ಎಲ್ಲ ನಿಯಂತ್ರಣವೂ ಸಮಾಜಹಿತಾರ್ಥವಾಗಿಯೇ ಇರುವುದು. ಸಮೂಹದ ಒಳ್ಳಿತಿಗಾಗಿ ವ್ಯಕ್ತಿಯನ್ನು ಬಲಿಕೊಡತಕ್ಕದು.

**ಡೀಟ್ರಿಚ್ ವೊನ್ ನೈಹೀಮ್**
ವರ್ದೆನ ಬಿಷಪರು
ಡಿಸ್ಕಿಸ್ಮಟಿ ಲಿಬ್ರಿ III , ಕ್ರಿಸ್ತಶಕ ೧೪೧೧.

೧

ನಿ. ಪ. ರುಬಷೊವನ ದಿನಚರಿಯಿಂದ ಅವನು ಸೆರೆಮನೆಗೆ ಸೇರಿದ ಐದನೆಯ ದಿವಸದ ಹಾಳೆಗಳಿಂದ ಉದ್ಧೃತ:

'........ಅಂತಿಮ ಸತ್ಯವೆನ್ನುವುದು ಉಪಾಂತದಲ್ಲಿ ಯಾವಾಗಲೂ ಸುಳ್ಳೇ ಆಗಿರುವುದು. ಅಂತ್ಯದಲ್ಲಿ ಯಾರು ಸರಿ ಎಂದು ನಿರ್ಣಯಿಸಲ್ಪಡುವನೋ ಅವನು ಉಪಾಂತದಲ್ಲಿ, ಅಂದರೆ ಅದಕ್ಕೆ ಸ್ವಲ್ಪ ಹಿಂದೆ, ತಪ್ಪಿತಸ್ಥನೆಂದೂ ಉಪದ್ರವಕಾರಿಯೆಂದೂ ಪರಿಗಣಿಸಲ್ಪಡುವನು.

'ಆದರೆ ಯಾರು ಸರಿ ಎಂಬ ನಿರ್ಣಯವು ಹೊರ ಬೀಳುವುದು ಬಹುಕಾಲ ಕಳೆದ ಮೇಲೆ ಅಲ್ಲಿಯ ವರೆಗೆ ಇತಿಹಾಸವು ತನಗೆ ವಿಮೋಚನೆಯನ್ನು ಕೊಡುವುದೆಂಬ ಆಸೆಯಿಂದ ಆತನು ತನ್ನ ಆತ್ಮವನ್ನು ಸೈತಾನನಿಗೆ ಮಾರಿ ಸಾಲ ತೆಗೆದುಕೊಂಡು ಜೀವಿಸುವವನಂತೆ ಕಾರ್ಯಾಚರಣೆ ಮಾಡತಕ್ಕದು.

'ಒಂದನೆಯ ನಂಬರಿನವನ ಹಾಸಿಗೆಯ ಪಕ್ಕದಲ್ಲಿ ಯಾವಾಗ ನೋಡಿದರೂ ಮಕಿಯವಲ್ಲಿ ಬರೆದ 'ರಾಜಕುಮಾರ' ಎಂಬ ಗ್ರಂಥವು ಬಿದ್ದಿರುತ್ತದೆಂದು ಹೇಳುತ್ತಾರೆ. ಅದು ಅವನಿಗೆ ಹೇಳಿಸಿದ ಪುಸ್ತಕ: ರಾಜಕೀಯ ನೀತಿಯ ವಿಚಾರವಾಗಿ ಅದಕ್ಕಿಂತ ಮುಖ್ಯವಾದ ವಿಷಯಗಳನ್ನು ಯಾರು ಹೇಳಿದ್ದಾರೆ? ಹತ್ತೊಂಭತ್ತನೆಯ ಶತಮಾನದ 'ನಿಷ್ಪಕ್ಷಪಾತತನ'ವೆಂಬ ಉದಾರ ನೀತಿಯ ಸ್ಥಾನದಲ್ಲಿ ಇಪ್ಪತ್ತನೆಯ ಶತಮಾನದ ಕ್ರಾಂತಿಕಾರಿ ನೀತಿಯನ್ನು ನಾವು ನಿಲ್ಲಿಸಿದೆವು. ಅದೂ ಸರಿಯೆ. ಕ್ರಿಕೆಟ ಆಟದ ನಿಯಮಗಳಂತೆ ಕ್ರಮಬದ್ಧವಾಗಿ ಕ್ರಾಂತಿ ನಡೆಯಬೇಕೆನ್ನುವುದು ಅಸಂಬದ್ಧ ಪ್ರಲಾಪ. ಇತಿಹಾಸವು ಉಸಿರು ಬಿಡುವ.—ವಿಶ್ರಾಂತಿಯಲ್ಲಿರುವ—ಸಂದರ್ಭಗಳಲ್ಲಿ ರಾಜಕೀಯವು ಸಾಪೇಕ್ಷವಾಗಿ ಯಾವದೂ ನಿಷ್ಪಕ್ಷಪಾತಿಯಾಗಿರಲು ಸಾಧ್ಯವುಂಟು: ಆದರೆ ಇತಿಹಾಸದ

ದಿಕ್ಕೇ ಬದಲಾಗುವ ಉತ್ಕಟಕಾಲದಲ್ಲಿ ಹಳೆಯ ನಿಷ್ಪಕ್ಷಪಾತತನಕ್ಕೆ ಅವಕಾಶವೇ ಇಲ್ಲ. ನಮ್ಮ ಗುರಿಯನ್ನು ಸಾಧಿಸುವುದಕ್ಕಾಗಿ ಏನನ್ನೂ ಮಾಡಬಹುದು. ಉದ್ದೇಶವು ನೆರವೇರಿದರೆ ಸಾಕು, ಸಾಧನವು ಹೇಗಿದ್ದರೂ ಚಿಂತಿಲ್ಲ. ನಾವು ಈ ದೇಶದ ನವೀನ ಮಕಿಯವೆಲ್ಲಿವಾದವನ್ನು ಪ್ರಚಾರಿಸಿದ್ದೇವೆ; ಆದರೆ ಕ್ರಾಂತಿಪ್ರತಿಗಾಮಿಗಳಾದ ಸರ್ವಾಧಿಕಾರಿ ರಾಷ್ಟ್ರಗಳು ಮಕಿಯವೆಲ್ಲಿಯನ್ನು ಅಸಹ್ಯವಾಗಿ ಅನುಕರಿಸಿದ್ದಾರೆ. ಇಡಿ ವಿಶ್ವಕ್ಕೆ ಅನ್ವಯಿಸುವ ವಿಚಾರ ಪ್ರಣಾಲಿಯ ಸಮರ್ಥನೆಗೋಸ್ಕರ ನಾವು ನವ-ಮಕಿಯವೆಲ್ಲಿವಾದವನ್ನು ಒಪ್ಪಿಕೊಂಡುದು ನಮ್ಮ ದೊಡ್ಡತನಕ್ಕೆ ಸಾಕ್ಷಿ; ಇತರರು ರಾಷ್ಟ್ರೀಯ ಭಾವನಾವೇಗದ ಪುಷ್ಟಿಗಾಗಿ ಈ ವಾದವನ್ನು ಪುರಸ್ಕರಿಸಿ ಎಷ್ಟೋ ಕಾಲಕ್ಕೆ ಹಿಂದೆ ಯಶಸ್ವಿಯಾಗುವ ಕೆಲಸವನ್ನು ಈಗ ಮಾಡಲು ಮುಂದಾಗಿದ್ದಾರೆ. ಆದುದರಿಂದಲೇ ಇತಿಹಾಸದಲ್ಲಿ **ಕಟ್ಟ ಕೊನೆಯದಾಗಿಯಾದರೂ** ನಮಗೆ ವಿಮೋಚನೆ ದೊರೆಯುವುದು, ಅವರಿಗೆ ದೊರೆಯಲಾರದು........

'ಆದರೆ ಸದ್ಯ ನಮ್ಮ ಆಚರಣೆಯೂ, ವಿಚಾರವೂ ಸಾಲದಿಂದಲೇ ನಡೆಯಬೇಕಾಗಿದೆ. ಕ್ರಿಕೆಟ್ ನೀತಿಯ ಸಂಪ್ರದಾಯಗಳನ್ನು, ನಾವು ನಿರಾಕರಿಸಿರುವ ದೆಸೆಯಿಂದ ನಮಗೆ ಬುದ್ಧಿಜನ್ಯ ತರ್ಕದ ಪ್ರಮಾಣದ ಹೊರತು ಬೇರೆ ಮಾರ್ಗದರ್ಶಕ ಸೂತ್ರವು ಇಲ್ಲವಾಗಿದೆ: ನಮ್ಮ ಆಲೋಚನೆಯನ್ನು ಅದರ ತಾರ್ಕಿಕ ಅಂತ್ಯದವರೆಗೊಯ್ದು ಆ ಪ್ರಕಾರವಾಗಿ ವರ್ತಿಸಬೇಕಾದ ಭೀಕರ ಒತ್ತಾಯಕ್ಕೊಳಗಾಗಿ ನಾವು ಕೆಲಸ ಮಾಡಬೇಕಾಗಿದೆ. ನಾವು ನಿಲುಭಾರವಿಲ್ಲದೆಯೆ ಹಡಗನ್ನು ತೇಲಬಿಟ್ಟಿದ್ದೇವೆ; ಆದ್ದರಿಂದ ಚುಕ್ಕಾಣಿಯನ್ನು ಸ್ವಲ್ಪ ಮುಟ್ಟಿದರೂ ಸರಿಯೆ ನಮಗೆ ಜೀವನ-ಮರಣದ ಪ್ರಶ್ನೆ ಉದ್ಭವಿಸುತ್ತದೆ.

'ಸ್ವಲ್ಪ ಸಮಯದ ಹಿಂದೆ ಕೃತಕ ನೈಟ್ರೇಟ್ ಗೊಬ್ಬರವು ಪೊಟ್ಯಾಷಿಗಿಂತ ಶ್ರೇಷ್ಠವೆಂಬ ಅಭಿಪ್ರಾಯವನ್ನು ಸಮರ್ಥಿಸಿದನೆಂದು ನಮ್ಮ ಪ್ರಮುಖ ಕೃಷಿತಜ್ಞ 'ಬಿ'ಯನ್ನೂ ಅವನ ಮೂವತ್ತು ಮಂದಿ ಸಹೋದ್ಯೋಗಿಗಳನ್ನೂ ಗುಂಡಿಟ್ಟು ಕೊಲ್ಲಲಾಯಿತು. ಒಂದನೆಯ

ನಂಬಿರಿನವನು ಪ್ರೊಟ್ಯಾಷಿನ ಪಕ್ಷ ವಹಿಸಿದುದರಿಂದ 'ಬಿ' ಮತ್ತು ಅವನ ಸಂಗಡಿಗರು ಒಳಸಂಚಿನ ಅಪಾದನೆಯನ್ನು ಹೊತ್ತು ಗುಂಡಿನ ಬಾಯಿಗೆ ತುತ್ತಾಗಬೇಕಾಯಿತು. ರಾಷ್ಟ್ರೀಕೃತ ಕೇಂದ್ರಿತ ಕೃಷಿ ಮಂಡಲಿನಲ್ಲಿ, ನೈಟ್ರೇಟ್ ಮತ್ತು ಪೊಟ್ಯಾಷ್ ಯಾವುದು ಉತ್ತಮವೆಂಬ ಪ್ರಶ್ನೆ ಬಹಳ ಮಹತ್ವದ್ದಾಗಿದೆ. ಮುಂದಿನ ಯುದ್ಧವು ಅದರ ತೀರ್ಮಾನವನ್ನು ಹೊಂದಿಕೊಂಡಿರಬಹುದು. ಒಂದನೆಯ ನಂಬರಿನವನ ಅಭಿಪ್ರಾಯವು ಸರಿಯಾಗಿದ್ದಲ್ಲಿ ಇತಿಹಾಸವು ಅವನನ್ನು ನಿರ್ದೋಷಿಯೆಂದು ವಿಮೋಚನೆ ಗೊಳಿಸುತ್ತದೆ, ಮೂವತ್ತೊಂದು ಜನರ ಹತ್ಯೆಯನ್ನು ದಂತಕಥೆ ಎಂದು ವಿಸರ್ಜಿಸುತ್ತದೆ. ಅವನ ಅಭಿಪ್ರಾಯವು ಎಲ್ಲಾದರೂ ತಪ್ಪಾಗಿದ್ದರೋ............

'ಅದೊಂದೇ ಮುಖ್ಯವಾದ ವಿಷಯ: ವಸ್ತುನಿಷ್ಠ ಸತ್ಯವನ್ನು ಕಂಡವರು ಯಾರು ಎಂಬುದು. ಕ್ರಿಕೆಟ್‌ನೀತಿಯ ಪುರಸ್ಕರ್ತರಿಗೆ ತೋರುವ ಸಮಸ್ಯೆಯೇ ಬೇರೆ: 'ಬಿ'ಯು ನೈಟ್ರೇಟನ್ನು ತನ್ನ ಮನಃ ಸಾಕ್ಷಿಗೆ ಸರಿಯಾಗಿ ಶಿಫಾರಸು ಮಾಡಿದ್ದಾನೋ ಇಲ್ಲವೋ ಎಂಬುದು. ಇಲ್ಲವಾದರೆ ನೈಟ್ರೇಟೇ ಒಳ್ಳೆಯದು ಎಂದು ತರುವಾಯ ಖಚಿತವಾಗಿ ಕಂಡುಬಂದರೂ, ಅವರ ನೀತಿಯ ಪ್ರಕಾರ ಅವನನ್ನು ಕೊಲ್ಲಬಹುದೆಂದು ಸಿದ್ಧವಾಗುತ್ತದೆ. ಅವನು ಪ್ರಾಮಾಣಿಕನಾಗಿದ್ದರೆ ದೇಶವು ಹಾಳಾದರೂ ಚಿಂತಿಲ್ಲ ಎಂದುಕೊಂಡು ಅವನನ್ನು ನಿರ್ದೋಷಿ ಯೆಂದು ತಿಳಿದು ಅವನಿಗೆ ನೈಟ್ರೇಟ್ ವಿಚಾರದಲ್ಲಿ ದೇಶವಲ್ಲೆಲ್ಲ ಪ್ರಚಾರ ಮಾಡಲು ಸಂದರ್ಭವನ್ನೊದಗಿಸತಕ್ಕದು............

'ಹೀಗೆ ಮಾಡುವುದು ಅರ್ಥಶೂನ್ಯವಾದ ವಿಚಾರವೇ ಆಗಿರ ಬಹುದು. ಮನಃಸಾಕ್ಷಿಯ ಪ್ರಶ್ನೆಯಲ್ಲಿ ನಮಗೆ ಅಭಿರುಚಿ ಇಲ್ಲ. ತಪ್ಪಿದವನು ದಂಡ ತೆರಬೇಕು, ನಿರ್ದೋಷಿಗೆ ವಿಮೋಚನೆ ಹೇಗೂ ದೊರೆಯುತ್ತದೆ: ಐತಿಹಾಸಿಕ ಋಣದ ನಿಯಮ ಇದು. ಇದೇ ನಮ್ಮ ನಿಯಮವೂ ಆಗಿತ್ತು.

ಹೆಚ್ಚಾಗಿ ಸತ್ಯಕ್ಕಿಂತಲೂ ಅಸತ್ಯವೇ ಪ್ರಯೋಜನಕಾರಿ ಎಂದು ಇತಿಹಾಸವು ನಮಗೆ ಪಾಠ ಕಲಿಸಿದೆ. ಏಕೆಂದರೆ ಸೋಮಾರಿಯೂ

ಜಡನೂ ಆಗಿರುವ ಮನುಷ್ಯನು ಪ್ರತಿ ಹೆಜ್ಜೆ ಮುಂದಿಡಬೇಕಾದರೂ ಅವನನ್ನು ನಲ್ವತ್ತು ವರ್ಷ ಮರುಭೂಮಿಯಲ್ಲಿ ಪಥ ಪ್ರದರ್ಶನ ಮಾಡಿಸಬೇಕಾಗುತ್ತದೆ. ಅವನು ಸಮಯಕ್ಕೆ ಮೊದಲೇ ವಿಶ್ರಾಂತಿಗೆ ಬಯಸಿ ಸಂಪತ್ತನ್ನು ನಿರೀಕ್ಷಿಸುತ್ತ ಹೊತ್ತು ಕಳೆಯದಂತೆ, ಅವನನ್ನು ಹೆದರಿಸುತ್ತಲೂ ಆಸೆ ತೋರಿಸುತ್ತಲೂ ಕಾಲ್ಪನಿಕ ಹೆದರಿಕೆ ಮತ್ತು ಸಮಾಧಾನಗಳನ್ನುಂಟುಮಾಡಿ— ಮರುಭೂಮಿಯಲ್ಲಿ ಅಟ್ಟಿಕೊಂಡು ಹೋಗಬೇಕಾಗುತ್ತದೆ.

ನಾವು ಇತಿಹಾಸವನ್ನು ಇತರರಿಗಿಂತ ಹೆಚ್ಚು ಕೂಲಂಕಷವಾಗಿ ಅಭ್ಯಾಸಮಾಡಿದ್ದೇವೆ. ತಾರ್ಕಿಕ ಸಾಮಂಜಸ್ಯ ನಮ್ಮ ವಾದದ ಹೆಗ್ಗುರುತು, ಇತರರಿಂದ ನಮ್ಮನ್ನು ಪ್ರತ್ಯೇಕವಾಗಿಡುವ ಗುರುತು. ಇತಿಹಾಸಕ್ಕೆ ಶೀಲದ ಗೊಡವೆಯೇ ಇಲ್ಲವೆಂದೂ, ಎಷ್ಟೋ ಅಪರಾಧಗಳಿಗೆ ದಂಡನೆ ಇಲ್ಲವೆಂದೂ ನಮಗೆ ಗೊತ್ತು. ಆದರೆ ಪ್ರತಿಯೊಂದು ತಪ್ಪಿಗೂ ಪರಿಣಾಮವಿದೆ ಎಂದೂ, ಏಳೇಳು ಜನ್ಮಗಳಲ್ಲಿಯೂ ಈ ಪರಿಣಾಮವು ಬೆನ್ನು ಬಿಡಲಾರದೆಂದೂ ನಾವು ತಿಳಿದಿದ್ದೇವೆ. ಆದುದರಿಂದ ತಪ್ಪನ್ನು ತಡೆಯುವುದಕ್ಕೂ ತಪ್ಪಿನ ಬೀಜವನ್ನೇ ನಾಶಮಾಡುವುದಕ್ಕೂ ನಾವು ಬದ್ಧ ಕಂಕಣರಾದೆವು. ಮಾನವ ಕೋಟಿಯ ಭವಿಷ್ಯವನ್ನು ರೂಪಿಸಲು ಇಷ್ಟೊಂದು ಶಕ್ತಿಯನ್ನು ಇಷ್ಟು ಕಡಮೆ ಜನರ ಕೈಯಲ್ಲಿ ಕೊಟ್ಟ ನಿದರ್ಶನಗಳು ಇತಿಹಾಸದಲ್ಲೇ ಈ ವರೆಗೆ ಇಲ್ಲ. ನಾವು ಅನುಸರಿಸುವ ಪ್ರತಿ ತಪ್ಪೆಣಿಕೆಯೂ ಮುಂದಿನ ಜನಾಂಗಗಳಿಗೆ ನಾವು ಮಾಡುವ ಮಹಾಪರಾಧವಾಗಿದೆ. ಆದುದರಿಂದ ತಪ್ಪಾದ ವಿಚಾರಗಳನ್ನೂ—ಕೊಲೆಗಾರರನ್ನು ಹೇಗೋ ಹಾಗೆ—ಮರಣದಂಡನೆಯಿಂದಲೇ ಶಿಕ್ಷಿಸಬೇಕೆಂಬುದು ನಮ್ಮ ನಿರ್ಧಾರವಾಗಿದೆ. ಪ್ರತಿಯೊಂದು ವಿಚಾರವನ್ನು ಅದರ ಅಂತಿಮ ಪರಿಣಾಮದ ತನಕವೂ ಯೋಚಿಸಿ ತದನುಕೂಲವಾಗಿ ವರ್ತಿಸುತ್ತಿದ್ದ ನಮಗೆ ಹುಚ್ಚರೆಂಬ ಬಿರುದು ಅಂಟಿಕೊಂಡಿತು. ಮುಂಬರುವ ಅತಿ-ಮಾನವ ಜೀವನದ ಸಂಪೂರ್ಣ ಜವಾಬ್ದಾರಿಯ ಹೊರೆ ನಮ್ಮ ತಲೆಯಮೇಲಿದೆ ಎಂಬ ಭಾವನೆಯಿಂದ ನಾವು ಪುಲಕಿತರಾಗುತ್ತಿದ್ದುದರಿಂದ ನಮ್ಮನ್ನು ಸ್ವೈಮಿನ್ ದೇವ

'ಇನ್‌ಕ್ವಿಸಿಷನ್' ನ್ಯಾಯಾಲಯಕ್ಕೆ ಹೋಲಿಸಿದ್ದಾರೆ. ನಿಜ, ಭೀಕರವಾದ ಆ ನ್ಯಾಯಾಲಯದ ನ್ಯಾಯಮೂರ್ತಿಗಳಂತೆ, ನಾವಾದರೂ ವ್ಯಕ್ತಿಯ ಆಚರಣೆಯಲ್ಲಿ ಮಾತ್ರವಲ್ಲದೆ ಆತನ 'ಆಲೋಚನೆಯಲ್ಲಿಯೂ ಇರತಕ್ಕ ದೌಷ್ಟ್ಯದ ಬೀಜವನ್ನು ಅಣಗಿಸಲು ಯತ್ನಿಸಿರುವೆವು. ನಮ್ಮ ದೃಷ್ಟಿಯಲ್ಲಿ ಖಾಸಗೀ ವಿಭಾಗವೆಂಬುದೇ ಇರಲಿಲ್ಲ; ಮನುಷ್ಯನ ತಲೆ ಬುರುಡೆಯೊಳಗೂ ಖಾಸಗೀ ವಿಭಾಗವು ಇಲ್ಲವೆಂದೇ ನಮ್ಮ ಅಭಿಮತ. ಪ್ರತಿಯೊಂದನ್ನು ಅದರ ಅಂತಿಮ ಪರಿಣಾಮದ ಗೆರೆ ಮುಟ್ಟಿಸಬೇಕೆಂಬ ಒತ್ತಾಸೆಯಲ್ಲಿ ನಾವು ಬದುಕಿದವರು. ನಮ್ಮ ಮಾನಸಿಕ ಒತ್ತಡವು ಅತಿರೇಕವಾಗಿದ್ದ ದೆಸೆಯಿಂದ ಕಿಂಚಿತ್ ಆಘಾತವಾದರೂ ಸರಿಯೇ ವಿದ್ಯುತ್ತಿನ ವರ್ತುಲದಂತೆ ನಮ್ಮಲ್ಲಿಯೂ 'ಷಾರ್ಟ ಸರ್ಕ್ಯೂಟ' ಆಗಿ ಬಿಡುತ್ತಿತ್ತು. ಹೀಗಾಗಿ ಅನ್ಯೋನ್ಯ ವಿನಾಶವು ನಮ್ಮ ವಿಧಿಯೆಂದು ನಮಗೆ ಮೊದಲೇ ಖಚಿತವಾಗಿತ್ತು.

'ಅಂಥ ಜನರಲ್ಲಿ ನಾನೂ ಒಬ್ಬನಾಗಿದ್ದೆ. ನನ್ನ ಆಚರಣೆ ಮತ್ತು ಆಲೋಚನೆ ಯಾರಿಂದಲೋ ವಿಧಿಸಲ್ಪಟ್ಟಂತೆ ನಡೆಯಿತು. ನನ್ನ ಪ್ರೀತಿಯ, ವಿಶ್ವಾಸದ ಜನರನ್ನು ನಾನು ಕೊಂದಿದ್ದೇನೆ; ನನಗೆ ಆಗದವರಿಗೆ ಅಧಿಕಾರ ದಯಪಾಲಿಸಿದ್ದೇನೆ. ಇತಿಹಾಸವು ನಾನು ಮೊದಲಿದ್ದ ಸ್ಥಾನದಲ್ಲೇ ನನ್ನನ್ನು ಈಗಲೂ ಇರಿಸಿದೆ. ಇತಿಹಾಸವು ಕರುಣಿಸಿದ ಸಾಲದ ಮೊತ್ತವನ್ನು ನಾನು ಈಗಾಗಲೇ ವೆಚ್ಚ ಮಾಡಿದ್ದಾಯಿತು. ನನ್ನ ನಡತೆ ಸರಿಯೆಂದಾದಲ್ಲಿ ನಾನು ಪಶ್ಚಾತ್ತಾಪಪಡುವ ಅಗತ್ಯವಿಲ್ಲ; ತಪ್ಪಾದಲ್ಲಿ ನಾನು ಶುಲ್ಕವನ್ನು ತೆತ್ತೇ ತೀರುವೆನು.

'ಆದರೆ ಇನ್ನು ಮುಂದೆ ಯಾವುದು ಸತ್ಯವೆಂದು ತೀರ್ಮಾನವಾಗಬಹುದೆಂದು ಈಗ ಹೇಗೆ ತಾನೆ ನಿರ್ಣಯಿಸಲು ಸಾಧ್ಯ? ಹೌದು. ನಾವು ಪ್ರವಾದಿಗಳ ಪ್ರತಿಭೆಯಿಲ್ಲದೆಯೆ ಪ್ರವಾದಿಗಳಾಗಲು ಹೊರಟಿದ್ದೇವೆ. ದರ್ಶನದ ಸ್ಥಾನದಲ್ಲಿ ನಾವು ತಾರ್ಕಿಕ ಅನುಮಾನವನ್ನು ನಿಲ್ಲಿಸಿದೆವು; ಹೊರಟ ಸ್ಥಳ ಒಂದೇ ಆಗಿದ್ದರೂ ನಮಗೆ ದೊರೆತ ಪರಿಣಾಮ ಬೇರೆ ಬೇರಾಯಿತು. ಒಂದು ಪ್ರಮಾಣವನ್ನು ಇನ್ನೊಂದು ಪ್ರಮಾಣವು ಸುಳ್ಳಾಗಿಸಿದುದರ ಫಲವಾಗಿ ಕೊನೆಯಲ್ಲಿ ನಂಬಿಕೆಯು

ಕಡೆಗೇ ಮರಳಬೇಕಾಯಿತು; ನಮ್ಮ ತರ್ಕವೇ ಸರಿಯಾದ್ದೆಂಬ ನಂಬಿಕೆ ಯನ್ನು ಕಟ್ಟಿಕೊಳ್ಳಬೇಕಾಯಿತು. ಇದೀಗ ಪ್ರಾಮುಖ್ಯವಾದ ಘಟ್ಟ ವೆನ್ನಬೇಕು. ನಮ್ಮ ನೌಕೆ ಈಗ ನಿಂತಿರುವುದು ಕೇವಲ ಒಂದು ಲಂಗ ರಿನ ಆಧಾರದಿಂದ: ನಮ್ಮ ಮೇಲೆ ನಮಗೆ ಇರುವ ನಂಬಿಕೆಯೇ ಆ ಲಂಗರು. ಮಾನವ ತರ್ಕದ ಪರಮ ಸಾಕ್ಷಾತ್ಕಾರವನ್ನು ಜ್ಯಾಮಿತಿ ಶಾಸ್ತ್ರದಲ್ಲಿ ಕಾಣಲಾಗುವುದಂತೆ; ಆದರೆ ಯೂಕ್ಲಿಡನ ತತ್ವಗಳನ್ನು ಪ್ರಮಾಣೀಕರಿಸಲು ಯಾರಿಂದ ಸಾಧ್ಯ? ಅವನ್ನು ನಂಬದಿದ್ದರೆ ಇಡಿ ರೇಖಾಗಣಿತದ ಕಟ್ಟಡವೇ ಕುಸಿಯುವಂತೆ ತೋರಬಹುದು. ಒಂದನೆಯ ನಂಬರಿನವನಿಗೆ ಅಚಲವಾದ, ಭದ್ರವಾದ, ಆತ್ಮ ವಿಶ್ವಾಸ ವಿದೆ. ಎಲ್ಲರ ಲಂಗರು ಸಂಕಲೆಗಳಿಗಿಂತ ಆತನದು ಗಟ್ಟಿಮುಟ್ಟಾಗಿದೆ. ನನ್ನದು ಈಚೆಗೆ ಕೆಲವು ವರ್ಷಗಳಿಂದ ಜೀರ್ಣವಾಗಿ ಕ್ಷೀಣವಾಗಿದೆ.

'ನನ್ನ ನಿರ್ದೋಷತ್ವದ ಮೇಲೆ ನನಗಿದ್ದ ಅಚಲ ವಿಶ್ವಾಸವು ಇಂದಿ ಲ್ಲವಾಗಿದೆ. ಆದುದರಿಂದ ನನ್ನ ಕತೆ ಇನ್ನು ಮುಗಿದಂತೆಯೆ.

## ೨

ರುಬಷೊವನ ಪ್ರಥಮ ವಿಚಾರಣೆಯ ಮರುದಿನ ವಿಚಾರಣೆ ನಡೆ ಸುವ ನ್ಯಾಯಾಧಿಕಾರಿ ಐವನೊವ ಮತ್ತವನ ಸಂಗಾತಿ ಗ್ಲೆಟ್‌ಕಿನ್ ಊಟ ಮುಗಿಸಿ ಕೆಂಟೀನಿನಲ್ಲಿ ಕೂತಿದ್ದರು. ಐವನೊವ ಬಹಳ ಆಯಾಸ ಗೊಂಡಿದ್ದನು; ಅವನು ಕೃತಕ ಕಾಲುಗಳನ್ನು ಇನ್ನೊಂದು ಕುರ್ಚಿಯ ಮೇಲೆ ಇರಿಸಿದ್ದನು ಮತ್ತು ಕೊರಳಿನ ಕಾಲರನ್ನು ಸಡಿಲ ಮಾಡಿದ್ದನು. ಕೆಂಟೀನಿನಲ್ಲಿ ದೊರೆಯುವ ಅಗ್ಗ ಬೆಲೆಯ ದ್ರಾಕ್ಷಾರಸವನ್ನು ಪಾತ್ರೆಗೆ ಸುರಿದುಕೊಂಡು, ಚೆನ್ನಾಗಿ ಇಸ್ತ್ರಿ ಹಾಕಿ ಪರಪರನೆಂದು ಧ್ವನಿ ಮಾಡು ತ್ತಿದ್ದ ಸಮವಸ್ತ್ರವನ್ನು ಧರಿಸಿ ತನ್ನ ಮುಂದೆಯೇ ಆಸೀನನಾಗಿದ್ದ ಗ್ಲೆಟ್ ಕಿನ್ನನ್ನು ಮೌನವಾಗಿ ದಿಟ್ಟಿಸಿದನು. ಗ್ಲೆಟ್‌ಕಿನ್ ತನ್ನ ರಿವಾಲ್ವರ ಬೆಲ್ಟನ್ನು ಕೂಡ ಕಳಚಿರಲಿಲ್ಲ. ಆತ ಅವನ ದ್ರಾಕ್ಷಾರಸದ ಪಾತ್ರೆಯನ್ನು ಬರಿದು ಮಾಡಿದನು. ಬೋಳಾಗುವಂತೆ ಕ್ಷೌರ ಮಾಡಿದ್ದ ತಲೆಯಲ್ಲಿ

ಗಾಯದ ಕಲೆಯೊಂದು ಕೆಂಪು ಗೆರೆಯಂತೆ ಕಾಣುತಿತ್ತು. ಅವರಲ್ಲದೆ ದೂರದ ಒಂದು ಮೇಜಿನಲ್ಲಿ ಬೇರೆ ಮೂವರು ಅಧಿಕಾರಿಗಳು ಇದ್ದರು--ಇಬ್ಬರು ಚೆಸ್ ಆಡುತ್ತಿದ್ದರು; ಒಬ್ಬನು ನೋಡುತ್ತ ಕೂತಿದ್ದನು.

'ರುಬಷೊವನ ಕಥೆ ಏನಾದೀತು?' ಎಂದು ಗ್ಲೆಟ್‌ಕಿನ್ ಕೇಳಿದನು.

'ಈಗೇನೋ ಸ್ವಲ್ಪ ಗಟ್ಟಿ ನಿಂತಿದ್ದಾನೆ. ಆದರೆ ಚಿಂತಿಲ್ಲ, ತರ್ಕಬದ್ಧವಾಗಿಯೇ ಮಾತಾಡುತ್ತಿರುವುದರಿಂದ ಕೊನೆಗಂತೂ ಶರಣು ಬಂದಾನೆಂದು ತೋರುತ್ತದೆ' ಎಂದು ಐವನೊವ ಉತ್ತರಿಸಿದನು.

'ನನಗೆ ನಂಬಿಕೆಇಲ್ಲ' ಎಂದ ಗ್ಲೆಟ್‌ಕಿನ್.

'ನನಗಿದೆ. ಎಲ್ಲವನ್ನೂ ತರ್ಕಬದ್ಧವಾದ ಪರಿಣಾಮಕ್ಕೆ ಮುಟ್ಟಿಸಿದ ತರುವಾಯ ಆತ ಶರಣುಬಂದೇ ಬರುತ್ತಾನೆ. ಆದುದರಿಂದ ಅವನಿಗೆ ತೊಂದರೆ ಕೊಡದೆ ಇದ್ದಂತೆ ಇರಲು ಬಿಡಬೇಕಾದ್ದು ಅಗತ್ಯ. ಕಾಗದ, ಪೆನ್ಸಿಲು, ಸಿಗರೇಟ್ ಅವನಿಗೆ ಕೊಡಬೇಕೆಂದು ಹೇಳಿದ್ದೇನೆ. ಇದರಿಂದ ಅವನ ಆಲೋಚನೆಯ ಪ್ರಕ್ರಿಯೆಗಳು ಬೇಗ ಬೇಗನೆ ಸಾಗಲು ಅನುಕೂಲವಾಗುವುದು'

'ನೀನು ಮಾಡಿದ್ದು ತಪ್ಪೆಂದು ನನಗನಿಸುತ್ತದೆ'

'ನಿನಗೆ ಅವನನ್ನು ಕಂಡರೆ ಆಗುವುದಿಲ್ಲವೆಂದು ನನಗೆ ಗೊತ್ತು. ಕೆಲವು ದಿನ ಹಿಂದೆ ನೀನು ಅವನ ಹತ್ತಿರ ಏನೋ ಜಗಳ ಕಾದಿ ಎಂದು ನಾನು ಕೇಳಿದೆ.'

ಗ್ಲೆಟ್‌ಕಿನ್ ತನ್ನ ಮತ್ತು ರುಬಷೊವನ ಜಗಳದ ದೃಶ್ಯವನ್ನು ಸ್ಮರಿಸಿಕೊಂಡನು. ಮಂಚದ ಮೇಲೆ ಕೂತು ರುಬಷೊವ ಹರಿದ ಕಾಲುಚೀಲಕ್ಕೆ ಬೂಟುಗಳನ್ನು ಸೇರಿಸಿಕೊಳ್ಳುತ್ತಿದ್ದ ಆ ಚಿತ್ರವನ್ನು ಜ್ಞಾಪಿಸಿಕೊಂಡನು. 'ಜಗಳದಿಂದೇನಾಯಿತು? ಅವನ ವ್ಯಕ್ತಿತ್ವ ಹೇಗಿದ್ದರೇನಂತೆ? ನನಗೆ ಸರಿ ಕಾಣದಿರುವುದು ನೀನು ಅನುಸರಿಸುವ ಮಾರ್ಗ; ಈ ಮಾರ್ಗದಲ್ಲಿ ಆತ ಬಗ್ಗುವನೆಂದು ನನಗೆ ವಿಶ್ವಾಸವಿಲ್ಲ.' ಎಂದ ಗ್ಲೆಟ್‌ಕಿನ್.

'ರುಬಷೊವ ಶರಣು ಬರುವುದು ಅಂಜುಬುರುಕತನದಿಂದಲ್ಲ. ತರ್ಕಪ್ರಾಮಾಣ್ಯದಿಂದ ಎಂಬುದನ್ನು ನೀನೇ ನೋಡುವಿಯಂತೆ. ಕಠೋರತೆಯಿಂದ ಅವನ ಮೇಲೆ ಯಾವ ಪರಿಣಾಮವೂ ಆಗದು. ಬಡಿದಷ್ಟು ಗಟ್ಟಿಯಾಗುವ ಜಾತಿಯ ಪದಾರ್ಥ ಅದು.' ಎಂದು ಐವನೊವ ನುಡಿದನು.

'ಇದು ನಿರರ್ಥಕವಾದ ಮಾತು. ಅತಿಯಾದ ಶಾರೀರಿಕ ವೇದನೆಯನ್ನು ಸಹಿಸಬಲ್ಲ ಮನುಷ್ಯರು ಜಗತ್ತಿನಲ್ಲೇ ಇಲ್ಲ. ನಾನಂತೂ ಕಂಡವನಲ್ಲ. ಮನುಷ್ಯನ ನರಮಂಡಲದ ಶಕ್ತಿಗೆ ದೇವರು ಒಂದು ಮಿತಿಯನ್ನು ನಿರ್ಮಿಸಿದ್ದಾನೆ ಎಂಬುದು ಅನುಭವಸಿದ್ಧ ವಿಚಾರ.'

ಐವನೊವ ತುಸು ಅಶಾಂತಿಯಿಂದ ನಗುತ್ತ 'ನಿನ್ನಂಥವನ ಕೈಗೆ ಬೀಳುವುದು ನನಗಂತೂ ಇಷ್ಟವಿಲ್ಲ. ಅದೇನೇ ಇದ್ದರೂ ನಿನ್ನ ತತ್ವಗಳಿಗೆ ನೀನೇ ಒಂದು ಅಪವಾದವಾಗಿದ್ದೀಯಾ?' ಎಂದು ಹೇಳಿದನು.

ಆತನ ಕಣ್ಣುಗಳಲ್ಲಿ ಹೊಳೆಯುತ್ತಿದ್ದ ನಗು ಒಂದರೆಕ್ಷಣ ಗ್ಲೆಟ್‌ಕಿನನ ತಲೆಯ ಗಾಯದ ಕಲೆಯ ಮೇಲೆ ವಿರಮಿಸಿತು. ಆ ಕಲೆಯ ಕಥೆ ಪ್ರಖ್ಯಾತವಾದುದು. ಯಾದವೀ ಯುದ್ಧದ ಪ್ರಸಂಗದಲ್ಲಿ ಶತ್ರುಗಳು ಗ್ಲೆಟ್‌ಕಿನನಿಂದ ಗುಟ್ಟನ್ನು ತಿಳಿಯಲು ಅವನ ಬೋಳು ತಲೆಯ ಮೇಲೆ ಒಂದು ಮಯಣದ ಬತ್ತಿಯನ್ನು ಉರಿಸಿಟ್ಟಿದ್ದರಂತೆ. ಕೆಲವು ತಾಸುಗಳ ತರುವಾಯ ಸ್ವಪಕ್ಷದ ಜನರು ಗ್ಲೆಟ್‌ಕಿನನ್ನು ಅಚೇತನಾವಸ್ಥೆಯಲ್ಲಿ ಕಂಡಾಗ ಮಯಣದ ಬತ್ತಿ ಸಂಪೂರ್ಣ ಉರಿದು ಹೋಗಿ ತಲೆ ಬುರುಡೆಯ ಒಂದಷ್ಟು ಭಾಗವನ್ನು ಸುಟ್ಟು ಹಾಕಿತ್ತಂತೆ. ಇಷ್ಟಾದರೂ ಗ್ಲೆಟ್‌ಕಿನ್ ಗುಟ್ಟು ಬಿಡಲಿಲ್ಲ.

ಅವಿಚಲವಾದ ಮುಖ ಮುದ್ರೆಯಿಂದ ಐವನೊವನ ಕಡೆಗೆ ನೋಡುತ್ತ ಗ್ಲೆಟ್‌ಕಿನ್ ನುಡಿದನು: 'ಅದೂ ಬರಿಯ ಮಾತಷ್ಟೆ. ನನಗೆ ಮೂರ್ಛೆ ಬಂದದ್ದರಿಂದ ನಾನು ಶತ್ರುಗಳಿಗೆ ಗುಟ್ಟು ಕೊಡುವ ಪ್ರಸಂಗ ತಪ್ಪಿ ಹೋಯಿತು. ಮತ್ತೊಂದು ಕ್ಷಣ ನನಗೆ ಎಚ್ಚರವಿದ್ದಿದ್ದರೆ ನಾನು ಬಾಯಿ ಬಿಟ್ಟೇ ಬಿಡುತ್ತಿದ್ದೆ. ಅದು ಅವರವರ ದೇಹಸ್ಥಿತಿಯ ಮೇಲೆ ಹೊಂದಿ ಕೊಂಡಿದೆ.'

ಪ್ರಯತ್ನ ಪೂರ್ವಕವಾಗಿ ಎಂಬಂತೆ ಗ್ಲೆಟ್‌ಕಿನ್ ಮದ್ಯದ ಪಾತ್ರೆಯನ್ನು ಬರಿದು ಮಾಡಿ ಕೆಳಗಿಟ್ಟನು; ಅವನ ಅಂಗಿಯ ಇಸ್ತ್ರಿ ಒಡೆಯುವ ಧ್ವನಿ ಹೊರಟಿತು. 'ನನಗೆ ಎಚ್ಚರವಾದಾಗ ನಾನು ಶತ್ರುಗಳಿಗೆ ಗುಟ್ಟನ್ನು ಕೊಟ್ಟ ಹಾಗೆ ನನಗೆ ಅನಿಸುತ್ತಿತ್ತು. ಆದರೆ ನನ್ನ ಜತೆಯುಕ್ತರಾದ ಇಬ್ಬರು ಅಧಿಕಾರಿಗಳು ನಾನು ಕೊಡಲಿಲ್ಲ ಎಂದು ಹೇಳಿದರು. ಆದರಿಂದಾಗಿ ನನಗೆ ಸರಕಾರದ ಬಿರುದುಬಾವಲಿಗಳು ದೊರಕಿದುವು. ಹೇಳಿದೆನಲ್ಲ, ಅದೆಲ್ಲ ಅವರವರ ದೇಹಸ್ಥಿತಿಗೆ ಅನುಸರಿಸಿ ನಡೆಯುತ್ತದೆ; ಉಳಿದದ್ದೆಲ್ಲ ಕಟ್ಟುಕತೆ.'

ಐವನೊವ ಮದ್ಯ ಸೇವಿಸುತ್ತಿದ್ದನು. ಅದೇಕೋ ಇಂದವನು ಈ ಹುಳಿರಸವನ್ನೇ ಧಾರಾಳವಾಗಿ ಸೇವಿಸುತ್ತಿದ್ದನು. ಭುಜವನ್ನು ಮೇಲೆ ಹಾರಿಸುತ್ತ 'ಈ ನಿನ್ನ ದೇಹಸ್ಥಿತಿಯ ತತ್ವವನ್ನು ನೀನು ಶೋಧಿಸಿದ್ದು ಯಾವಾಗಲೋ? ಆರಂಭದಲ್ಲಿ ಹೇಗೂ ಈ ದಂಡನಾಮಾರ್ಗಗಳು ಇರಲಿಲ್ಲವೆಂದು ನಿನಗೂ ಗೊತ್ತು. ಆಗ ನಮಗಿನ್ನೂ ಏನೇನೋ ಭ್ರಮೆಗಳಿದ್ದುವೆಂದು ನನಗೆ ತೋರುತ್ತದೆ. ದಂಡನೆಯ ನಿರ್ಮೂಲನ; ಅಸಾಮಾಜಿಕ ಪ್ರವೃತ್ತಿಯ ಜನಗಳಿಗೆ ಉಪವನಗಳುಳ್ಳ ವಿಶ್ರಾಮಧಾಮದ ರಚನೆ--ಹೀಗೆ ಯಾವು ಯಾವುವೋ ಭ್ರಾಂತಿ ಕಲ್ಪನೆಗಳು. ಎಲ್ಲವೂ ಮೋಸ, ಶುದ್ಧ ಮೋಸ' ಎಂದನು.

'ನನಗೆ ಹಾಗನಿಸುವುದಿಲ್ಲ. ನೀನೊಬ್ಬ ನಿರಾಶಾವಾದಿ. ಇನ್ನು ನೂರು ವರ್ಷಗಳಲ್ಲಿ ಅದೆಲ್ಲವೂ ಸಾಧ್ಯವಾಗುವುದು ನಿಶ್ಚಿತ, ಅದಕ್ಕೆ ಮೊದಲು ನಮ್ಮ ದಾರಿ ಸಾಗಬೇಕಲ್ಲವೆ? ಎಷ್ಟು ಶೀಘ್ರ ಸಾಗುವೆವೋ ಅಷ್ಟು ಒಳ್ಳೆಯದು. ಭ್ರಾಂತಿ ಎಂದು ನೀನೆಂದೆಯಲ್ಲವೆ, ನಾನು ಒಪ್ಪಿದೆ: ಆದರೆ ಒಂದೇ ಒಂದು ಭ್ರಾಂತಿ—ಆ ಕಾಲ ಈಗಲೇ ಬಂದಿದೆ ಎಂದು ತಿಳಿಯುವುದು. ನಾನೂ ಹಾಗೆಯೇ ಅಂದುಕೊಂಡಿದ್ದೆ. ಅತ್ಯಂತ ಹಿರಿನಾಯಕರ ವರೆಗೂ ಈ ಭ್ರಾಂತಿ ಹರಡಿತ್ತೆಂದು ನಾನು ಬಲ್ಲೆ. ಉಪವನಗಳನ್ನು ಈಗಿಂದೀಗ ಕಟ್ಟುತ್ತೇವೆಂದು ಹೊರಟದ್ದು ತಪ್ಪಾಯಿತು. ಆದರೇನಂತೆ ನೂರು ವರ್ಷಗಳಲ್ಲಿ ಕೊಲೆಗಾರನ ಸಾಮಾಜಿಕ ಪ್ರವೃತ್ತಿಯನ್ನು ತಿದ್ದುವ ಕೆಲಸವು ಸಾಂಗ

ವಾಗಿಯೇ ಆಗುವುದು. ಆದರೆ ಇವತ್ತು ಅವನ ದೇಹಸ್ಥಿತಿಯ ಮೇಲೆಯೇ ನಾವು ಕೆಲಸ ಮಾಡಬೇಕಾಗುತ್ತದೆ. ಅಗತ್ಯ ಬಿದ್ದಾಗ ದೇಹವನ್ನೂ ಮನಸ್ಸನ್ನೂ ಸದೆಬಡಿಯುವುದೇ ಒಳ್ಳೆಯ ವಿಧಾನವೆಂದು ನಾವು ಒಪ್ಪಿಕೊಳ್ಳಬೇಕಾಗಿದೆ.'

ಗ್ಲೆಟ್‌ಕಿನ್ನನ ತಲೆಗೆ ಅಮಲೇರಿರಬಹುದೇ ಎಂದು ಐವನೊವಗೆ ಒಮ್ಮೆ ಸಂಶಯವಾಯಿತು. ಆದರೆ ಅವನ ಪ್ರಶಾಂತ ಮುಖಮುದ್ರೆಯನ್ನು ನೋಡಿದರೆ ಹಾಗೆ ಕಾಣಿಸುತ್ತಿದ್ದಿಲ್ಲ. ಐವನೊವ ಅಸ್ಪಷ್ಟವಾಗಿ ನಗುತ್ತ 'ಅರ್ಥಾತ್, ನಾನು ನಿರಾಶಾವಾದಿ, ನೀನು ನೀತಿವಾದಿ-ಅಲ್ಲವೆ?'

ಗ್ಲೆಟ್‌ಕಿನ್ ಮೌನನಾಗಿದ್ದನು. ಆತನ ಬೆಲ್ಟಿನಿಂದ ಹೊಸ ಚರ್ಮದ ವಾಸನೆ ಹೊರಡುತಿತ್ತು.

ಸ್ವಲ್ಪ ಹೊತ್ತು ಕಳೆದ ಅನಂತರ ಗ್ಲೆಟ್‌ಕಿನ್ ಮಾತು ಮುಂದುವರಿಸಿದನು. 'ಕೆಲವು ವರ್ಷಗಳ ಹಿಂದೆ ಒಬ್ಬ ರೈತನನ್ನು ನನ್ನ ಹತ್ತಿರ ವಿಚಾರಣೆಗಾಗಿ ಕಳಿಸಿದರು. ಆಗ ನಾನು ರಾಜಧಾನಿಗೆ ದೂರದ ಒಂದು ಪ್ರಾಂತ್ಯದಲ್ಲಿದ್ದೆ, ಉಪವನದ ತತ್ತ್ವದಲ್ಲಿ ನಂಬಿಕೆಯುಳ್ಳವನೂ ಆಗಿದ್ದೆ. ವಿಚಾರಣೆಗಳನ್ನು ಭಾರೀ ಸಭ್ಯವಾದ ರೀತಿಯಲ್ಲಿ ನಡೆಸುತ್ತಿದ್ದ ಕಾಲ ಅದು. ಜಮೀನಿನ ಸಮಷ್ಟೀಕರಣವು ಆರಂಭವಾಗಿತ್ತಷ್ಟೆ. ಈ ರೈತ ತನ್ನ ಬೆಳೆಯನ್ನು ಬಚ್ಚಿಟ್ಟಿದ್ದನು. ನಾನು ಶಿಷ್ಟಾಚಾರಕ್ಕೆ ಒಂದಿಷ್ಟೂ ಊನ ಬಾರದಂತೆ ವಿಚಾರಣೆ ನಡೆಸಿದೆ. ಅತ್ಯಂತ ಸ್ನೇಹದಿಂದ ರೈತನಿಗೆ ಎಲ್ಲ ವಿಚಾರವನ್ನೂ ಸ್ಪಷ್ಟಗೊಳಿಸಿದೆ: ನಗರದಲ್ಲಿ ಹೆಚ್ಚುತ್ತಿರುವ ಜನಸಂಖ್ಯೆಗೆ ಪೂರಯಿಸುವುದಕ್ಕೂ ಔದ್ಯೋಗೀಕರಣಕ್ಕೂ ರಫ್ತುಮಾಡುವುದಕ್ಕೂ ಸರಕಾರಕ್ಕೆ ಅಧಿಕ ಆಹಾರಧಾನ್ಯಗಳ ಆವಶ್ಯಕತೆಯುಂಟೆಂಬುದನ್ನು ತಿಳಿಸಿ ಬಚ್ಚಿಟ್ಟ ಸ್ಥಳವನ್ನು ತೋರಿಸಲು ಅವನನ್ನು ನಯವಾಗಿ ಪ್ರಾರ್ಥಿಸಿಕೊಂಡೆ. ಹೊಡೆದಾರೆಂಬ ಅಂಜಿಕೆಯಿಂದ ರೈತನ ಕತ್ತು ಹೆಗಲೊಳಗೆ ಇಳಿದು ಹೋಗಿತ್ತು. ನಾನೂ ಹಳ್ಳಿಯಿಂದ ಬಂದವನಾದುದರಿಂದ ನನಗೆ ಅವನ ಸ್ವಭಾವ ಚೆನ್ನಾಗಿ ಅರ್ಥವಾಗುತಿತ್ತು. ಆದರೆ ಹೊಡೆಯುವುದು ಬಿಟ್ಟು ಅವನೊಡನೆ

ನಾನು ಸಮಾನಸ್ಕಂಧನೊಡನೆ ಆಡುವಂತೆ ಆಡುವುದನ್ನು ನೋಡಿ ಅವನು ನನಗೆ ಬುದ್ಧಿ ಕೆಟ್ಟಿದೆ ಎಂದುಕೊಂಡಿರಬೇಕು–ಅವನ ಕಣ್ಣು ಹಾಗೆ ಹೇಳುತ್ತಿತ್ತು. ನಾನು ಅರ್ಧತಾಸು ಅವನ ಹತ್ತಿರ ವಾದ ಮಾಡಿದೆ. ಅವನು ಒಮ್ಮೆ ಕಿವಿಯನ್ನೂ ಒಮ್ಮೆ ಮೂಗನ್ನೂ ಒರಸಿಕೊಂಡನಾದರೂ ತುಟಿ ಎರಡು ಮಾಡಲಿಲ್ಲ. ನಾನು ಮತ್ತಷ್ಟು ಮಾತು ಸಡಿಲಬಿಟ್ಟೆ. ಅವನು ಮಾತ್ರ ಇದೇನೋ ತಮಾಷೆ ಇರಬೇಕೆಂದು ಕೊನೆ ಕೊನೆಯಲ್ಲಿ ನನ್ನ ಮಾತುಗಳ ಕಡೆಗೆ ಕಿವಿ ಕೊಡುತ್ತಿರಲಿಲ್ಲ. ಶತ ಶತಮಾನಗಳ ದಾಸ್ಯಕ್ಕೆ ಕಿವಿ ಮುಚ್ಚಿ ಹೋಗಿರಲಾಗಿ ಅವನಿಗೆ ನನ್ನ ವಾದವು ಕೇಳಿಸುತ್ತಲೇ ಇರಲಿಲ್ಲವೆಂದು ನನಗೆ ಭಾಸವಾಯಿತು. ನಾನು ನಿಯೋಜಿತ ಮಾರ್ಗಕ್ಕೆ ಕೊಂಚವೂ ವಿರೋಧವಾಗದ ರೀತಿಯಲ್ಲಿ ವಿಚಾರಣೆ ನಡೆಸಿದೆ; ಬೇರೆ ಮಾರ್ಗಗಳ ಅರಿವೇ ನನಗಾಗ ತಿಳಿದಿರಲಿಲ್ಲ ಎನ್ನು....'

'ಆಗ ನನಗೆ ಪ್ರತಿದಿನವೂ ಅಂಥ ಇಪ್ಪತ್ತು ಮೂವತ್ತು ತನಿಖೆಗಳು ಬರುತ್ತಿದ್ದುವು. ನನ್ನ ಸಹೋದ್ಯೋಗಿಗಳಿಗೂ ಅಷ್ಟೇ. ಈ ಮಂಡು ದುಂಡು ರೈತರಿಂದ ಕ್ರಾಂತಿಯ ಅಸ್ತಿಭಾರವೇ ಕುಸಿಯುವ ಲಕ್ಷಣವಿತ್ತು. ಕಾರ್ಮಿಕರಿಗೆ ಹೊಟ್ಟೆಗೆ ಸರಿಯಾದ ಆಹಾರವಿರಲಿಲ್ಲ; ಹೊರಜಿಲ್ಲೆಗಳಲ್ಲಿ ಹೊಟ್ಟೆಗಿಲ್ಲದ್ದರಿಂದ ಬರುವ ವಿಷಮಜ್ವರವು ಸಾಂಕ್ರಾಮಿಕ ಜಾಡ್ಯವಾಗಿ ವ್ಯಾಪಿಸಿತ್ತು; ಶಸ್ತ್ರೋದ್ಯಮದ ಬೆಳವಣಿಗೆಗೆ ಬೇಕಾದ ಬಂಡವಾಳ ನಮ್ಮಲ್ಲಿರಲಿಲ್ಲ; ಸಾಲದುದಕ್ಕೆ ಪ್ರತಿ ತಿಂಗಳೂ ಶತ್ರುಗಳ ಧಾಳಿಯ ಅಂಜಿಕೆ ಇತ್ತು. ಇಪ್ಪತ್ತು ಕೋಟಿ ಚಿನ್ನದ ನಾಣ್ಯಗಳನ್ನೂ, ಅರೆವಾಸಿ ಫಸಲನ್ನೂ ಈ ನೀಚರು ಮಣ್ಣಿನಲ್ಲಿ ಹೂಳಿ ಬಚ್ಚಿಟ್ಟು ನಮ್ಮನ್ನು ಸತಾಯಿಸುತ್ತಿದ್ದರು. ಇಂಥ ವಿದ್ರೋಹಿಗಳನ್ನು ನಾವು ವಿಚಾರಣೆಯ ಸಮಯ ಗೌರವದಿಂದ ಸಂಬೋಧಿಸುತ್ತ, ಅವರಿಗೋಸ್ಕರ ತಮಾಷೆಯ ಏರ್ಪಾಡು ಮಾಡುತ್ತಿದ್ದೆವು.

'ನನ್ನ ರೈತ ಮೂರನೆಯ ಸಲ ವಿಚಾರಣೆಗೆ ಬಂದಾಗ ರಾತ್ರಿ ಎರಡು ಗಂಟೆ ಆಗಿರಬಹುದು. ಅಷ್ಟು ಹೊತ್ತಿಗೆ ನಾನು ಹದಿನೆಂಟು ತಾಸುಗಳಷ್ಟು ಕಾಲ ಕೆಲಸ ಮಾಡಿದ್ದೆ. ಅವನನ್ನು ನಿದ್ರೆಯಿಂದೆಚ್ಚರಿಸಿ ಕರೆತಂದಿದ್ದರು. ನಿದ್ರೆಯ ಅಮಲಿನಲ್ಲಿ ಅವನು ಸತ್ಯಸಂಗತಿಯನ್ನು

ಹೇಳಿಯೆ ಬಿಟ್ಟನು. ಆವತ್ತಿನಿಂದ ನಾನು ನನ್ನ ವಿಚಾರಣೆಯನ್ನು ರಾತ್ರಿ ಕಾಲವೇ ನಡೆಸಿದೆ...........ಒಮ್ಮೆ ಒಬ್ಬ ಹೆಂಗಸು ತನ್ನನ್ನು ರಾತ್ರಿ ಎಲ್ಲ ನನ್ನ ಬಾಗಿಲ ಹಿಂದೆ ಕಾಯಹಚ್ಚಿದರೆಂದು ದೂರಿಟ್ಟಳು. ಅವಳ ಕಾಲು ನಡುಗುತ್ತಿತ್ತು, ವಿಚಾರಣೆಯ ಮಧ್ಯದಲ್ಲಿ ಆಕೆ ನಿದ್ದೆ ಹೋದಳು. ನಾನು ಅವಳನ್ನು ಎಚ್ಚರಿಸಿದಾಗ ಏನೇನೋ ವಟಗುಟ್ಟಿ ಮತ್ತೆ ನಿದ್ದೆಹೋದಳು. ಮತ್ತೊಮ್ಮೆ ಎಚ್ಚರಿಸಿದೆ. ತನ್ನ ತಪ್ಪನ್ನೆಲ್ಲ ಒಪ್ಪಿಕೊಂಡು, ಓದದೆಯೆ ಹೇಳಿಕೆಗೆ ಸಹಿಮಾಡಿ, ಚೆನ್ನಾಗಿ ನಿದ್ದೆ ಹೋದಳು. ಅವಳ ಗಂಡ ಕಣಜಗಳ ನಡುವೆ ಎರಡು ಮೆಷಿನ್‌ಗನ್ನು ಗಳನ್ನು ಅಡಗಿಸಿಟ್ಟು, ತನಗೆ ಕ್ರಿಸ್ತ ಹೇಳಿದನೆಂದು ಇಡಿ ಹಳ್ಳಿಯವರಿಗೆ ಅವರವರ ಧಾನ್ಯದ ಫಸಲನ್ನು ಸುಡುವಂತೆ ಉಪದೇಶಮಾಡಿದ್ದನು. ಆ ಹೆಂಗಸನ್ನು ಇಡಿ ರಾತ್ರಿ ಕಾಯುವ ಹಾಗೆ ಮಾಡಿದ್ದು ನನ್ನ ಸಿಪಾಯಿಯ ಅಜಾಗ್ರತೆ. ಆದರೆ ಆ ಮೇಲೆ ನಾನು ಆ ತೆರನ ಅಜಾಗ್ರತೆಗೆ ಪ್ರೋತ್ಸಾಹ ಕೊಡಲು ಆರಂಭಿಸಿದೆ. ಯಾವುದಕ್ಕೂ ಬಗ್ಗದ ಕುಳಗಳನ್ನು ೪೮ ತಾಸು ಒಂದೇ ಜಾಗದಲ್ಲಿ ನಿಲ್ಲಿಸಿಡಬೇಕೆಂದು ಅಪ್ಪಣೆಮಾಡಿದರೆ ಅವರ ಸ್ಥೈರ್ಯವು ಕರಗಿ ನೀರಾಗುತಿತ್ತು........

ಕೆಂಟೀನಿನ ಆಚೆ ಕೊನೆಯಲ್ಲಿದ್ದ ಆಟಗಾರರು ಚೆಸ್ ಪಗಡೆಗಳನ್ನೆಲ್ಲ ಒಟ್ಟು ಸೇರಿಸಿ ಮತ್ತೊಂದು ಆಟವನ್ನು ಆರಂಭಿಸಿದರು. ಮೂರನೆಯವನು ಅಷ್ಟರಲ್ಲಿ ಹೊರಟು ಹೋಗಿದ್ದನು. ಗ್ಲೆಟ್‌ಕಿನ್ ಮಾತನಾಡುವಾಗ ಐವನೊವ ಆತನನ್ನೇ ದಿಟ್ಟಿಸುತ್ತಿದ್ದನು; ಕಿವಿಯಿಂದ ಆತನ ನೀರಸವೂ, ಶುಷ್ಕವೂ ಆದ ಧ್ವನಿಯನ್ನು ಆಲಿಸುತ್ತಿದ್ದನು.

'ನನ್ನ ಸಹೋದ್ಯೋಗಿಗಳ ಅನುಭವವೂ ಇದೇ. ನಮ್ಮ ಕೆಲಸವು ಕೈಗೂಡಲು ಇದ್ದ ಮಾರ್ಗ ಇದೊಂದೇ ನಾವು ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸಿದೆವು: ಕೈದಿಯ ಮೈಯನ್ನು ಮುಟ್ಟದೆಯೇ ಕೆಲಸ ಸಾಗುತಿತ್ತು. ಆದರೂ ಕೈದಿಗಳ ಮರಣ ದಂಡನೆಯನ್ನು ಇತರರು—ಉದ್ದೇಶ ಪೂರ್ವಕವಾಗಿ ಅಲ್ಲವೆನ್ನೋಣವೆ—ನೋಡ ಬೇಕಾಗಿತ್ತು. ಆ ದೃಶ್ಯ ನೋಡಿದವರ ದೇಹದ ಮೇಲೂ ಮನಸ್ಸಿನ ಮೇಲೂ ಬೇಕೆಂಬಷ್ಟು ಪರಿಣಾಮವಾಗುತಿತ್ತು. ಇನ್ನೊಂದು ಉದಾಹರಣೆ:

ಸ್ನಾನ ಗೃಹಗಳಿರುವುದೂ, ಸ್ನಾನದ ತುಂತುರು ಕೊಳವೆಗಳಿರುವುದೂ, ಆರೋಗ್ಯಕ್ಕೋಸ್ಕರ ತಾನೇ. ಚಳಿಗಾಲದಲ್ಲಿ ಕೊಳವೆಗಳು ಕೆಟ್ಟು ಹೋಗಿ ಬಿಸಿ ನೀರು ಸಿಗುತ್ತಿರಲಿಲ್ಲ; ಆದರೂ ಸಿಪಾಯಿಗಳು ಬೇರೆ ಬೇರೆ ಕೈದಿಗಳಿಗೆ ಬೇರೆ ಬೇರೆ ಸ್ನಾನಾವಧಿಯನ್ನು ಕೊಡುತ್ತಿದ್ದರು—ಕೆಲವರಿಗೆ ಬಹಳ ಹೊತ್ತು, ಕೆಲವರಿಗೆ ಕಡಮೆ. ಕೆಲವು ಸಲ ಬಿಸಿ ನೀರಿನ ಕೊಳವೆ ಸಮರ್ಪಕವಾಗಿ ಕೆಲಸ ಮಾಡುತ್ತಿದ್ದುವು, ಅದೂ ಸಿಪಾಯಿಗಳ ಕೈವಾಡದಿಂದ. ಸಿಪಾಯಿಗಳೆಲ್ಲ ನಮ್ಮ ಹಳೇ ಕಾಮ್ರೇಡರು, ಅವರಿಗೆ ವಿವರವಾದ ಆಜ್ಞೆ ಬೇಕಾಗಿರಲಿಲ್ಲ. ನಮ್ಮ ಮಹೋದ್ದೇಶವೇನೆಂದು ಅವರಿಗೆ ಗೊತ್ತು.

'ಸಾಕೆಂದು ತೋರುತ್ತದೆ' ಎಂದ ಐವನೊವ

ಗ್ಲೆಟ್‌ಕಿನ್ 'ಈ ತತ್ವವನ್ನು ನಾನು ಶೋಧಿಸಿದ್ದು ಹೇಗೆಂದು ನೀನು ಕೇಳಿದಿ ಎಂದು ಇಷ್ಟೆಲ್ಲ ಹೇಳಬೇಕಾಯಿತು. ಎಲ್ಲದರಲ್ಲೂ ತಾರ್ಕಿಕ ಅನಿವಾರ್ಯತೆಯೊಂದಿರುವ ಅಂಶವನ್ನು ತಿಳಿಯಬೇಕಾದ್ದು ಮುಖ್ಯ; ಅದು ತಿಳಿಯದವರು ನಿನ್ನಂತೆ ನಿರಾಶಾವಾದಿಗಳು. ನನಗೆ ತಡವಾಯಿತು, ಹೊರಡುತ್ತೇನೆ.'

ಗ್ಲೆಟ್‌ಕಿನ್ ದುಡ್ಡು ತೆತ್ತನು. ಕೆಂಟೀನಿನ ಸೇವಕ ಆಚೆಕಡೆ ಹೋದ ಮೇಲೆ 'ಅಂತೂ ರುಬಷೊವಗೆ ಏನು ಮಾಡುವುದೆಂದು ನಿಶ್ಚಯವಾಗಿದೆ?' ಎಂದು ಕೇಳಿದನು.

'ನನ್ನ ಅಭಿಪ್ರಾಯವನ್ನು ನಾನು ಆಗಲೇ ಹೇಳಿದ್ದೇನೆ. ಅವನನ್ನು ಸುಮ್ಮಗೆ ಇರಗೊಡಬೇಕು' ಎಂದು ಐವನೊವ ನುಡಿದನು.

ಗ್ಲೆಟ್‌ಕಿನ್ ಎದ್ದುನಿಂತನು. ಅವನ ಬೂಟು ಚುರ್ರೆಂದು ಸಪ್ಪಳಮಾಡಿತು. ಐವನೊವನ ಕಾಲುಗಳಿದ್ದ ಕುರ್ಚಿಯ ಸಮೀಪವೇ ಆತ ನಿಂತಿದ್ದನು. 'ಅವನ ಗತಕಾಲದ ಯೋಗ್ಯತೆಯ ಅರಿವು ನನಗೆ ಚೆನ್ನಾಗಿದೆ. ಆದರೆ ಇಂದು ನನ್ನ ದುಂಡನ್ನ ರೈತನಿಗಿಂತಲೂ ಈತ ಹೆಚ್ಚು ಉಪದ್ರವಕಾರಿ, ಅಪಾಯಕಾರಿ ಎಂದು ನನ್ನ ಅಭಿಪ್ರಾಯ' ಎಂದನು.

ಐವನೊವ ಗ್ಲೆಟ್‌ಕಿನನ ಶೂನ್ಯ ಮುಖಮುದ್ರೆಯನ್ನು ದಿಟ್ಟಿಸಿ ನೋಡಿದನು. 'ಅವನಿಗೆ ಹದಿನೈದು ದಿನ ಪುರಸೊತ್ತು ಕೊಟ್ಟಿದ್ದೇನೆ. ಆ ವರೆಗೆ ಅವನ ಶಾಂತಿಯನ್ನು ಭಂಗಮಾಡಬಾರದೆಂದು ನಾನು ಆಜ್ಞಾಪಿಸಿದ್ದೇನೆ.'

ಐವನೊವ ತನ್ನ ಅಧಿಕಾರವಾಣಿಯಲ್ಲಿ ಈ ಕೊನೆಯ ಮಾತುಗಳನ್ನು ನುಡಿದನು. ಗ್ಲೆಟ್‌ಕಿನ್ ಅವನಿಗಿಂತ ಕೆಳಗಿನ ಅಧಿಕಾರಿ: ಆತ ಐವನೊವಗೆ ನಮಸ್ಕರಿಸಿ ಬೂಟುಗಳ ಸಪ್ಪಳ ಹೊರಡಿಸುತ್ತ ಕೆಂಟೀನಿನಿಂದ ಹೊರನಡೆದನು;

ಐವನೊವ ಕೂತೇ ಇದ್ದನು, ಇನ್ನೊಂದು ಪಾತ್ರೆ ಮದ್ಯವನ್ನು ಸೇವಿಸಿ, ಸಿಗರೇಟು ಹಚ್ಚಿ, ಅದನ್ನು ಸುರುಳಿ ಬಿಡುತ್ತ ಇನ್ನೊಂದಷ್ಟು ಕಾಲ ಕಳೆದನು. ತರುವಾಯ ಅಲ್ಲಿಂದೆದ್ದು ಚೆಸ್ ಆಟವನ್ನು ನೋಡಲು ಕುಂಟುತ್ತ ಆ ಕಡೆಗೆ ನಡೆದು ಹೋದನು.

## ೩

ಪ್ರಥಮ ವಿಚಾರಣೆಯ ಬಳಿಕ ರುಬಷೊವನ ಜೀವನದ ಮಟ್ಟವು ಅದ್ಭುತವಾಗಿ ಅಭಿವೃದ್ಧಿಗೊಂಡಿತ್ತು. ಮರುದಿನ ಮುಂಜಾನೆ ನೋಡಿದರೆ ಮುದಿಯನು ಕಾಗದ, ಪೆನ್ನಿಲು ಸಾಬೂನು, ಮತ್ತು ಟವೆಲ ತೆಗೆದುಕೊಂಡು ಬಂದನು. ರುಬಷೊವನ ಕೈಯಲ್ಲಿ ಸೆರೆಯಾಗುವಾಗ ಇದ್ದ ಹಣಕ್ಕೆ ಪ್ರತಿಯಾಗಿ ಕಾರಾಗೃಹದ ಕೂಪನುಗಳನ್ನೂ ತಂದಿದ್ದನು. ಬೇಕಾದಾಗ ಸಿಗರೇಟೋ ಹೊಗೆಸೊಪ್ಪೋ ತಿಂಡಿಯೋ ಆ ಟಿಕೇಟನಿಂದ ಕೈದಿಗಳ ಕೆಂಟೀನಿನಿಂದ ತರಿಸಬಹುದೆಂದು ರುಬಷೊವಗೆ ಆತ ವಿವರಿಸಿ ಹೇಳಿದನು.

ರುಬಷೊವ ಸಿಗರೇಟನ್ನೂ, ಸ್ವಲ್ಪ ತಿಂಡಿಯನ್ನೂ ತರಿಸಿದನು. ಸೆರೆಯ ಹೊರಗಿಂದ ಯಾರಾದರೊಬ್ಬ ವೈದ್ಯನನ್ನು ತರಿಸಲೋ ಎಂದು ಒಮ್ಮೆ ಯೋಚಿಸಿದನು, ಆದರೆ ಆ ಮೇಲೆ ಆ ವಿಷಯವೇ ಅವನಿಗೆ ಮರೆತು ಹೋಯಿತು. ಆಗ ಹಲ್ಲುನೋವಿನ ಬಾಧೆ ಇರಲಿಲ್ಲ: ಬಾಯಿ

ತೊಳೆದುಕೊಂಡು ತಿಂಡಿ ತಿಂದ ಮೇಲೆ ರುಬಷೊವಗೆ ಇನ್ನಷ್ಟು ಆರೋಗ್ಯವೆನಿಸಿತು.

ಕೆಳಗಿನ ಅಂಗಳದ ಹಿಮುಗಡ್ಡೆಯನ್ನು ಈಗ ತೆಗೆದಿದ್ದರು. ಕೈದಿಗಳು ಯಥಾಪೂರ್ವ ಅಲ್ಲಿ ಪ್ರದಕ್ಷಿಣೆ ಬರುತ್ತಿದ್ದರು. ಸೀಕ್ಷ್ಯಾಯಿ ಮತ್ತು ಅವನ ಸಂಗಾತಿಗೆ ಎಲ್ಲರಿಗಿಂತ ಹೆಚ್ಚು ಹೊತ್ತು—ಹತ್ತು ಮಿನಿಟು—ತಿರುಗಾಟದ ಸೌಲಭ್ಯವಿತ್ತು. ಪ್ರಾಯಃ ವೈದ್ಯರು ಹೇಳಿರಬೇಕು ಎಂದುಕೊಂಡನು ರುಬಷೊವ. ಸೀಕ್ಷ್ಯಾಯಿಯವನು ರುಬಷೊವನ ಕೊಠಡಿಯ ಕಿಟಕಿಯನ್ನೇ ನೋಡುತ್ತಿದ್ದನು; ಅದರಲ್ಲೇನೂ ಸಂದೇಹವಿರಲಿಲ್ಲ. ರುಬಷೊವನನ್ನು ಗುರುತಿಸಬೇಕೆಂದು ಹವಣಿಸುವ ಹಾಗಿತ್ತು ಆ ನೋಟ.

ಟಿಪ್ಪಣಿಗಳನ್ನು ಬರೆಯುವ ಮತ್ತು ಅತ್ತಿತ್ತ ಶತಪಥ ತಿರುಗುವ ಹೊತ್ತನ್ನು ಬಿಟ್ಟರೆ ಉಳಿದೆಲ್ಲ ಸಮಯವೂ ರುಬಷೊವ ತನ್ನ ಹಣೆಯನ್ನು ಕಿಟಕಿಯ ಗಾಜಿಗೆ ಒರಗಿಸಿ ಹೊರಗಡೆ ಕೈದಿಗಳ ಕವಾಯತನ್ನು ನೋಡುತ್ತಿದ್ದನು. ಹನ್ನೆರಡು ಕೈದಿಗಳ ಒಂದು ಗುಂಪನ್ನು ಕವಾಯತು ಮುಗಿಸಿ ಬಲಗಡೆಯ ಬಾಗಿಲಿಂದ ಸಿಪಾಯಿಗಳು ಒಳಕ್ಕೆ ಒಯ್ಯುತ್ತಿರುವ ಹೊತ್ತಿಗೆ ಸರಿಯಾಗಿ ಎಡಗಡೆಯ ಬಾಗಿಲಿಂದ ಮತ್ತೆ ಹನ್ನೆರಡು ಕೈದಿಗಳು ಅಂಗಳವನ್ನು ಪ್ರವೇಶಿಸಿ ಪ್ರದಕ್ಷಿಣೆಗೆ ತೊಡಗುತ್ತಿದ್ದರು. ಕೈದಿಗಳು ಪರಸ್ಪರ ಮಾತಾಡಿಕೊಳ್ಳದಂತೆ ಸಿಪಾಯಿಗಳು ಸದಾ ಎಚ್ಚರದಲ್ಲಿರುತ್ತಿದ್ದರು.

ಮೊದಲ ಕೆಲವು ದಿನ ರುಬಷೊವ ಅಂಗಳದಲ್ಲಿ ಪ್ರದಕ್ಷಿಣೆ ಬರುವವರಲ್ಲಿ ತನಗೆ ಗುರುತಿನವರು ಯಾರಾದರೂ ಇರಬಹುದೇ ಎಂದು ಹುಡುಕುತ್ತಿದ್ದನು. ಆದರೆ ಯಾರೂ ಸಿಗಲಿಲ್ಲ. ಅದು ಒಳ್ಳಿತೇ ಆಯಿತು, ತನ್ನ ಕೆಲಸವನ್ನು ನಿರಾತಂಕವಾಗಿ, ಹೊರ ಪ್ರಪಂಚದ ಅಸ್ತಿತ್ವದ ತೊಡಕಿಲ್ಲದೆ, ಜರಗಿಸಲು ಅನುಕೂಲವೇ ಆಯಿತು. ತನ್ನ ಆಲೋಚನೆಗಳನ್ನು ಅಂತ್ಯದ ವರೆಗೂ ಯೋಚಿಸಿ ತೀರ್ಮಾನಕ್ಕೆ ಬರುವುದು ಮತ್ತು ತನ್ನ ಗತಕಾಲ ಮತ್ತು ಭವಿಷ್ಯಗಳೊಡನೆ ಸಂಧಾನ ಮಾಡುವುದು, ಬದುಕಿರುವವರಿಗೂ ಸತ್ತವರಿಗೂ ಸಂಬಂಧ ಕಲ್ಪಿಸುವುದು—ರುಬಷೊ

ವನ ಕೆಲಸವಾಗಿತ್ತು. ಐವನೊವ ಕೊಟ್ಟ ಹದಿನೈದು ದಿನಗಳ ಅವಧಿಯಲ್ಲಿ ಇನ್ನು ಹತ್ತು ದಿನ ಉಳಿದಿದ್ದುವು.

ಆಲೋಚನೆಗಳನ್ನು ಹಿಡಿದಿರಿಸಬೇಕಾದರೆ ಟಿಪ್ಪಣಿ ಬರೆಯಬೇಕು; ಆದರೆ ದಿನಕ್ಕೆ ಒಂದೆರಡು ತಾಸಿಗಿಂತ ಹೆಚ್ಚು ಬರೆದರೆ ಅವನಿಗೇಕೋ ಆಯಾಸವಾಗುತ್ತಿತ್ತು. ಆದರೆ ಎಲ್ಲ ಹೊತ್ತೂ ಅವನ ಮಿದುಳು ತನ್ನಷ್ಟಕ್ಕೆ ಕಾರ್ಯಪ್ರವೃತ್ತವಾಗಿರುತ್ತಿತ್ತು.

ರುಬಷೊವಗೆ ತನ್ನ ಪರಿಚಯು ತನಗೆ ಸಾಕಷ್ಟಿತ್ತೆಂಬ ನಂಬಿಕೆ ಬಲವಾಗಿತ್ತು. ನೈತಿಕ ದುರ್ಭಾವನೆಗಳೂ ಪಕ್ಷಪಾತಗಳೂ ತನ್ನಲ್ಲಿ ಇಲ್ಲದಿರುವುದರಿಂದ 'ಉತ್ತಮ ಪುರುಷ ಏಕವಚನ'ದ ವಿಷಯದಲ್ಲಿ ಅವನಿಗೆ ಯಾವ ಭ್ರಾಂತಿಯೂ ಇರಲಿಲ್ಲ. ಜನರಿಗೆ 'ನಾನು' ಎಂಬ ವಿಷಯದಲ್ಲಿ ಮೋಹವು ಸ್ವಾಭಾವಿಕವೆಂಬುದನ್ನು ಆತ ಬಲ್ಲವನಾಗಿದ್ದನು. ಕಿಟಕಿಗೆ ಹಣೆ ತಾಗಿಸಿಕೊಂಡು ನಿಂತಾಗ ಅಥವಾ ನೆಲದ ಮೇಲಿನ ಮೂರನೆಯ ಕರಿ ಇಟ್ಟಿಗೆಯ ಮೇಲೆ ಕಾಲಿಟ್ಟಾಗ, ರುಬಷೊವಗೆ ಹಠಾತ್ತಾಗಿ ತಾನೇನನ್ನೋ ಶೋಧನೆ ಮಾಡಿದಂತೆ ಭಾಸವಾಯಿತು. 'ಸ್ವಗತ'ವೆಂದು ಸಾಮಾನ್ಯವಾಗಿ ನಾವು ಯಾವುದನ್ನು ಕರೆಯುತ್ತೇವೋ ಅದು ನಿಜವಾಗಿ ನೋಡಿದರೆ ವಿಶೇಷ ರೀತಿಯ ಸಂವಾದವೆಂಬುದು ಅವನಿಗೆ ಅಕಸ್ಮಾತ್ ಗೋಚರವಾಯಿತು. ಆದರೆ ಈ ಸಂವಾದದಲ್ಲಿ ಭಾಗಿಯಾಗುವ ಇಬ್ಬರ ಪೈಕಿ ಒಂದು ವ್ಯಕ್ತಿ ಮೌನವಾಗಿರುವುದೂ, ಇನ್ನೊಂದು ಹೆಚ್ಚು ವಿಶ್ವಾಸವನ್ನು ಗಳಿಸಲೆಂಬಂತೆ ವ್ಯಾಕರಣ ಸೂತ್ರಗಳಿಗೆ ವಿರುದ್ಧವಾಗಿ ಇನ್ನೊಂದು ವ್ಯಕ್ತಿಯನ್ನು 'ನೀನು' ಎನ್ನದೆ 'ನಾನು' ಎಂದು ಸಂಬೋಧಿಸುವುದೂ; ಆದರೂ ಮೌನಿಯು ಬಾಯಿ ಬಿಚ್ಚದೆ, ದೇಶಕಾಲಗಳ ಬಂಧನಕ್ಕೆ ಸಿಲುಕದೆ, ಪರ್ಯವೇಕ್ಷಣೆಗೆ ಒಳಗಾಗದೆ ತಪ್ಪಿಸಿಕೊಳ್ಳುವುದೂ ಒಂದು ವೈಚಿತ್ರ್ಯವೆಂದು ರುಬಷೊವಗೆ ಭಾಸವಾಯಿತು.

ಆದರೆ ಈ ಚಿರಮೌನಿಯು ಒಮ್ಮೊಮ್ಮೆ ನಿಷ್ಕಾರಣವಾಗಿ ಮಾತನಾಡಲು ಆರಂಭಿಸುವುದಿತ್ತು. ಅವನ ಸ್ವರವು ರುಬಷೊವಗೆ ಅಪರಿಚಿತವಾದರೂ ಅವನ ಮಾತುಗಳನ್ನು ಕುತೂಹಲದಿಂದ ಆಲಿಸುವಾಗ ಅಲುಗುವ ತುಟಿ ತನ್ನದೇ ಎಂದು ಅವನಿಗೆ ಭಾಸವಾಗುತಿತ್ತು. ಈ

ಬಗೆಯ ಅನುಭವದಲ್ಲಿ ರಹಸ್ಯವಾದ್ದು, ಅಲೌಕಿಕವಾದ್ದು ಯಾವುದೂ ಇರಲಿಲ್ಲ. 'ಉತ್ತಮ ಪುರುಷ ಏಕವಚನ'ದಲ್ಲಿ ಮುಟ್ಟಿದರೆ ಕೈಗೆ ಸಿಗುವ ಪದಾರ್ಥವೇ ತುಂಬಿಕೊಂಡಿದೆ ಎನ್ನುವುದರ ಬಗ್ಗೆ ರುಬಶೊವಗೆ ಯಾವ ಸಂದೇಹವೂ ಇರಲಿಲ್ಲ.

ಐವನೊವ ನಡೆಸಿದ ವಿಚಾರಣೆಯ ವಿವರಗಳಿಗಿಂತ ಹೆಚ್ಚಾಗಿ ಈ ಶೋಧನೆಯು ರುಬಶೊವನ ಮನಸ್ಸನ್ನು ಕವಿದಿತ್ತು. ಐವನೊವನ ಸೂಚನೆಗಳನ್ನು ಅಂಗೀಕರಿಸುವುದು ತನ್ನಿಂದ ಸಾಧ್ಯವಿಲ್ಲವೆಂದು ರುಬಶೊವ ನಿರ್ಧರಿಸಿದ್ದನು. ಅಂದರೆ ಹೆಚ್ಚು ದಿನ ಜೀವ ಹಿಡಿದು ಬದುಕಿರಲಸಾಧ್ಯವೆಂಬುದು ಸ್ವತಃ ಸಿದ್ಧವಾದಂತೆ.

ಒಂದನೆಯ ನಂಬರಿನವನನ್ನು ಕೊಲೆಮಾಡುವ ಒಳಸಂಚಿನ ಕಥೆಗಿಂತಲೂ ರುಬಶೊವಗೆ ಐವನೊವನ ವ್ಯಕ್ತಿತ್ವವನ್ನು ಒಳಹೊಕ್ಕು ನೋಡುವ ಇಚ್ಛೆ ಬಲವತ್ತರವಾಗಿತ್ತು. ನಿನ್ನ ಜಾಗದಲ್ಲಿ ನಾನು, ನನ್ನ ಜಾಗದಲ್ಲಿ ನೀನು ಇರಬಹುದಾಗಿತ್ತು ಎಂದು ಐವನೊವ ಎಂದುದು ಸುಳ್ಳಲ್ಲ. ಹೌದು, ಅವನೂ ಐವನೊವನೂ ಅವಳಿ ಮಕ್ಕಳು. ಒಂದೇ ಗರ್ಭದಲ್ಲಿ ಹುಟ್ಟದಿದ್ದರೂ ಅವರನ್ನು ಪೋಷಿಸಿದ ಸಾರವಸ್ತು ಒಂದೇ ಎಂಬುದು ನಿರ್ವಿವಾದ; ಬೆಳವಣಿಗೆಯ ವಿಶಿಷ್ಟ ಕಾಲಮಾನದಲ್ಲಿ ಅವರನ್ನು ರೂಪುಗೊಳಿಸಿದ ವಾತಾವರಣದಲ್ಲಿ ಯಾವ ಭೇದವೂ ಇರಲಿಲ್ಲ. ಅವರ ನೈತಿಕ ಮಟ್ಟವೂ, ದರ್ಶನವೂ ಒಂದೇ ಆಗಿದ್ದುದರಿಂದ ಅವರ ವಿಚಾರ ಗಳು ಭಿನ್ನವಾಗುವುದು ಶಕ್ಯವಿರಲಿಲ್ಲ. ನಿಜ, ಅವರ ಸ್ಥಿತಿ ವಿಕಲ್ಪ ವಾಗುವುದು ಸಾಧ್ಯವಿತ್ತು; ರುಬಶೊವ ಡೆಸ್ಕಿನ ಹಿಂದೊ ಐವನೊವ ಅದರ ಮುಂದೊ ಇರಬಹುದಾಗಿತ್ತು. ಆಗ ರುಬಶೊವ ಉಪಯೋಗಿಸ ಬಹುದಾದ ವಾದವು ಐವನೊವನ ವಾದವೇ ಆಗಿರುತ್ತಿತ್ತು. ಆಟದ ನಿಯಮ ಇಬ್ಬರಿಗೂ ಒಂದೇ. ವಿವರಗಳಲ್ಲಿ ಸ್ವಲ್ಪ ಹೆಚ್ಚುಕಡಿಮೆ ಇರಬಹುದೇನೋ.

ಇನ್ನೊಬ್ಬರ ದೃಷ್ಟಿಯಿಂದ ತನ್ನನ್ನು ನೋಡಿಕೊಳ್ಳುವ ದುಶ್ಚಟವು ಮತ್ತೆ ರುಬಶೊವನಿಗೆ ಅಂಟಿಕೊಂಡಿತು. ಐವನೊವನ ಸ್ಥಾನದಲ್ಲಿ ಕೂತು ಐವನೊವನ ದೃಷ್ಟಿಯಿಂದ ಆಪಾದಿತನಾದ ತಾನು ಹೇಗೆ

ಕಾಣುತ್ತಿರಬಹುದೆಂದು ಅವನು ಯೋಚಿಸಿದನು. ದುರ್ಗತಿಗೀಡಾದ ಆ ಬಡ ರುಬಷೊವನ ಮೇಲೆ ಕರುಣೆ ಮತ್ತು ತಿರಸ್ಕಾರ ಏಕಕಾಲದಲ್ಲಿ ಉದಿಸುತಿದ್ದುವು. ಐವನೊವನ ಸಂಗಡ ಮಾತನಾಡುವಾಗ ರುಬಷೊವನ ಮನಸ್ಸಿನಲ್ಲಿ ಈತ ಹೃತ್ಪೂರ್ವಕ ಆಡುತ್ತಿದ್ದಾನೆಯೋ ನಟಿಸುತ್ತಿದ್ದಾನೆಯೋ, ಬಲೆ ಬೀಸುತ್ತಿದ್ದಾನೆಯೋ ಅಥವಾ ಬಲೆಯಿಂದ ತಪ್ಪಿಸಿಕೊಳ್ಳುವ ಮಾರ್ಗ ತೋರಿಸುತ್ತಿದ್ದಾನೆಯೋ ಎನ್ನುವ ಸಂದೇಹ ಮೂಡುತಿತ್ತು. ಐವನೊವನ ಸ್ಥಾನದಲ್ಲಿ ನಿಂತು ವಿಚಾರಿಸಿ ನೋಡಿದರೆ ಐವನೊವ ವಂಚನೆಗೆಳಸುತ್ತಿರಲಿಲ್ಲವೆಂಬುದು ಖಚಿತವಾಗುತಿತ್ತು. ತರುಣ ರಿಚರ್ಡ ಮತ್ತು ಕುಂಟ ಲೋವಿಯ ವಿಷಯ ತಾನು ನಡೆದುಕೊಂಡಷ್ಟೇ ಹೃತ್ಪೂರ್ವಕವಾಗಿ ಐವನೊವ ಕೂಡ ವರ್ತಿಸುತ್ತಿದ್ದನೆಂದು ಹೇಳದೆ ಉಪಾಯವಿರಲಿಲ್ಲ.

ಈ ಎಲ್ಲ ವಿಚಾರಗಳು ಚಿರಪರಿಚಿತ 'ಸ್ವಗತ'ದ ಹಾದಿಯಲ್ಲಿ ಸಾಗುತ್ತಿದ್ದುವು; ಈಚೆಗೆ ಹೊಸದಾಗಿ ಗೋಚರವಾದ ಮೌನಸಹಭಾಗಿಯು 'ಸ್ವಗತ'ದಲ್ಲಿ ಭಾಗವಹಿಸುತ್ತಿರಲಿಲ್ಲ. ಎಲ್ಲ 'ಸ್ವಗತ'ವೂ ಮೌನಿಯನ್ನುದ್ದೇಶಿಸಿಯೇ ನಡೆಯುತ್ತಿದ್ದರೂ ಮೌನಿ ಮಾತನಾಡುತ್ತಿರಲಿಲ್ಲ. ಪ್ರತ್ಯಕ್ಷವಾದ ಪ್ರಶ್ನೆಗಳು ಮತ್ತು ತಾರ್ಕಿಕ ಪ್ರತಿಪತ್ತಿಗಳು ಅದನ್ನು ಪ್ರಚೋದಿಸುವಂತಿರಲಿಲ್ಲ. ಅದು ಮಾತನಾಡುವುದು ನಿಷ್ಕಾರಣವಾಗಿ, ಅಷ್ಟೇ ನಿಷ್ಕಾರಣವಾಗಿ ಆ ಹೊತ್ತಿಗೆ ಸರಿಯಾಗಿ ಹಲ್ಲು ನೋವೂ ಪುಟದೇಳುವುದು. ಅದರ ಮಾನಸಿಕ ವಾತಾವರಣದಲ್ಲಿ ಒಂದಕ್ಕೊಂದು ಸಂಬಂಧವಿಲ್ಲದ 'ಪೇತಾ' ಚಿತ್ರ, ಕುಂಟ ಲೋವಿಯ ಚಿಕ್ಕು, ಮರೆತು ಹೋದ ಹಾಡಿನ ಯಾವುದೋ ಒಂದು ಸೊಲ್ಲು, ಆಲ್ಬೋರ್ನಾ ಒಂದು ಸಂದರ್ಭದಲ್ಲಿ ಹೇಳಿದ ಏನೋ ಒಂದು ಮಾತು ತುಂಬಿರುತಿದ್ದುವು. ಅದು ಪ್ರಕಟವಾಗುವ ರೀತಿಯೂ ವಿಚಿತ್ರವಾಗಿರುತಿತ್ತು: ಕನ್ನಡಕವನ್ನು ಅಂಗಿಯ ತೋಳಿನಿಂದ ಉಜ್ಜುವಲ್ಲಿ. ಐವನೊವನ ಕೋಣೆಯ ಗೋಡೆಯಲ್ಲಿ ಪಟವನ್ನು ತೂಗಾಡಿಸಿದ್ದ ಜಾಗವನ್ನು ಮುಟ್ಟಿ ನೋಡಬೇಕೆಂಬ ಕಾತರದಲ್ಲಿ ಋಣ ಸಲ್ಲಿಸಿಯೋ

ಬಿಡುತ್ತೇನೆಂಬ ಹಿಸು ಮಾತಿನಲ್ಲಿ, ಜೀವಮಾನದಲ್ಲಿ ನಡೆದ ಘಟನೆಗಳ ಹಗಲುಗನಸಿನ ರೂಪದಲ್ಲಿ, ಅದು ಪ್ರಕಟವಾಗುತಿತ್ತು.

ಕೊಠಡಿಯಲ್ಲಿ ಶತಪಥ ತುಳಿಯುವಾಗ ರುಬಶೊವ ನೂತನವಾಗಿ ಶೋಧಿಸಲ್ಪಟ್ಟ ವಿಚಾರವನ್ನು ಕುರಿತು ದೀರ್ಘವಾಗಿ, ನಿರಂತರವಾಗಿ ಪರಿಶೀಲನೆಗೆ ಆರಂಭಿಸಿದನು. ಪಾರ್ಟಿವಲಯಗಳಲ್ಲಿ ಉತ್ತಮ ಪುರುಷ ಏಕವಚನವನ್ನು ಸಂಬೋಧಿಸಲು ಸಂಕೋಚಪಡುತ್ತಿದ್ದುದರಿಂದ ರುಬಶೊವ ಅದಕ್ಕೆ 'ವ್ಯಾಕರಣದ ಕಾದಂಬರಿ' ಎಂದು ನಾಮಕರಣ ಮಾಡಿದ್ದನು. ಇನ್ನು ತನಗೆ ಉಳಿದಿರುವ ಕೆಲವೇ ವಾರಗಳ ಆಯುಷ್ಯದಲ್ಲಿ ಈ ವಿಷಯವನ್ನು ಕೂಲಂಕಷವಾಗಿ ಚರ್ಚಿಸಿ ಯಾವುದಾದರೂ ತರ್ಕಶುದ್ಧ ತೀರ್ಮಾನಕ್ಕೆ ಬರಬೇಕೆಂದು ಅವನಿಗೆ ಇಚ್ಛೆಯುಂಟಾಯಿತು. ಈ ವಿಷಯದಲ್ಲಿ ತೀರ್ಮಾನ ದೊರೆತುದೇ ಆದರೆ ಆಗ 'ವ್ಯಾಕರಣದ ಕಾದಂಬರಿ'ಯ ಮೊದಲ ಅಧ್ಯಾಯ ತೆರೆದಂತೆ. ತರ್ಕಬದ್ಧ ವಿಚಾರಗಳಿಗೆ ಸಿಗದೆ, ತಾನು ಅಡಗಿರುವ ಮೂಲೆಯಿಂದ ಹಗಲುಗನಸು ಮತ್ತು ಹಲ್ಲು ನೋವಿನ ಶಸ್ತ್ರಗಳಿಂದ ತಿಳಿಯದಂತೆ ದಾಳಿಮಾಡುವುದು ಅದರ ಸ್ವಭಾವವೆಂದು ಕಾಣುತ್ತದೆ. ಹೀಗಾಗಿ ರುಬಶೊವ ಸೆರೆಯಾದ ಏಳನೆಯ ದಿನವನ್ನು— ಪ್ರಥಮ ವಿಚಾರಣೆಯ ಅನಂತರದ ಮೂರನೆಯ ದಿನವನ್ನು— ಅರ್ಲೋವಳ ಜತೆಗೆ ತಾನು ಕಳೆದ ಜೀವನಭಾಗವನ್ನು ಪುನರುಜ್ಜೀವಿಸುವುದರಲ್ಲಿಯೇ ಕಳೆಯಬೇಕಾಯಿತು.

ಏನು ಹೇಳಿದರೂ ರುಬಶೊವ ಹಗಲುಗನಸಿನ ರಾಜ್ಯದ ಪ್ರಜೆಯಾಗಿದ್ದನು. ಅವನು ಅಲ್ಲಿಗೆ ಎಂದು ಹೋದನೆಂದು ಯಾರೂ ಹೇಳುವಂತಿರಲಿಲ್ಲ, ನಮಗೆ ನಿದ್ದೆ ಬರುವ ನಿಶ್ಚಿತ ಕ್ಷಣ ಯಾವುದೆಂದರೆ ಯಾರು ಹೇಳಬಲ್ಲರು?—ಅದರಂತೆ. ಏಳನೆಯ ದಿನ ಮುಂಜಾನೆ ಆತ ಸ್ವಲ್ಪ ಹೊತ್ತು ಟಿಪ್ಪಣಿ ಬರೆದು ಮುಗಿಸಿ ಕೋಣೆಯನ್ನು ಸುತ್ತಲು ಆರಂಭಿಸಿದ್ದನು. ಆ ಮೇಲೆ ಅವನಿಗೆ ಎಚ್ಚರವಾದುದು ಮಧ್ಯಾಹ್ನದ ಊಟಕ್ಕೆಂದು ಪಹರೆಯವನು ಬಾಗಿಲಿನ ಕೀಲಿಯನ್ನು ಸದ್ದು ಮಾಡಿದಾಗಲೇ. ಅಂದರೆ ಆತ ಗಂಟೆ

ಕಟ್ಟಲೆ ಶತಪಥ ತುಳಿದಿರಬೇಕು; ನಡುವೆ ಹಲ್ಲುನೋವಿನಿಂದ ರಕ್ಷಿಸಿ ಕೊಳ್ಳಲು ಕಂಬಳಿಯನ್ನು ಹೊದ್ದುಕೊಂಡಿರಬೇಕು. ಬಟ್ಟಲಿನಲ್ಲಿ ಸಿಪಾಯಿಗಳು ಹಾಕಿದ ಆಹಾರವನ್ನು ತಿಂದು ಮುಗಿಸಿ ರುಬಷೊವ ಮತ್ತೆ ನಡೆಯಲು ಆರಂಭಿಸಿದನು. ಪಹರೆಯವನು ಬಾಗಿಲ ತೂತಿನಿಂದ ನೋಡಿದರೆ ರುಬಷೊವನ ತುಟಿ ಅಲುಗುವುದನ್ನು ಕಾಣಬಹುದಿತ್ತು.

ಮರಳಿ **ವ್ಯಾಪಾರಿ ನಿಯೋಗದ** ಕಚೇರಿಯ ವಾಸನೆ ರುಬಷೊವನ ಮೂಗಿಗೆ ಬಡಿಯುತಿತ್ತು. ಅದರಲ್ಲಿ ಅರ್ಲೋವಳ ದಪ್ಪನೆಯ ಹೃಷ್ಟ ಪುಷ್ಟ ದೇಹದ ಚಿರಪರಿಚಿತ ವಾಸನೆ ಬೆರೆತಿತ್ತು. ಬಿಳೀ ರವಕೆಯ ಮೇಲ್ಗಡೆ ಕಾಣುತ್ತಿದ್ದ ಅವಳ ಕತ್ತಿನ ರೇಖೆಯನ್ನು ರುಬಷೊವ ಮರಳಿ ಗುರುತಿಸಿದನು. ಆಕೆ ರುಬಷೊವ ಹೇಳಿದ್ದನ್ನು ಬರೆದುಕೊಳ್ಳುತ್ತಿದ್ದಳು; ರುಬಷೊವನ ಸಹೋದರಿಯರಂತೆ ಯಾವಾಗಲೂ ಬಿಳೀ ರವಕೆಯನ್ನೇ ಧರಿಸುತ್ತಿದ್ದಳು; ಕುತ್ತಿಗೆಯ ಸಮೀಪ ಆ ರವಕೆಯಲ್ಲಿ ಬಣ್ಣದ ಹೂವಿರುತಿತ್ತು. ಅವಳು ಹತ್ತಿರದಲ್ಲಿದ್ದರೆ ರುಬಷೊವನ ಆಯಾಸಿತ ನರಮಂಡಲವು ಶಾಂತವಾಗುತಿತ್ತು. ಕುಂಟ ಲೋವಿಯ ಘಟನೆ ಮುಗಿದ ಮೇಲೆ ರುಬಷೊವಗೆ 'ಬಿ' ದೇಶದ ವ್ಯಾಪಾರಿನಿಯೋಗದ ಅಧಿಕಾರವನ್ನು ಕೊಟ್ಟಿದ್ದರು. ಅವನು ತಡಮಾಡದೆ ಅದರಲ್ಲಿ ಕಾರ್ಯ ಪ್ರವೃತ್ತನಾಗಿದ್ದನು. ಒಂದು ರೀತಿಯಲ್ಲಿ ಇದು ವಿಶೇಷವೆನ್ನಬೇಕು. 'ಇಂಟರ್‌ನ್ಯಾಷನಲ್'ನಲ್ಲಿದ್ದ ತನ್ನ ಸಹಚರರಿಗೇಗೆ ಒಂದನೆಯ ನಂಬರಿನವನು ರಾಯಭಾರದ ಯಾವ ಕೆಲಸವನ್ನೂ ಒಪ್ಪಿಸುತ್ತಿರಲಿಲ್ಲ. ಈ ಎರಡು ಇಲಾಖೆಗಳನ್ನು ಒಂದಕ್ಕೊಂದು ದೂರವಾಗಿಡುವುದು ಅವನ ಪದ್ಧತಿ. ರಾಯಭಾರಿ ಕಚೇರಿಯ ಸದಸ್ಯರೂ, 'ಇಂಟರನ್ಯಾಷನಲ್‌ನ' ಮಿತ್ರರೂ ಒಬ್ಬರೊಡನೊಬ್ಬರು ಮಾತನಾಡುವ ಸಂದರ್ಭಗಳೇ ಇರಲಿಲ್ಲ. ಒಮ್ಮೊಮ್ಮೆ ಅವರ ಧೋರಣೆಗಳಲ್ಲಿ ಸಾಂಗತ್ಯದ ಬದಲು ಅನ್ಯೋನ್ಯ ವಿರೋಧವು ಕಂಡುಬರುತಿತ್ತು. ಆದರೇನಂತೆ, ಒಂದನೆ ನಂಬರಿನವನ ವ್ಯಕ್ತಿತ್ವದಲ್ಲಿ ಇಂಥ ವಿರೋಧಗಳೆಲ್ಲ ವಿಲೀನವಾಗಿ ಸಾಂಗತ್ಯವು ತನ್ನಿಂದ ತಾನೇ ಏರ್ಪಡುತಿತ್ತು.

ರುಬಷೊವಗೆ ಈ ಹೊಸ ಜೀವನಕ್ಕೆ ಹೊಂದಿಕೊಳ್ಳಲು ಸ್ವಲ್ಪ ಸಮಯ ಹಿಡಿಯಿತು. ತನ್ನ ಹೆಸರಿನಲ್ಲಿರುವ ರಾಯಭಾರಿ ಪಾಸ್-ಪೋರ್ಟನ್ನು ನೋಡಿದರೆ ಅವನಿಗೇಕೋ ಮೋಜೆನಿಸುತಿತ್ತು. ಅದೇ ರೀತಿ ವಿಶಿಷ್ಟವಾದ ಉಡುಪಿನಲ್ಲಿ ಭೋಜನ ಕೂಟಗಳಿಗೆ ತೆರಳುವಾಗಲೂ ಪೋಲೀಸರು ಅವನನ್ನು ಕಂಡ ಕೂಡಲೆ ಶಿಸ್ತಿನಲ್ಲಿ ನಿಂತು ನಮಸ್ಕರಿಸುವಾಗಲೂ, ಗುಪ್ತಚರರು ಸಾಮಾನ್ಯ ಜನರಂತೆ ವೇಷ ಧರಿಸಿ ಅವನ ಜೀವ ರಕ್ಷಣೆಗೆಂದು ಅವನ ಹಿಂದೆ ಸುಳಿಯುತ್ತಿರುವಾಗಲೂ, ರುಬಷೊವಗೆ ಏನೋ ಸ್ವಾರಸ್ಯವೆನಿಸುತಿತ್ತು.

ವ್ಯಾಪಾರಿ ನಿಯೋಗದ ಕಚೇರಿಯ ವಾತಾವರಣವು ರೂಢಿಯಾಗುವ ತನಕ ರುಬಷೊವಗೆ ಸ್ವಲ್ಪ ಕಷ್ಟವಾಯಿತೆಂದೇ ಹೇಳಬೇಕು. 'ಬೂರ್ಜ್ವಾ' ಜಗತ್ತಿನ ಆಟದ ನಿಯಮಗಳನ್ನು ಪಾಲಿಸುವಾಗ ಯಾವುದು ನಿಜ, ಯಾವುದು ಸೋಗೆಂದು ವಿವೇಚಿಸುವುದು ಕಠಿಣ. ನಿಯೋಗದ ಪ್ರಥಮ ಸಚಿವನು ರುಬಷೊವನ ಉಡುಪಿನಲ್ಲಿಯೂ, ಜೀವನದ ಮಾದರಿಯಲ್ಲಿಯೂ ಇಂತಿಂಥ ಬದಲಾವಣೆಗಳಾಗಬೇಕು ಎನ್ನುವಾಗ ಅದನ್ನು ವಿನೋದವಾಗಿ ಕಾಮ್ರೇಡನಂತೆ ಸೂಚಿಸದೆ ಬಹು ವಿನಯದಿಂದ ಅಂಗಲಾಚುವಂತೆ ಹೇಳಿದುದು ರುಬಷೊವನ ಅನುಭವಕ್ಕೆ ಹೊಸದಾಗಿತ್ತು.

ರುಬಷೊವನ ಕೆಳಗೆ ಹನ್ನೆರಡು ಮಂದಿ ಅಧಿಕಾರಿಗಳಿದ್ದರು: ಪ್ರಥಮ ಸಚಿವ, ದ್ವಿತೀಯ ಸಚಿವ ಎಂದು ಮುಂತಾಗಿ ಪ್ರತಿಯೊಬ್ಬರಿಗೂ ಅವರವರ ಪ್ರತ್ಯೇಕ ಸ್ಥಾನನಿರ್ದೇಶವಿರುತಿತ್ತು. ಅವರೆಲ್ಲರೂ ರುಬಷೊವ ಒಬ್ಬ ರಾಷ್ಟ್ರನಾಯಕನೆಂದೋ ಅಥವಾ ದರೋಡೆಗಾರರ ಮುಖ್ಯಸ್ಥನೆಂದೋ ಭಾವಿಸಿ ಆ ಸ್ಥಾನಕ್ಕನುಗುಣವಾದ ಗೌರವವನ್ನು ತೋರಿಸುವಂತಿತ್ತು. ಇವರೆಲ್ಲರ ಪೈಕಿ ಅರ್ಲೋವಾ ಒಬ್ಬಳೇ ರುಬಷೊವನ ಪರಮಂಡಲಕ್ಕೆ ಪೀಡೆಯಾಗಿರದವಳು; ಆದರೂ ಅವಳೇಕೆ ಸಾದಾ ಬಿಳೀ ರವಕೆ ಮತ್ತು ಲಂಗದ ಜತೆಗೆ ಎತ್ತರವಾದ ಹಿಮ್ಮಡಿಯುಳ್ಳ ಬೂಟನ್ನು ಧರಿಸುತ್ತಿದ್ದಳೆಂದು ಅವನಿಗೆ ಅರ್ಥವಾಗುತ್ತಿರಲಿಲ್ಲ.

ಅವಳ ಹತ್ತಿರ ಸಂಭಾಷಣೆಯ ಧ್ವನಿಯಲ್ಲಿ ಮಾತನಾಡಬೇಕಾದರೆ ಅವನಿಗೆ ಒಂದು ತಿಂಗಳು ಹಿಡಿಯಿತು. ಅವಳಿಗೋಸ್ಕರ ಉಕ್ತ ಲೇಖನ ಹೇಳಿ ಹೇಳಿ ಅವನಿಗೆ ಬೇಸರ ಬರುತ್ತಿತ್ತು, ನಡುವೆ ತಾನು ಮಾತು ನಿಲ್ಲಿಸಿದರೆ ಅದೆಂಥ ಮೌನ ಅಲ್ಲಿ ನೆಲಸುವುದೆಂಬುದರ ಅರಿವಾಗಿ 'ಕಾಮ್ರೇಡ್ ಅಲೋರ್ವಾ, ನೀನೇಕೆ ಯಾವಾಗಲೂ ಮೌನ ವಾಗಿದ್ದೀಯಾ?' ಎಂದು ಒಂದು ದಿನ ಕೇಳಿದನು. ಬರೆಯುವ ಮೇಜಿನ ಹಿಂದುಗಡೆ ಇದ್ದ ಕುರ್ಚಿಯನ್ನೆಳೆದುಕೊಂಡು ಅದರಲ್ಲಿ ಸುಖಾಸೀನ ನಾದನು.

ಅಲೋರ್ವಾ ತನ್ನ ಅರ್ಧನಿದ್ರೆಯ ಸ್ವರದಲ್ಲಿ 'ಬೇಕಾದರೆ ವಾಕ್ಯದ ಕೊನೆಯ ಪದವನ್ನು ಹೇಳುತ್ತೇನೆ' ಎಂದಳು.

ಪ್ರತಿದಿನವೂ ಆಕೆ ಬಿಳೇರವಕೆಯನ್ನು ಧರಿಸಿ, ಮೇಜಿನ ಮೇಲೆ ತನ್ನ ಭಾರವಾದ, ರೂಪವತ್ತಾದ ಸ್ತನಗಳನ್ನಿರಿಸಿ ಕೂತಿರುತ್ತಿದ್ದಳು. ಅವಳು ಬರೆಯುವಾಗ ಬೂಟಿನ ಸಪ್ಪಳವನ್ನು ಮಾಡುತ್ತಿರಲಿಲ್ಲ. ಅವಳ ಕೈಯಲ್ಲಿ ಟಿಪ್ಪಣಿ ಬರೆಸುವಾಗ ಅವನು ಆಚೆ ಈಚೆ ನಡೆಯುತ್ತಿದ್ದು ದರಿಂದ ಅವನಿಗೆ ಅವಳ ಬಗ್ಗಿದ ಕೊರಳಿನ ಆಕಾರವು ಸರಿಯಾಗಿ ಜ್ಞಾಪ ಕದಲ್ಲಿತ್ತು: ಬಿಳಿಯ ತೊಗಲು ಕಶೇರುಕದ ಮೇಲ್ಗಡೆ ದಿಟ್ಟತನದಿಂದ ನಿಂತಿತ್ತು, ಅದರ ಕೆಳಗಡೆ ಕಸೂತಿಯ ಹೂಗಳಿದ್ದುವು.

ರುಬಷೊವ ತಾರುಣ್ಯದಲ್ಲಿ ಹೆಚ್ಚಾಗಿ ಹೆಂಗಸರ ಗೊಡವೆಗೆ ಪೋದವನಲ್ಲ. ಅವನ ಪರಿಚಯದ ಹೆಂಗಸರಲ್ಲಿ ಹೆಚ್ಚಿನವರು ಪಾರ್ಟಿಯ ಸದಸ್ಯರು, ಕಾಮ್ರೇಡರು. ಅವರೊಡನೆ ಚರ್ಚೆಗೆ ಆರಂಭಿಸಿದರೆ ಅದು ರಾತ್ರಿ ಬಹಳ ಹೊತ್ತಿನ ವರೆಗೂ ನಡೆದು ಕೊನೆಗೆ ಟ್ರಾಮ್ ತಪ್ಪುವುದೇ ರೂಢಿ.

ಸಂಭಾಷಣೆಯನ್ನು ಆರಂಭಿಸುವುದರಲ್ಲಿ ರುಬಷೊವ ಮೊದಲ ಬಾ ರಿಗೆ ಯಶಸ್ವಿಯಾಗಿ ಹದಿನೈದು ದಿನಗಳ ತರುವಾಯ ಆತ ಅಲೋರ್ವಳ ಭುಜದ ಮೇಲೆ ಕೈಯಿಟ್ಟು ಸಂಜೆ ಹೊರಗೆ ಅಡ್ಡಾಡಲು ಹೋಗೋಣವೆ? ಎಂದು ಕೇಳಿದನು. ಆಕೆ ತಿರುಗಿ ನೋಡಲಿಲ್ಲ. ಅವನ ಸ್ಪರ್ಶ ದಿಂದ ನಡುಗಲಿಲ್ಲ. ಮೌನವಾಗಿ ತಲೆದೂಗಿ ಸಮ್ಮತಿಸಿದಳು.

ರಸಿಕತನದ ಮಾತನ್ನಾಡುವುದು ರುಬಷೊವನ ಸ್ವಭಾವದಲ್ಲಿರ ಲಿಲ್ಲವಾದರೂ ಅದೇ ದಿನ ರಾತ್ರಿ 'ಇನ್ನೂ ನೀನು ಉಕ್ತಲೇಖನವನ್ನು ಬರೆದುಕೊಳ್ಳುವ ಕಾರ್ಯದರ್ಶಿಯ ಹಾಗೆಯೇ ಗಂಭೀರವಾಗಿದ್ದೀಯಾ?' ಎಂದು ಮುಗುಳ್ನಗೆಯಿಂದ ಹೇಳಿದನು. ಅವಳ ಚೆಲುವಾದ ದೊಡ್ಡ ಸ್ತನಗಳನ್ನು ಕೊಠಡಿಯ ಅಂಧಕಾರದ ಹಿನ್ನೆಲೆಯಲ್ಲಿ ನೋಡಿದರೆ ರುಬಷೊವಗೆ ಆಕೆ ಆ ಕೊಠಡಿಯಲ್ಲಿ ಸದಾಕಾಲವೂ ವಾಸಮಾಡಿರುವಂತೆ ಅನಿಸಿತು. ಕಿವಿಯ ಲೋಲಕು ಮಾತ್ರ ಈಗ ತಲೆದಿಂಬಿನ ಮೇಲೆ ಅಂಗಾತ ಬಿದ್ದಿತ್ತು. ಅವಳ ಕಣ್ಣಿನಲ್ಲಿ ಬೇರೆ ಭಾವವೇ ಇರಲಿಲ್ಲ. ಅವಳ ಒಂದು ಮಾತು ರುಬಷೊವನ ಚಿತ್ತದಲ್ಲಿ ಪೇತಾ ಚಿತ್ರದಂತೆ ಅಥವಾ ರೇವು ಪಟ್ಟಣದ ಕೊಳೆನಾತದಂತೆ ಅಮರವಾಗಿ ಅಚ್ಚೊತ್ತಿತು. ಅದೇನೆಂದರೆ 'ನೀವು ನನಗೆ ಬೇಕಾದ್ದನ್ನು ಮಾಡಬಲ್ಲಿರಿ.'

ರುಬಷೊವ ಆಶ್ಚರ್ಯದಿಂದ 'ಅದೇಕೋ?' ಎಂದು ಕೇಳಿದನು.

ಆಕೆ ಉತ್ತರಿಸಲಿಲ್ಲ. ಪ್ರಾಯಃ ಆಕೆಗೆ ನಿದ್ದೆ ಬಂದಿರಬೇಕು. ಉಸಿರಾಡುವ ಸದ್ದು ನಿದ್ದೆಯಲ್ಲೂ ಕೇಳಿಸುತ್ತಿರಲಿಲ್ಲ. ರುಬ ಷೊವಗೆ ಅವಳು ಉಸಿರಾಡಿದ್ದೇ ಕಾಣಲಿಲ್ಲ. ಅವಳು ಕಣ್ಣು ಮುಚ್ಚಿದುದನ್ನು ಆತ ಕಂಡಿರಲಿಲ್ಲ. ಮುಚ್ಚಿದ ಕಣ್ಣುಗಳಿಂದಾಗಿ ಅವಳ ಮುಖವು ಅವನಿಗೆ ಮತ್ತಷ್ಟು ಅಪರಿಚಿತವಾಗಿ ತೋರುತ್ತಿತ್ತು; ಕಣ್ಣು ತೆರೆದ ಸಮಯಕ್ಕಿಂತ ಈಗ ಅದರಲ್ಲಿ ಹೆಚ್ಚು ಅಭಿವ್ಯಕ್ತಿ ಇತ್ತು. ಅವಳ ಕೌಂಕುಳಿನ ಕರಿನೆಳಲೂ ಅವನಿಗೆ ಅಪರಿಚಿತ; ಅವಳ ಗಲ್ಲವು ಸ್ತನಗಳ ಕಡೆಗೆ ಬಾಗದೆ ಎತ್ತಿಕೊಂಡಿರಲಾಗಿ ಅದೂ ಅಪರಿಚಿತ. ಆದರೆ ಅವಳ ದೇಹದ ಮಂದ ವಾಸನೆಯೊಂದು ಮಾತ್ರ ಸುಪರಿಚಿತ.

ಮರುದಿನ, ಆ ಮೇಲಿನ ದಿನಗಳು, ಆಕೆ ಮತ್ತೆ ಬಿಳೀ ರವಕೆಯನ್ನು ಧರಿಸಿ ಡೆಸ್ಕಿನ ಮುಂದೆ ಕೂತು ರುಬಷೊವನ ಹೇಳಿಕೆಗಳನ್ನು ಬರೆದುಕೊಳ್ಳುತ್ತಿದ್ದಳು. ರುಬಷೊವ ಹಗಲೂ ಇರುಳೂ ಅವಳ ಭಾರವಾದ ದೇಹದ ಪರಿಸರದಲ್ಲಿ ಜೀವಿಸುತ್ತಿದ್ದನು. ಆದರೆ ವರ್ತನೆಯಲ್ಲಿ ಯಾವ ಬದಲಾವಣೆಯೂ ಇರಲಿಲ್ಲ. ಉಕ್ತಲೇಖನ

ದಿಂದ ಬೇಸರಬಂದು ಆತ ಎಲ್ಲಾದರೂ ಆಕೆಯ ಭುಜದ ಮೇಲೆ ಕೈಯಿಟ್ಟಾಗಲೂ ಆಕೆ ಸಿಟ್ಟಿಸ್ನಳು, ಒಂದಿಂಚು ಚಲಿಸಳು.

ಕೆಲವು ಸಲ ರುಬಷೊವ ತನ್ನ ಹೇಳಿಕೆಗಳ ಮೇಲೆ ವ್ಯಂಗ್ಯವಾಗಿ ತಾನೇ ಟೀಕೆ ಮಾಡುತ್ತಿದ್ದನು. ಆ ಕಾಲದಲ್ಲಿ ಆಕೆ ಪೆನ್ಸಿಲನ್ನು ಕೈಯಲ್ಲಿ ಹಿಡಿದುಕೊಂಡು ಅವಿಚಲ ನೇತ್ರಗಳಿಂದ ವ್ಯಂಗ್ಯೋಕ್ತಿಯು ಮುಗಿಯುವ ವರೆಗೆ ಬರವಣಿಗೆ ನಿಲ್ಲಿಸುವಳು. ಆ ಟೀಕೆಗಳನ್ನು ಕೇಳಿ ಆಕೆ ನಕ್ಕದ್ದಿಲ್ಲ, ತನ್ನ ವಿಚಾರಗಳೇನೆಂದು ತಿಳಿಸಿದ್ದಿಲ್ಲ. ಆದರೆ ಎಲ್ಲೋ ಒಮ್ಮೆ ರುಬಷೊವ ಒಂದನೆಯ ನಂಬರಿನವನ ವೈಯಕ್ತಿಕ ಚಟದ ಕುರಿತು ಟೀಕೆಯ ಬಾಣ ಎಸೆದಾಗ ಅರ್ಲೋವಾ 'ನೀನು ಇನ್ನೊಬ್ಬರಿರುವಾಗ ಹೀಗೆಲ್ಲ ಟೀಕೆ ಮಾಡಬಾರದು, ಒಟ್ಟಿನಲ್ಲಿ ನೀನು ಸ್ವಲ್ಪ ಎಚ್ಚರವಾಗಿದ್ದರೆ ಕ್ಷೇಮ........' ಎಂದಿದ್ದಳು. ಆದರೂ ಮೇಲಿನಿಂದ ಆಜ್ಞೆಗಳು ಬಂದಾಗ ರುಬಷೊವ ಟೀಕಿಸದೆ ಸುಮ್ಮನಿರಲಾರ.

ವಿರೋಧಿಗಳ ದ್ವಿತೀಯ ಮಹಾವಿಚಾರಣೆಯ ಸಂಧಿಕಾಲ ಅದು. ವ್ಯಾಪಾರಿ ನಿಯೋಗದ ವಾತಾವರಣ ದಿನದಿಂದ ದಿನ ದುರ್ಭರವಾಗುತಿತ್ತು. ಎಷ್ಟೋ ಕಾಲದಿಂದ ಗೋಡೆಗಳಲ್ಲಿ ತೂಗ ಹಾಕಿದ್ದು, ಯಾರೂ ಆ ಕಡೆ ನೋಟವನ್ನು ಹಾಯಿಸದ ಪಟಗಳೂ ರಾತ್ರಾರಾತ್ರಿ ಅಲ್ಲಿಂದ ಮಾಯವಾಗಿ ಅವುಗಳ ಸ್ಥಾನದಲ್ಲಿ ಚೌಕದ ಕಲೆಗಳು ಏಳುತ್ತಿದ್ದವು. ಕಚೇರಿಯ ಸಿಬ್ಬಂದಿಯವರು ಕೆಲಸಕ್ಕೆ ಸಂಬಂಧಿಸದ ಯಾವ ವಿಷಯದ ಕುರಿತೂ ಮಾತನಾಡರು, ಆಡಿದರೂ ಬಹಳ ನಾಜೂಕಿನಿಂದ ಮಾತನಾಡುವರು. ಕೆಂಟೀನಿನಲ್ಲಿಯೂ ಮೇರೆ ಮೀರಿದ ಯಾವ ಮಾತೂ ಕೇಳಿಸದು. 'ಬಿಸ್ಕಿಟು ತಾ' ಎಂದು ಹೇಳಿ 'ಚಾ ತೆಗೆದು ಕೊಂಡು ಬಾ' ಎನ್ನುವ ಕಾಲಾಂತರದಲ್ಲಿ ಅವರ ಬಾಯಿಯಿಂದ ಪಾರ್ಟಿ ಕಾಂಗ್ರೆಸಿನ ಘೋಷಣೆಯ ನಿಷ್ಕೃಷ್ಟ ನುಡಿಗಟ್ಟಿನ ಹೊರತು ಬೇರಾವ ಸೊಲ್ಲೂ ಹೊರಡದು. ಒಮ್ಮೊಮ್ಮೆ 'ನಾನು ಹಾಗೆ ಹೇಳಲಿಲ್ಲ' 'ನನ್ನ ಅರ್ಥ ಹಾಗಲ್ಲವೇ ಅಲ್ಲ' ಎಂದು ಏರಿಸಿದ ಧ್ವನಿಯಲ್ಲಿ ಅವರು ಆಡುತ್ತಿದ್ದುದುಂಟು, ಸುತ್ತಣವರನ್ನು ಸಾಕ್ಷಿಗೆ ಕರೆದುದುಂಟು. ಎಲ್ಲರೂ ಗೊಂಬೆಯಾಟದ ಗೊಂಬೆಗಳಂತೆ ಹೇಳಿ ಕೊಟ್ಟ ಮಾತನ್ನೇ

ಮರಳಿ ಮರಳಿ ಒಪ್ಪಿಸುವಂತೆ ತೋರುತಿತ್ತು ರುಬಷೊವಗೆ. ಅರ್ಲೋವಾ ಮಾತ್ರ ಅವಳ ಚಿರಮೌನ ಮತ್ತು ನಿದ್ರಾಭಾವದ ದೆಸೆಯಿಂದ ಹೊಸ ವಾತಾವರಣದಿಂದ ಪ್ರಭಾವಿತಳಾಗದೆ ಉಳಿದಂತೆ ತೋರುತಿತ್ತು.

ಗೋಡೆಯ ಚಿತ್ರಗಳಲ್ಲದೆ ಪುಸ್ತಕ ಭಂಡಾರದಲ್ಲಿದ್ದ ಪುಸ್ತಕಗಳೂ ಪ್ರಕಟನೆಗಳೂ ಮೇಲಿನ ಅಪ್ಪಣೆ ಬಂದ ರಾತ್ರಿಯೇ ಯಾರಿಗೂ ತಿಳಿಯದಂತೆ ಮಾಯವಾಗುತ್ತಿದ್ದುವು. ಈ ಕುರಿತು ರುಬಷೊವ ಏನು ತಮಾಷೆ ಮಾಡಿದರೂ ಅರ್ಲೋವಾ ತುಟಿ ಪಿಟ್ಟೆನ್ನದೆ ಕೇಳುವಳು. ವಿದೇಶೀಯ ವ್ಯಾಪಾರ ಮತ್ತು ಹಣಕಾಸಿನ ಅನೇಕ ಗ್ರಂಥಗಳು ಕಪಾಟಿನಿಂದ ಮಾಯವಾದುವು. ಕಾರಣ ಅವುಗಳ ಲೇಖಕನೂ ದೇಶದ ಅರ್ಥ ಮಂತ್ರಿಯೂ ಆಗಿದ್ದವನನ್ನು ಅಧಿಪತ್ಯವು ಸೆರೆ ಹಿಡಿದಿತ್ತು. ಅದೇ ರೀತಿ ಹಳೆ ಪಾರ್ಟಿ ಸಮ್ಮೇಳನದ ವರದಿಗಳೂ, ಕ್ರಾಂತಿಯ ಇತಿಹಾಸದ ಆಧಾರ ಗ್ರಂಥಗಳೂ, ನ್ಯಾಯಶಾಸ್ತ್ರ ಮತ್ತು ದರ್ಶನಶಾಸ್ತ್ರದಲ್ಲಿ ಜೀವಂತ ಲೇಖಕರ ಹಲವು ಕೃತಿಗಳೂ, ಸಂತತಿ ನಿಯಂತ್ರಣದ ಕುರಿತು ಎಲ್ಲಾ ಕೃತಿಗಳೂ, ಜನಸೇನೆಯ ರಚನೆಯ ಮೇಲೆ ಬರೆಯಲಾದ ಉದ್ಗ್ರಂಥಗಳೂ, ಕಾರ್ಮಿಕ ಚಳವಳದ ಗ್ರಂಥಗಳೂ, ರಾಷ್ಟ್ರೀಯ ಅಕೆಡೆಮಿಯಿಂದ ಪ್ರಕಟನೆಯಾದ ವಿಶ್ವಕೋಶವೂ (ಇನ್ನೊಂದು ವಿಶ್ವಕೋಶ ತಯಾರಾಗಿ ಬರುವುದೆಂಬ ಆಶ್ವಾಸನೆಯ ಮೇಲಿಂದ) ಕಚೇರಿಯ ಕಪಾಟುಗಳಿಂದ ಖಾಲಿಯಾದುವು.

ನವೀನ ಗ್ರಂಥಗಳು ಆಮದಾದುವು, ಸಮಾಜ ಶಾಸ್ತ್ರದ ಪ್ರಾಚೀನ ಗ್ರಂಥಗಳ ಕೆಳಗಡೆ ಟಿಪ್ಪಣಿ ಸೇರಿಸಲಾಗಿತ್ತು. ಹಳೆಯ ಇತಿಹಾಸವು ಹೊಸ ರೂಪವನ್ನು ತಳೆದು ಬಂತು. ನಾಯಕರ ಜೀವನ ಚರಿತ್ರೆಯ ಅಚ್ಚು ಹೊಸ ಆವೃತ್ತಿಗಳು ಕಪಾಟನ್ನು ತುಂಬಿಕೊಂಡವು. ರುಬಷೊವ ಆಗ ಅರ್ಲೋವಳಿಗೆ 'ಇನ್ನು ಉಳಿದದ್ದೆಂದರೆ ಒಂದೇ: ಹಳೆಯ ಎಲ್ಲಾ ದಿನಪತ್ರಿಕೆಗಳ ಹೊಸ ಆವೃತ್ತಿಯನ್ನು ಹೊರಡಿಸುವುದು' ಎಂದನು.

ಅಷ್ಟರಲ್ಲಿ, ಅಂದರೆ ಕೆಲವು ವಾರಗಳ ಹಿಂದೆ 'ಮೇಲಿ'ನಿಂದ ಒಂದು ಅಪ್ಪಣೆ ಹೊರಟಿತು: ಸಿಬ್ಬಂದಿಗದ ಪುಸ್ತಕ ಭಂಡಾರದ ರಾಜಕೀಯ ಹೊಣೆಯನ್ನು ಹೊರಬಲ್ಲ ಒಬ್ಬ ಲೈಬ್ರೇರಿಯನನನ್ನು ನೇಮಿಸಬೇಕು.

ಎಂದು. ಈ ಹುದ್ದೆಗೆ ಅರ್ಲೋವಳನ್ನು ನೇಮಿಸಲಾಯಿತು. ರುಬಷೊವ ಇದೇನೋ ಮಕ್ಕಳಾಟಿಕೆ' ಎಂದು ಭಾವಿಸಿದ್ದನು. ಆದರೆ ನಿಯೋಗದ ಪಾರ್ಟಿಯ ಸದಸ್ಯರ ಸಭೆಯಲ್ಲಿ ಒಂದು ದಿನ ಅರ್ಲೋವಳ ವಿಮರ್ಶೆ ನಡೆಯಿತು. ಪ್ರಥಮ ಸಚಿವನೂ ಸೇರಿ ಮೂರು ನಾಲ್ಕು ಮಂದಿ ನಿಯೋಗದ ಪುಸ್ತಕ ಭಂಡಾರದಲ್ಲಿ ಒಂದನೆಯ ನಂಬರಿನವನ ಭಾಷಣದ ಹೊತ್ತಿಗೆಗಳ ಬದಲು ವಿರೋಧಕರ ಗ್ರಂಥಗಳನ್ನಿಟ್ಟಿರುವರೆಂದೂ, ಈಗ ಗೂಢಚಾರರೆಂದೂ, ದೇಶದ್ರೋಹಿಗಳೆಂದೂ ತೀರ್ಮಾನಿಸಲ್ಪಟ್ಟ ಎಷ್ಟೋ ರಾಜಕೀಯಸ್ತರ ಗ್ರಂಥಗಳನ್ನು ಉದ್ದೇಶಪೂರ್ವಕವಾಗಿ ಪುಸ್ತಕ ಭಂಡಾರದಲ್ಲಿ ಇಟ್ಟಹಾಗಿದೆಯೆಂದೂ ನಾನಾ ರೀತಿಯ ಆಪಾದನೆಯನ್ನು ಹೊರಿಸಿದರು. ಮಾತನಾಡಿದ ಯಾವನೂ ಭಾವೋದ್ರೇಕಕ್ಕೆ ಒಳಗಾದಂತೆ ತೋರಲಿಲ್ಲ, ಕೆಲವೇ ಕೆಲವು ಆಯ್ದ ನುಡಿಗಟ್ಟಿನಲ್ಲಿ ಅವರು ತಮ್ಮ ಟೀಕೆಯನ್ನು ವರ್ಣಿಸಿದರು. ಮೊದಲೇ ತಯಾರಿಸಿದ ಒಂದು ನಾಟಕವನ್ನು ಅವರು ಒಬ್ಬರಿಗೊಬ್ಬರು ಹೇಳಿಕೊಡುವಂತಿತ್ತು. ಎಲ್ಲ ಭಾಷಣಗಳ ಸಾರವೂ ಒಂದೇ ಒಂದಾಗಿತ್ತು: ಪಾರ್ಟಿಯು ಬಹಳ ಜಾಗರೂಕವಾಗಿರತಕ್ಕದು, ದುರ್ವರ್ತನೆಗಳನ್ನು ಕಟುವಾಗಿ ಬಯಲಿಗೆಳೆಯಬೇಕಾದುದು ಎಲ್ಲರ ಕರ್ತವ್ಯ, ಈ ಕರ್ತವ್ಯವನ್ನು ಮಾಡದವನು ವಿದ್ರೋಹಿಗಳ ಸಹಾಯಕನೆಂದು ತಿಳಿಯತಕ್ಕದು. ಆ ಮೇಲೆ ಅರ್ಲೋವಾ ತನ್ನ ಹೇಳಿಕೆಯನ್ನು ಕೊಟ್ಟಳು—ಸಮಾಧಾನದಿಂದ: ತನಗೆ ಯಾವ ದುರುದ್ದೇಶವೂ ಇಲ್ಲವೆಂದೂ, ತಾನು ಮೇಲಿನ ಅಧಿಕಾರಿಗಳ ಆದೇಶವನ್ನು ಯಥಾಯೋಗ್ಯ ಪಾಲಿಸಿರುವೆನೆಂದೂ ಆಕೆ ನುಡಿದಳು. ಕೊನೆಯಲ್ಲಿ ಅವಳ ದೃಷ್ಟಿ ಅದೇಕೋ ರುಬಷೊವನಲ್ಲಿ ಸ್ವಲ್ಪ ಹೊತ್ತು ತಡೆದುನಿಂತಿತು. ಸಭೆಯಲ್ಲಿ ಅರ್ಲೋವಳಿಗೆ 'ಗಂಭೀರ ಎಚ್ಚರಿಕೆ'ಯನ್ನು ಕೊಡಬೇಕೆಂಬ ನಿರ್ಣಯವು ಸ್ವೀಕೃತವಾಯಿತು.

ಪಾರ್ಟಿಯು ಇತ್ತೀಚೆಗೆ ಬಳಸಲು ಆರಂಭಿಸಿದ ನವೀನ ಮಾರ್ಗದ ಪರಿಚಯವುಳ್ಳ ರುಬಷೊವ ಈ ನಿರ್ಣಯದಿಂದ ಅಸ್ವಸ್ಥನಾದನು. ಅರ್ಲೋವಳಿಗೇನೋ ಕೇಡು ಕಾದಿದೆ ಎಂದವನಿಗೆ ಗೊತ್ತಾಯಿತು.

ನಿಯೋಗದ ವಾತಾವರಣ ಮತ್ತಷ್ಟು ವಿಷಮವಾಯಿತು. ಉಕ್ತ ಲೇಖನದ ಸಮಯ ಟೀಕೆ ಮಾಡುವುದನ್ನು ರುಬಶೊವ ನಿಲ್ಲಿಸಬೇಕಾಗಿ ಬಂದಾಗ ಆತನಿಗೆ ತಾನೇಕೋ ಮಹಾಪರಾಧಿ ಎಂದು ಭಾಸವಾಗುತ್ತಿತ್ತು. ಅವನ ಮತ್ತು ಅರ್ಲೋವಳ ಸಂಬಂಧದಲ್ಲಿ ಯಾವ ವ್ಯತ್ಯಾಸವುಂಟಾಗದಿದ್ದರೂ ಕೂಡ, ಉಕ್ತಲೇಖನದ ಸಂದರ್ಭದಲ್ಲಿ ಟೀಕೆ ಹೇಳಲಾಗದಿದ್ದುದರಿಂದ ರುಬಶೊವಗೆ ನಡುನಡುವೆ ಅರ್ಲೋವಳ ಭುಜದ ಮೇಲೆ ಕೈಯಿಡುವುದೂ ದುಸ್ತರವೆನಿಸುತ್ತಿತ್ತು. ಒಂದು ವಾರದ ಮೇಲೆ ಅದೊಂದು ಸಂಜೆ ಅರ್ಲೋವಾ ರುಬಶೊವನ ಕೊಠಡಿಗೆ ಬರಲಿಲ್ಲ. ಮತ್ತಿನ ಸಂಜೆಯೂ ಬರಲಿಲ್ಲ. ಕಾರಣವೇನೆಂದು ರುಬಶೊವ ಒಂದು ದಿನ ಕೇಳಿದಾಗ ಆಕೆ ಬಾರದೆ ಮೂರು ದಿನಗಳೇ ಸಂದು ಹೋಗಿದ್ದುವು. ಅವಳೇನೋ ಹೇಳಿದಳು, ರುಬಶೊವ ಅದೇನೆಂದು ಕಿವಿಗೊಡುವ ಪ್ರಯಾಸ ಮಾಡಲಿಲ್ಲ. ಆಕೆ ಆ ಒಂದು ಸರ್ತಿಯ ಹೊರತು ಆ ಮೇಲೆ ಬರಲೇ ಇಲ್ಲ.

ಪಾರ್ಟಿಯ ಸದಸ್ಯರ ಸಭೆಯಲ್ಲಿ 'ಗಂಭೀರ ಎಚ್ಚರಿಕೆ'ಯ ನಿರ್ಣಯವು ಸ್ವೀಕೃತವಾಗಿ ಮೂರು ವಾರಗಳೂ, ರುಬಶೊವನ ಕೋಣೆಗೆ ಬರುವುದನ್ನು ನಿಲ್ಲಿಸಿ ಹದಿನೈದು ದಿನಗಳೂ ಕಳೆದಾಗ ಅರ್ಲೋವಾ ಮತ್ತೆ ರುಬಶೊವನ ಕೋಣೆಯಲ್ಲಿ ಆತನನ್ನು ಭೆಟ್ಟಿಯಾದಳು. ಆಕೆಯ ವರ್ತನೆಯಲ್ಲಿ ಯಾವ ಮಾರ್ಪಾಟಿರಲಿಲ್ಲವಾದರೂ ತನ್ನ ಬಾಯಿಂದ ಯಾವುದೋ ನಿರ್ಣಾಯಕ ವಚನವನ್ನು ಕೇಳಲು ಈಕೆ ಬಂದಿರುವಳೆಂದು ರುಬಶೊವಗೆ ಅನಿಸುತ್ತಿತ್ತು. ಮರಳಿ ಬಂದೆಯಲ್ಲಾ ಸಂತೋಷವಾಯಿತು, ನನಗೀಗ ತೀರ ಆಯಾಸವಾಗಿದೆ, ಕೆಲಸ ಜಾಸ್ತಿ ಎಂಬ ಮಾತುಗಳ ಹೊರತು ಬೇರೇನನ್ನೂ ರುಬಶೊವ ಆಡಲಿಲ್ಲ. ರಾತ್ರಿಯಲ್ಲಿ ಅರ್ಲೋವಾ ಎಚ್ಚರಿಕೆಯಿಂದಿದ್ದು ಮಾಡನ್ನೇ ದಿಟ್ಟಿಸುತ್ತಿದ್ದಳೆಂದು ರುಬಶೊವಗೆ ಅನಿಸುತ್ತಿತ್ತು. ತಾನು ಅಪರಾಧಿ ಎಂಬ ಭಾವನೆಯ ನೋವಿನಲ್ಲಿ ಹಲ್ಲು ನೋವು ಮತ್ತೆ ಪ್ರಾರಂಭವಾದಂತೆ ಅವನಿಗನಿಸಿತು. ಅದೇ ಅವಳ ಕೊನೆಯ ಸಂದರ್ಶನವಾಯಿತು.

ಮರುದಿನ ಅಲೋರ್ನವಾ ಕಚೇರಿಗೆ ಬರುವುದಕ್ಕೆ ಮುಂಚಿತವಾಗಿ ಪ್ರಥಮ ಸಚಿವನು ರುಬಷೊವನ ಹತ್ತಿರ ಬಂದು ಅಲೋರ್ನವಳ ಅಣ್ಣ ಮತ್ತು ಅತ್ತಿಗೆಯನ್ನು 'ಅಲ್ಲಿ' ಬಂಧಿಸಿರುವ ವಿಷಯವನ್ನು ಗೌಪ್ಯವಾಗಿ ತಿಳಿಸಿದನು. ಅಲೋರ್ನವಳ ಅಣ್ಣನ ಹೆಂಡತಿ ಒಬ್ಬ ವಿದೇಶೀಯ ಸ್ತ್ರೀ. ಅವರಿಬ್ಬರೂ ವಿರೋಧಿ ಗುಂಪಿನ ಸಹಾಯಾರ್ಥವಾಗಿ ಆ ವಿದೇಶದೊಡನೆ ಸಂಪರ್ಕವಿಟ್ಟುಕೊಂಡರೆಂಬುದು ಅವರ ಮೇಲಿನ ಆರೋಪವಾಗಿತ್ತು.

ಕೆಲವು ಮಿನಿಟುಗಳ ತರುವಾಯ ಅಲೋರ್ನವಾ ಕಚೇರಿಯನ್ನು ಹೊಕ್ಕು ತನ್ನ ಸ್ಥಾನದಲ್ಲಿ ಕೂತಳು. ರುಬಷೊವ ಅತ್ತಿತ್ತ ತಿರುಗುವಾಗಲೆಲ್ಲ ಆಕೆಯ ಬಿಳಿ ಕೊರಳೂ ಅದರ ಕೆಳಗಿನ ಹೂವೂ ಆತನ ಕಣ್ಣಿಗೆ ಬೀಳುತ್ತಿದ್ದವು. ಅನಾವೃತವಾದ ಕೊರಳಿನ ಆಷ್ಟು ಭಾಗದಿಂದ ರುಬಷೊವನ ಕಣ್ಣು ಹಿಂದೆ ಬರಲೊಲ್ಲದು. 'ಅಲ್ಲಿ' ಆರೋಪಿಗಳನ್ನು ಕೊರಳ ಹಿಂದಿನ ಈ ಭಾಗಕ್ಕೇ ಗುಂಡಿಟ್ಟು ಕೊಂದಿರಬಹುದೆಂಬ ಯೋಚನೆ ಅವನ ಮನಸ್ಸಿನಿಂದ ಎಷ್ಟು ಯತ್ನಿಸಿದರೂ ತೊಲಗಲೊಲ್ಲದು.

ಪಾರ್ಟಿಯ ಇನ್ನೊಂದು ಸಭೆಯಲ್ಲಿ ಪ್ರಥಮ ಸಚಿವನ ಮುಂದಿಟ್ಟ ನಿರ್ಣಯದಂತೆ ಅಲೋರ್ನವಳನ್ನು ಲೈಬ್ರೇರಿಯನ್ ಸ್ಥಾನದಿಂದ ಪದಚ್ಯುತಿ ಮಾಡಲಾಯಿತು. ಯಾವ ಟೀಕೆಯೂ, ಚರ್ಚೆಯೂ ಇಲ್ಲದೆಯೆ ಸಭೆಯಲ್ಲಿ ನಿರ್ಣಯವು ಸ್ವೀಕೃತವಾಯಿತು. ಹಲ್ಲು ನೋವಿನಿಂದ ತೀವ್ರವಾಗಿ ನರಳುತ್ತಿದ್ದ ರುಬಷೊವ ಸಭೆಯಲ್ಲಿ ಹಾಜರಿರಲಿಲ್ಲ. ಕೆಲ ದಿನಗಳ ತರುವಾಯ ಅಲೋರ್ನವಾ ಮತ್ತು ಸಿಬ್ಬಂದಿಯ ಇನ್ನೊಬ್ಬನನ್ನು 'ಅಲ್ಲಿ'ಗೆ ಕರೆಸಿಕೊಂಡರು. ಆ ಮೇಲೆ ನಿಯೋಗದಲ್ಲಿ ಅವರ ಮಾತೆತ್ತಿದವರಿಲ್ಲ; ಆದರೆ ನಿಯೋಗದ ಕಚೇರಿಯ ಕೊಠಡಿಯಲ್ಲಿ ಆಕೆಯ ದೇಹದ ಮಂದ ವಾಸನೆಯು ಗೋಡೆಗೆ ಇನ್ನೂ ಅಂಟಿಕೊಂಡಂತೆ ಅಲ್ಲಿರುವಷ್ಟು ಕಾಲವೂ ರುಬಷೊವನಿಗೆ ಅನಿಸುತಿತ್ತಂತೆ.

## ೪

### ‘ಧರಣೀತಲದ ಪತಿತರೇ, ಜಾಗ್ರತರಾಗಿ’

ರುಬಷೊವನನ್ನು ಸೆರೆಹಿಡಿದ ಹತ್ತನೆಯ ದಿನ ಮುಂಜಾವದಿಂದ ಹಿಡಿದು ಒಂದೇ ಸವನೆ ೪೦೬ನೆಯ ಕೈದಿ ಅಲ್ಲಲ್ಲಿ ತಪ್ಪಾಗಿ ಈ ಮಾತನ್ನು ಗೋಡೆಯಲ್ಲಿ ಬಡಿದು ರುಬಷೊವಗೆ ಹೇಳುತ್ತಿದ್ದನು. ರುಬಷೊವ ಅವನೊಡನೆ ಸಂಭಾಷಿಸಬೇಕೆಂದು ಎಷ್ಟು ಪ್ರಯತ್ನಿಸಿದರೂ ನಿಷ್ಫಲವಾಗುತಿತ್ತು. ರುಬಷೊವನು ಬಡಿಯುವುದನ್ನೆಲ್ಲ ಕೇಳಿಯಾದ ಮೇಲೆ ಅಸಂಬದ್ಧ ಅಕ್ಷರಗಳನ್ನು ಕೆಲವು ಬಡಿದು ಕಟ್ಟಕಡೆಗೆ **‘ಧರಣೀತಲದ ಪತಿತರೇ ಜಾಗ್ರತರಾಗಿ’** ಎಂದು ೪೦೬ ಮುಕ್ತಾಯಗೊಳಿಸುತ್ತಿದ್ದನು.

೪೦೬ನೆಯ ಕೋಣೆಗೆ ಈ ಹೊಸ ಕೈದಿ ಬಂದುದು ಹಿಂದಣ ರಾತ್ರಿ. ರುಬಷೊವಗೆ ಅವನನ್ನು ತಂದಾಗ ಎಚ್ಚರವಿತ್ತು, ಹೊರಗಿನ ಗುಸುಗುಸು ಮಾತು ಅರ್ಥವಾಗುತಿತ್ತು. ಪ್ರಾತಃಕಾಲದ ಪ್ರಥಮ ತುತೂರಿ ಯೂದುತ್ತಲೇ ೪೦೬ ‘ಧರಣೀತಲದ ಪತಿತರೇ, ಜಾಗ್ರತರಾಗಿ’ ಎಂದು ಗೋಡೆ ತಟ್ಟಲು ಆರಂಭಿಸಿದನು. ಬಡಿಯುವುದರಲ್ಲಿ ಆತ ನಿಷ್ಣಾತನಿರಬೇಕು, ಆದರೆ ಮಾನಸಿಕ ತೋಲ ತಪ್ಪಿದ್ದರಿಂದ ಅರ್ಥಶೂನ್ಯವಾದ ಅಕ್ಷರಗಳು ಒಂದರ ಬೆನ್ನಹಿಂದೆ ಇನ್ನೊಂದು ತೆರಳುತ್ತಿದ್ದುವೆಂದು ತೋರುವುದು. ಪ್ರಾಯಶಃ ಹೊಸ ಕೈದಿಯ ತಲೆ ಕೆಟ್ಟಿರಬೇಕು.

ಫಲಾಹಾರದ ತರುವಾಯ ೪೦೭ನೆಯ ಕೋಣೆಯಲ್ಲಿದ್ದ ತರುಣ ಅಧಿಕಾರಿ ಸಂಭಾಷಣೆಯನ್ನು ತೊಡಗಿದನು. ಅವನಿಗೂ ರುಬಷೊವಗೂ ನಡುವೆ ತುಂಬಾ ಮಿತ್ರತ್ವ ಬೆಳೆದಿದ್ದಿತು. ಆತನಿಗೆ ರುಬಷೊವ ನಾಲ್ಕು ಮಾತಾಡಿದರೂ ಪರಮ ಸಂತೋಷವೆನಿಸುತ್ತಿತ್ತು; ಅಂದರೆ ಅವನ ಏಕಾಂತದ ಬೇಸರಿಕೆ ಅಷ್ಟು ಕಠಿನವಾಗಿರಬೇಕು. ದಿನಕ್ಕೆ ಐದಾರು ಬಾರಿಯಾದರೂ ಆತ **‘ಸ್ವಲ್ಪ ಮಾತನಾಡು’** ಎಂದು ರುಬಷೊವನನ್ನು ಅಂಗಲಾಚದ ದಿನವೇ ಇಲ್ಲವೆಂದರೂ ಸಲ್ಲುವುದು.

ರುಬಷೊವಗೆ ಮಾತನಾಡುವುದೇ ಬೇಡವಾಗಿತ್ತು; ಅಲ್ಲದೆ ೪೦೭

ನೆಯವನೊಡನೆ ಮಾತಾಡುವ ವಿಷಯವೇನೂ ಇರಲಿಲ್ಲ. ೪೦೨ನೆಯವನು ಸಾಮಾನ್ಯವಾಗಿ ಸೈನಿಕರು ತಮ್ಮ ಭೋಜನಶಾಲೆಯಲ್ಲಿ ಆಡಿಕೊಳ್ಳುವ ಅಶ್ಲೀಲ ಕಥಾನಕಗಳನ್ನು ರುಬಷೊವಗೆ ತಿಳಿಸಿ ರುಬಷೊವ ಅಟ್ಟಹಾಸ ದಿಂದ ನಗುವುದನ್ನು ಕೇಳಬೇಕೆಂಬ ಕಾತರದಲ್ಲಿರುತ್ತಿದ್ದನು. ಅವನ ಮೇಲಿ ಕರುಣೆಯಿಂದ ರುಬಷೊವ '**ಹಹ್ಹಾ!**' ಎಂಬುದನ್ನು ಒಮ್ಮೊಮ್ಮೆ ಬಡಿದು ಕಳಿಸುವುದಿತ್ತು. ಅಷ್ಟೇ ಸಾಕು, ೪೦೨ ಮರಳಿ ಆಚೆಕಡೆಯಿಂದ **ಹ ಹ್ಹಾ ಹ ಹ್ಹಾ** ಎಂದು ಅನೇಕ ವೇಳೆ ತಟ್ಟಿ ಆನಂದಿಸಲು ರುಬ ಷೊವ **ಹಹ್ಹಾ** ಎನ್ನದೆ ಮೌನವಾಗಿದ್ದರೆ ಆತನು ಸಿಟ್ಟಿನಲ್ಲಿ '**ನೀನು ನಗಲಿಲ್ಲ**' ಎನ್ನುವನು. ಅವನ ಉಪದ್ರವ ತಡೆಯಲಾರದೆ ರುಬಷೊವ ಎಲ್ಲಾದರು **ಹಹ್ಹಾ** ಎಂಬುದನ್ನು ಎರಡು ಮೂರು ಸಲ ತಟ್ಟಿದರಂತೂ ೪೦೨ ಆನಂದದಿಂದ ಕುಣಿದೇ ಬಿಡುವನು; '**ಎಷ್ಟು ಸಂತೋಷವಾಗಿ ದ್ದೇವೆ!**' ಎಂದು ಕೊನೆಯ ಸೊಲ್ಲನ್ನು ತಟ್ಟಿ ಸುಮ್ಮನಾಗುವನು.

ಕೆಲವೊಮ್ಮೆ ಮಾತ್ರ ಆತ ರುಬಷೊವನನ್ನು ಅಣಕಿಸುತ್ತಿದ್ದನು. ರುಬಷೊವನಿಂದ ಉತ್ತರವು ಬಾರದೆ ಹೋದಾಗ ಅವನು ಮಿಲಿಟರಿ ಸಂಗೀತದ ಹಲವು ಸೊಲ್ಲುಗಳನ್ನು ಬಿಡದೆ ಒಂದರ ಮೇಲೊಂದು ಬಡಿದು ತೋರಿಸಿ ರುಬಷೊವನನ್ನು ಕೆಣಕಲು ಯತ್ನಿಸುತ್ತಿದ್ದನು.

ಆದರೂ ೪೦೨ನೆಯವನಿಂದ ಪ್ರಯೋಜನವಿಲ್ಲದಿರಲಿಲ್ಲ. ಅವನು ಸೆರೆಮನೆಗೆ ಬಂದು ಈಗಾಗಲೇ ಎರಡು ವರ್ಷಗಳು ಸಂದಿದ್ದುವು. ಅವನಿಗೆ ಹಲವು ಸೆರೆಯಾಳುಗಳ ಪರಿಚಯವಿತ್ತು, ಸೆರೆಮನೆಯೊಳಗೆ ನಡೆಯುವುದೆಲ್ಲವೂ ಅವನಿಗೆ ತಿಳಿಯುತ್ತಿತ್ತು.

೪೦೬ನೆಯ ಕೋಣೆಗೆ ಹೊಸ ಕೈದಿಯು ಆಗಮಿಸಿದ ಮರುದಿನವೇ ರುಬಷೊವ ೪೦೨ರವನಿಗೆ 'ನಿನಗೆ ಈ ಅಸಾಮಿ ಗೊತ್ತಿದೆಯೆ?' ಎಂದು ಕೇಳಿದನು. ೪೦೨ 'ಹೌದು. ರಿಪ್ ವ್ಯಾನ್ ವಿಂಕಲ್.'

ಸಂಭಾಷಣೆಯಲ್ಲಿ ಉತ್ಸಾಹವನ್ನು ತುಂಬಿಸುವ ಸಲು ವಾಗಿ ೪೦೨ನೆಯವನು ಒಗಟುಗಳಲ್ಲಿ ಮಾತನಾಡುವುದು ರೂಢಿಯಾಗಿತ್ತು. ರುಬಷೊವ 'ರಿಪ್ ವ್ಯಾನ್ ವಿಂಕಲ್' ಎಂದರೇನೆಂದು ಚೆನ್ನಾಗಿ ಯೋಚಿಸ ತೊಡಗಿದನು. ಇಪ್ಪತ್ತೈದು ವರ್ಷ

ನಿದ್ರೆ ಹೋಗಿ ಎಚ್ಚತ್ತ ಬಳಿಕ ತನ್ನ ಸುತ್ತಲೂ ಹೊಸತೊಂದು ಪ್ರಪಂಚ ವನ್ನು ಕಂಡ ಮುದುಕನ ಕಥೆ ರುಬಷೊವಗೆ ಸ್ಮರಣೆಗೆ ಬಂತು.

'**ಅವನಿಗೆ ತಲೆ ಸರಿ ಇಲ್ಲವೆ?**' ಎಂದು ಕೇಳಿದ ರುಬಷೊವ.

೪೦೨ನೆಯವನು ಸಂತೋಷದಿಂದ ರುಬಷೊವಗೆ ೪೦೬ನೆಯ ಕೈದಿಯ ಕಥೆ ಹೇಳ ತೊಡಗಿದನು. ೪೦೬ ಆಗ್ನೇಯ ಯುರೋಪಿನ ಒಂದು ರಾಜ್ಯದಲ್ಲಿ ಸಮಾಜಶಾಸ್ತ್ರದ ಅಧ್ಯಾಪಕನಾಗಿದ್ದನಂತೆ. ಮಹಾ ಯುದ್ಧದ ತರುವಾಯ ತನ್ನ ರಾಜ್ಯದಲ್ಲಿ ನಡೆದ ಕ್ರಾಂತಿಯಲ್ಲಿ ಆತ ಭಾಗವಹಿಸಿದನಂತೆ. ಕ್ರಾಂತಿಯ ಪಶ್ಚಾತ್ ಸ್ಥಾಪಿತವಾದ 'ಕಮ್ಯೂನು' (ಕ್ರಾಂತಿಕಾರೀ ಸರಕಾರ) ಕೆಲ ವಾರಗಳ ವರೆಗೆ ಬದುಕಿ ಆಮೇಲೆ ರಕ್ತದ ಮಡುವಿನಲ್ಲಿ ಮುಳುಗಿ ನಾಶವಾಯಿತು. ಕ್ರಾಂತಿಯ ನಾಯ ಕರು ಕ್ರಾಂತಿಯಲ್ಲಿ ನಿಷ್ಣಾತರಲ್ಲವಾದರೂ, ಕ್ರಾಂತಿಯನ್ನಣಗಿಸುವವರು ಆ ಕಲೆಯಲ್ಲಿ ಪರಮನಿಷ್ಣಾತರಾಗಿದ್ದರು. 'ಜನತೆಯ ಜ್ಞಾನವೃದ್ಧಿಯ ರಾಜ್ಯಸಚಿವ'ನೆಂದು ಬಿರುದಾಂತ ಈ ೪೦೬ನೆಯ ಕೈದಿಗೆ ಫಾಶಿ ಶಿಕ್ಷೆ ವಿಧಿಸಲ್ಪಟ್ಟಿತು. ಒಂದು ವರ್ಷವಾದರೂ ಅವನನ್ನು ಗಲ್ಲಿಗೇರಿಸಲಿಲ್ಲ, ಕೊ ನೆಗೆ ಫಾಶಿಶಿಕ್ಷೆಯನ್ನು ಆಮರಣ ಕಾರಾಗೃಹವಾಸಕ್ಕೆ ಪರಿವರ್ತಿಸಿದರು. ಅದರ ಪೈಕಿ ೨೦ ವರ್ಷಗಳನ್ನು ಅವನು ಕಾರಾಗೃಹದಲ್ಲಿ ಕಳೆದನು.

ಇಪ್ಪತ್ತು ವರ್ಷ ಅವನು ಹೆಚ್ಚಾಗಿ ಏಕಾಂತ ಕಾರಾಗೃಹವಾಸ ಮಾಡಿದನು. ವರ್ತಮಾನ ಪತ್ರಗಳ ಸಂಪರ್ಕವೇ ಇಲ್ಲದ್ದರಿಂದ ಜಗ ತ್ತಿಗೂ ಅವನಿಗೂ ಅಷ್ಟುಕಾಲ ಸಂಬಂಧವೇ ಇರಲಿಲ್ಲ. ಎಲ್ಲರೂ ಅವ ನನ್ನು ಮರೆತರೆಂದು ಕಾಣುತ್ತದೆ. ಅಷ್ಟರಲ್ಲಿ ಒಮ್ಮಿಂದೊಮ್ಮೆಗೆ ಅವನ ಶಿಕ್ಷೆಯನ್ನು ಹಿಂದೆ ತೆಗೆದುಕೊಂಡು ಅವನಿಗೆ ಬಿಡುಗಡೆಯಾಯಿತು. ಇಪ್ಪತ್ತು ವರ್ಷಗಳ ಅಖಂಡ ನಿದ್ರೆಯಿಂದ ಎಚ್ಚತ್ತ ರಿಪ್‌ವ್ಯಾನ್ ವಿಂಕಲ್ ಮರಳಿ ಪ್ರಪಂಚವನ್ನು ಪ್ರವೇಶಿಸಬೇಕಾಯಿತು.

ಆ ನಗರದಿಂದ ಹೊರಡುವ ಮೊದಲ ರೈಲು ಬಂಡಿಯಲ್ಲಿ ಸಮಾಜ ಶಾಸ್ತ್ರದ ಈ ಅಧ್ಯಾಪಕನನ್ನು ಕಾಣಬಹುದಾಗಿತ್ತು. ಅವನು ತನ್ನ ಸ್ವಪ್ನಸಾಮ್ರಾಜ್ಯದ ಕಡೆಗೆ—ಅಂದರೆ ನಮ್ಮ ದೇಶಕ್ಕೆ—ಹೊರಟಿದ್ದನು. ಇಲ್ಲಿಗೆ ಬಂದು ಎರಡು ವಾರಗಳಲ್ಲಿ ಅವನನ್ನು ಇಲ್ಲಿ ಸೆರೆಹಿಡಿಯ

ಲಾಯಿತು. ಇಪ್ಪತ್ತು ವರ್ಷಗಳ ಏಕಾಂತವಾಸದ ಅನುಭವದಿಂದಲೋ ಏನೋ ಆತ ಭಾರೀ ವಾಚಾಳಿಯಾಗಿಬಿಟ್ಟಿದ್ದನು. ಇಲ್ಲಿಯ ಜೀವನ ಹೇಗಿರಬಹುದೆಂದು ತಾನು ಸೆರೆಮನೆಯಲ್ಲಿ ಕಲ್ಪಿಸಿದ ಸುಖಸ್ವಪ್ನವನ್ನು ಜನರಿಗೆ ವರ್ಣಿಸಿದನೆಂದು ತೋರುತ್ತದೆ; ಅಥವಾ ತನ್ನ ಹಳೆಯ ಸ್ನೇಹಿತರ, ಕ್ರಾಂತಿಯ ಮಹಾನಾಯಕರ ವಿಳಾಸಗಳನ್ನು ವಿಚಾರಿಸಿದನೋ ಏನೋ; ಅಥವಾ ತಪ್ಪಾಗಿ ಯಾರದೋ ಸಮಾಧಿಯ ಮೇಲೆ ಹಾರವನ್ನಿಕ್ಕಿದನೋ ಏನೋ. ಅಥವಾ ಕಾಮ್ರೇಡ ರುಬಶೊವನನ್ನು ಭೇಟಿಯಾಗಬೇಕು ಅಂದನೋ?

ಇಪ್ಪತ್ತು ವರ್ಷಗಳ ಕಾರಾಗೃಹವಾಸದ ಸ್ವಪ್ನಲೋಕವಿಹಾರ ಒಳ್ಳೆಯದೋ ಅಥವಾ ವಾಸ್ತವ ಲೋಕದ ಎರಡು ವಾರಗಳ ಸಂಚಾರ ಒಳ್ಳೆಯದೋ ಎಂಬುದರ ಜ್ಞಾನ ಅವನಿಗೆ ಇದೀಗ ಆಗಿರಬೇಕು. ಅವನ ತಲೆಕೆಟ್ಟರೂ ಅದರಲ್ಲಿ ಆಶ್ಚರ್ಯವಿಲ್ಲ. ಇದು ರಿಪ್‌ವ್ಯಾನ್ ವಿಂಕಲನ ಕತೆ.

ದೀರ್ಘವಾದ ಈ ವರದಿಯನ್ನು ಬಡಿದ ಕೆಲಸಮಯದ ಅನಂತರ ಐದಾರು ಸಲ ೪೦೨ನೆಯಾತನು '**ಧರಣೀತಲದ ಪತಿತರೇ. ಜಾಗ್ರತರಾಗಿ**' ಎಂಬುದನ್ನು ಬಡಿದು ಆ ಮೇಲೆ ಮೌನವಾದನು.

ರುಬಶೊವ ಮಂಚದ ಮೇಲೆ ಅಂಗಾತ ಮಲಗಿ ಕಣ್ಣು ಮುಚ್ಚಿಕೊಂಡನು. 'ವ್ಯಾಕರಣದ ಕಾದಂಬರಿ' ಮತ್ತೆ ಆರಂಭವಾದಂತೆ ಅವನಿಗೆ ಭಾಸವಾಯಿತು; ಮನಸ್ಸನ್ನು ಅಶಾಂತಿಯು ಕವಡಿ 'ಅದಕ್ಕಾಗಿ ನೀನು ಸುಂಕ ಕೊಡಬೇಕು, ಋಣ ಸಲ್ಲಿಸಬೇಕು; ಕಾರಣ: ಆತ ಕನಸು ಕಾಣುತ್ತಿರುವಾಗ ನೀನು ಕಾರ್ಯಮಾಡಿದಿ.'

ಮಧ್ಯಾಹ್ನ ರುಬಶೊವನನ್ನು ಕ್ಷೌರ ಮಾಡಿಸಲು ಕರೆದೊಯ್ದರು.

ಈ ಸಲ ಮೆರವಣಿಗೆಯಲ್ಲಿ ಮುದಿ ಕಾವಲುಗಾರ ಮತ್ತು ಒಬ್ಬನೇ ಒಬ್ಬ ಸಿಪಾಯಿ ಮಾತ್ರ ಇದ್ದರು. ೪೦೭ನ್ನು ಹಾದು ಹೋಗುವಾಗ ಬಾಗಿಲಲ್ಲಿ ಅವನ ಹೆಸರು ಇನ್ನೂ ನಮೂದಿಸದೆ ಇರುವುದನ್ನು ರುಬಶೊವ ಗಮನಿಸಿದನು. ಕ್ಷೌರಿಕನ ಅಂಗಡಿಯಲ್ಲಿರಬೇಕಾಗಿದ್ದ ಇಬ್ಬರು ಕ್ಷೌರಿಕರ ಬದಲು (ಅವರೂ ಕೈದಿಗಳೇ) ಒಬ್ಬನೇ ಇದ್ದನು. ರುಬ

ಷೊವಗೆ ಹೆಚ್ಚು ಜನರ ಪರಿಚಯವಾಗಕೂಡದೆಂದು ಇದರರ್ಥವಿರ ಬೇಕೆಂದು ಆತ ಭಾವಿಸಿದನು.

ರುಬಷೊವ ಕುರ್ಚಿಯಲ್ಲಿ ಕೂತನು. ಅಂಗಡಿ ನಿರ್ಮಲವಾಗಿತ್ತು. ಅಲ್ಲಿ ಒಂದು ಕನ್ನಡಿ ಕೂಡ ಇತ್ತು. ರುಬಷೊವ ಅದರಲ್ಲಿ ತನ್ನ ಮೋರೆಯನ್ನು ನೋಡಿಕೊಂಡನು. ಕುರುಚಲು ಗಡ್ಡ ಒಂದನ್ನು ಬಿಟ್ಟು ಬೇರೆ ಯಾವ ಬದಲಾವಣೆಯೂ ಆಗಿರಲಿಲ್ಲ.

ಕ್ಷೌರಿಕನು ಮೌನವಾಗಿದ್ದು ಬೇಗಬೇಗನೆ ಅವನ ಕರ್ತವ್ಯ ಸಾಗಿಸಿದನು. ಬಿಸಿಯಾದ ಸಾಬೂನಿನ ನೊರೆಯಿಂದ ರುಬಷೊವಗೆ ಬಹಳ ಹಿತವೆನಿಸಿತು; ಜೀವನದ ಪುಟ್ಟ ಸುಖಗಳಿಗೆ ಅವನ ಹೃದಯ ದಲ್ಲಿ ಒಮ್ಮಿಂದೊಮ್ಮೆ ಆಸೆ ಉತ್ಪನ್ನವಾಯಿತು. ಕ್ಷೌರಿಕನ ಹತ್ತಿರ ಮಾತಾಡಬೇಕೆಂದು ಮನಸ್ಸಾದರೂ, ದುಂಡು ಮೋರೆಯ ಆ ಭೋಳೆ ಮನುಷ್ಯನಿಗೆ ಅದರಿಂದ ಕೇಡಾದೀತೆಂದು ಬಗೆದು ರುಬಷೊವ ಸುಮ್ಮ ನಾದನು. ಸಾಬೂನು ಹಚ್ಚಿ, ಮೊದಲನೆಯ ಸಲದ ಮುಖಕ್ಷೌರ ಮುಗಿದ ಮೇಲೆ ಕ್ಷೌರಿಕನು ಕತ್ತಿಯಿಂದ ನೋವಾಗಲಿಲ್ಲ ತಾನೇ ಎಂದು ಗೌರವದಿಂದ ಕೇಳಿದನು.

ರುಬಷೊವ ಆ ಕೊಠಡಿಯನ್ನು ಹೊಕ್ಕ ಮೇಲೆ ಇದೊಂದೇ ಮಾತು ಅಲ್ಲಿ ಹೊರಟದ್ದರಿಂದ ಆ ಮಾತಿಗೆ ವಿಶೇಷ ಮಹತ್ವ ದೊರೆ ತಂತಾಯಿತು. ಬಾಗಿಲಲ್ಲಿ ಕಾಯುತ್ತಿದ್ದ ಸಿಪಾಯಿ ಸಿಗರೇಟ ಹಚ್ಚಿದನು; ಕ್ಷೌರಿಕನು ರುಬಷೊವನ ಗಡ್ಡವನ್ನೂ, ತಲೆಯನ್ನೂ ನಾಜೂಕಾಗಿ ಕೆರೆಯುತ್ತಿದ್ದನು. ರುಬಷೊವನ ಕಡೆಗೆ ಬಗ್ಗಿ ನಿಂತಾಗ ಒಮ್ಮೆ ಅವನ ದೃಷ್ಟಿಯೂ ರುಬಷೊವನ ದೃಷ್ಟಿಯೂ ಬೆರೆತುವು. ಅದೇ ಕ್ಷಣದಲ್ಲಿ ಆತ ರುಬಷೊವನ ಕಾಲರಿನ ಕೆಳಗಡೆ ಎರಡು ಬೆರಳುಗಳನ್ನು ತೂರಿ ಒಂದು ಕಾಗದದ ಉಂಡೆಯನ್ನು ಶರ್ಟಿನೊಳಗೆ ಇಳಿ ಬಿಟ್ಟನು. ಕೆಲವು ಕ್ಷಣಗಳ ತರುವಾಯ ರುಬಷೊವ ತನ್ನ ಕೋಣೆಗೆ ಮರಳಿದನು. ಹಾಸಿ ಗೆಯ ಮೇಲೆ ಕೂತು, ಬಾಗಿಲ ತೂತನ್ನೊಮ್ಮೆ ಪರೀಕ್ಷಿಸಿ, ಕಾಗದದ ಉಂಡೆಯನ್ನು ಹೊರಗೆಳೆದು, ಬಿಡಿಸಿ, ಓದಿದನು. ಅದರಲ್ಲಿ ಎರಡು ಶಬ್ದಗಳನ್ನು ಅವಸರದಿಂದ ಬರೆಯಲಾಗಿತ್ತು: 'ಸದ್ದು ಮಾಡದೆ ಸಾಯು'.

ರುಬಷೊವ ಕಾಗದದ ಚೂರನ್ನು ಬಕೆಟಿನೊಳಗೆ ಎಸೆದು ಶತಪಥವನ್ನಾರಂಭಿಸಿದನು. ಸೆರೆಮನೆಯ ಹೊರಗಿನ ಪ್ರಪಂಚದಿಂದ ಅವನಿಗೆ ದೊರೆತ ಮೊದಲ ಸಂದೇಶವಿದು. ಶತ್ರುರಾಜ್ಯದಲ್ಲಿ ಸೆರೆಮನೆಯಲ್ಲಿದ್ದಾಗ ರುಬಷೊವಗೆ ಇಂಥ ಪತ್ರಗಳ ಪರಿಚಯವು ಸಾಕಷ್ಟಿತ್ತು; ಆರೋಪ ಹೊರಿಸಿದವರ ಮೇಲೆ ಪ್ರತ್ಯಾರೋಪಗಳನ್ನು ಹೊರಿಸು, ಎದೆಗೆಡದೆ ವಿರೋಧಿಸು—ಹೀಗೆ ಹುರಿದುಂಬಿಸುವ ಪತ್ರಗಳಿಗೆ ಕೊರತೆ ಇರಲಿಲ್ಲ. ಕ್ರಾಂತಿಕಾರಿಯು ಮೌನವಾಗಿರಬೇಕಾದ ಒಂದು ಸಂದರ್ಭವೂ ಇತಿಹಾಸದಲ್ಲುಂಟೆ? ಅವನೀಗ ಮಾಡಬೇಕಾದ ಕೆಲಸ: ಮೌನವಾಗಿ ಸಾವನ್ನು ಅಪ್ಪಿಕೊಳ್ಳುವುದು–ಇದೊಂದೇ ಸಮರ್ಪಕವಾದ ದಾರಿಯೋ?

೪೦೨ ಕುತೂಹಲದಿಂದ ರುಬಷೊವನನ್ನು ಎಲ್ಲಿಗೊಯ್ದರೆಂಬುದನ್ನು ತಿಳಿಯಬೇಕೆಂದು ಬಡೆಯಲಾರಂಭಿಸಿದ್ದನು.

‘**ಕ್ಷೌರಕ್ಕೆ**’ ಎಂದನು ರುಬಷೊವ.

‘**ನಾನೇನೋ ಗಂಡಾಂತರ ಆಗಲೇ ಬಂದು ಬಿಟ್ಟಿತು ಎಂದಿದ್ದೆ**’ ಎಂದು ೪೦೨ ಕನಿಕರದಿಂದ ಹೇಳಿದನು.

‘**ನಿನಗಾದ ಮೇಲೆ ನನಗೆ**’ ಎಂದು ರುಬಷೊವ ಉತ್ತರಿಸಿದನು.

೪೦೨ ಕೃತಜ್ಞನಾದೊಬ್ಬ ಶ್ರಾವಕನಲ್ಲವೆ? ‘**ಹ ಹ್ಹಾ, ನೀನೊಬ್ಬ ಭಯಂಕರ ಅಸಾಮಿ!**’ ಎಂದಾತ ಗಹಗಹಿಸಿದನು.

ರುಬಷೊವ ಯೋಚಿಸಿದನು: ೪೦೨ನೆಯವನ ಜಾತಿಯವರಿಗಾದರೆ ಬದುಕುವುದಕ್ಕೂ, ಸಾಯುವುದಕ್ಕೂ ನಿಷ್ಕೃಷ್ಟ ನಿಯಮಗಳಿವೆ. ಆದ್ದರಿಂದ ಯಾವ ಕಾಲಕ್ಕೂ ಮುಂಬರುವುದೇನೆಂದು ನಿರೀಕ್ಷಿಸಬಹುದು. ಆದರೆ ತನ್ನಂಥವರಿಗೆ ಸೂತ್ರಗಳೂ ಇಲ್ಲ, ನಿಯಮಗಳೂ ಇಲ್ಲ. ಸಂದರ್ಭೋಚಿತವಾಗಿ ಒಂದೊಂದನ್ನೂ ಹೊಂದಿಸಿಕೊಳ್ಳಬೇಕಾಗಿದೆ.

ಸಾಯುವುದಕ್ಕೂ ಒಂದು ಶಿಷ್ಟಾಚಾರವಿಲ್ಲ. ಯಾವುದು ಹೆಚ್ಚು ಗೌರವಾರ್ಹವಾದ್ದು?— ಮೌನವಾಗಿ ಸಾಯುವುದೋ, ಅಥವಾ ತನ್ನ ಧ್ಯೇಯಗಳ ಕುರಿತು ಡಂಗುರ ಸಾರಿ ಸಾಯುವುದೋ? ತನ್ನ ಜೀವನವು ಕ್ರಾಂತಿಗೆ ಅನಿವಾರ್ಯ ಪ್ರಯೋಜನಕಾರಿ ಎಂದು ಬಗೆವ

ಆತ ಅಲೋರ್ನಾಳನ್ನು ಬಲಿಕೊಟ್ಟಿದ್ದನು. ಅವನ ಮಿತ್ರರ ವಾದ ಹೀಗಿತ್ತು: ಭವಿಷ್ಯದ ಮಹತ್ಸಾಧನೆಗೋಸ್ಕರ ಬಂಡವಾಳಶಾಹಿಗಳ ನೀತಿಗೆ ತಿಲಾಂಜಲಿಯೂ ನಿರ್ಬೋಧ ಅಲೋರ್ನಾಳ ಬಲಿಯೂ ಅನಿವಾರ್ಯವೆಂದು ಅವರು ಸಮರ್ಥಿಸಿದ್ದರು. ಇತಿಹಾಸದ ರೂಪವನ್ನೇ ಬದಲಾಯಿಸಿದ ಮಹಾವೀರರಿಗೆ 'ಇಗೋ ಇಲ್ಲಿರುವೆ. ಬೇಕಾದ್ದು ಮಾಡಿ' ಎನ್ನುವುದರ ಹೊರತು ಬೇರೆ ಕರ್ತವ್ಯವೇ ಇರಲಿಲ್ಲ. ಅಲೋರ್ನಾ ಹಾಗೇ ಅಂದಿದ್ದಳು, ಅವಳು ಅಂದ ಹಾಗೆ ಆತ ಮಾಡಿಯೂ ಮಾಡಿದ್ದನು. ತನ್ನ ವಿಷಯ ಮಾತ್ರ ಏತಕ್ಕಾಗಿ ಆತ ಕನಿಕರಿಸಬೇಕು? 'ನಮ್ಮ ಯುಗದ ಅದೃಷ್ಟವೇನೆಂದು ಮುಂಬರುವ ದಶಕದಲ್ಲಿ ತಿಳಿಯುತ್ತದೆ' ಎಂದಿದ್ದನು ಐವನೊವ. ಆಯಾಸ ಅಥವಾ ಗರ್ವದಿಂದ ರುಬಷೊವ ತನ್ನ ಜವಾಬ್ದಾರಿಯನ್ನು ತಪ್ಪಿಸಿಕೊಳ್ಳಲೆಳಸು ವುದೆ? ಒಂದು ಪಕ್ಷ ಒಂದನೆಯ ನಂಬರಿನವನ ದಾರಿಯೇ ಸರಿ ಯಾದಲ್ಲಿ? ಈ ಕೊಳೆ, ನೆತ್ತರು ಮತ್ತು ಸುಳ್ಳಿನ ನಡುವೆಯೂ ಭವಿಷ್ಯತ್ತಿನ ಮಹಾ ಅಸ್ತಿಭಾರವನ್ನು ಅವರು ಹಾಕುತ್ತಿರುವುದಾದಲ್ಲಿ? ಇತಿಹಾಸವು ಅತಿ ಕ್ರೂರವಾದ ನಿರ್ಮಾಣಕಾರಿಯಲ್ಲವೆ?— ಕೊಳೆ, ನೆತ್ತರು ಮತ್ತು ಸುಳ್ಳೇ ಅದರ ಇಟ್ಟಿಗೆ, ಗಾರೆಗಳಲ್ಲವೆ?

ಮೌನವಾಗಿ ಸಾಯುವುದು—ಅಂಧಕಾರದಲ್ಲಿ ವಿಲೀನನಾಗು ವುದು—ಹೌದು, ಆಡಲು ಸುಲಭ. ಮೂರನೆಯ ಕರಿ ಇಟ್ಟಿಗೆಯ ಮೇಲೆ ರುಬಷೊವ ಹಠಾತ್ ಶತಪಥವನ್ನು ನಿಲ್ಲಿಸಿದನು. ಅವನ ಬಾಯಿಂದ 'ಸದ್ದಿಲ್ಲದೆ ಸಾಯು, ಸಾಯು' ಎಂಬ ಮಾತು ಮೇಲಿಂದ ಮೇಲೆ ಹೊರಡುತಿತ್ತು.

ಐವನೊವನ ಸೂಚನೆಯನ್ನು ಖಂಡಿತವಾಗಿಯೂ ತಾನು ಸ್ವೀಕರಿ ಸೆನು ಎಂಬ ಅವನ ದೃಢನಿರ್ಧಾರವು ನಿಜವಾಗಿಯೂ ಅವನೆಣಿಸಿದಷ್ಟು ದೃಢವಾಗಿಲ್ಲವೆಂದು ಅವನಿಗೀಗ ಅರ್ಥವಾಯಿತು. ಮೌನವಾಗಿ ತನ್ನ ಪಾತ್ರವನ್ನು ಮುಗಿಸೆಂದು ಐವನೊವ ಕೊಟ್ಟ ಸೂಚನೆಯನ್ನು ತಾನೆಲ್ಲಿ ತಿರಸ್ಕರಿಸಿದ್ದೆ ಎಂದೂ ಅವನಿಗೀಗ ಅನಿಸುತ್ತಿತ್ತು.

೫

ರುಬಷೊವನ ಜೀವನದ ಮಟ್ಟ ಸುಧಾರಿಸುತ್ತಲೇ ಇತ್ತು. ಹನ್ನೊಂದನೆಯ ದಿನ ಮುಂಜಾನೆ ಅವನನ್ನು ಕವಾಯತಿಗಾಗಿ ಸೆರೆ ಮನೆಯ ಅಂಗಳಕ್ಕೆ ಕರೆದೊಯ್ದರು.

ಅವನನ್ನು ಅಲ್ಲಿಗೆ ಒಯ್ಯುತ್ತಿದ್ದ ಪಹರೆಯವನು ನಿನಗಿನ್ನು ದಿನಾಲೂ ಇಪ್ಪತ್ತು ಮಿನಿಟು ವ್ಯಾಯಾಮ ಮಾಡುವ ಸವಲತ್ತು ಕೊಡಲಾಗಿದೆ ಎಂದು ತಿಳಿಸಿದನು. ಬೆಳಗ್ಗಿನ ಫಲಾಹಾರದ ಬಳಿಕ ಹೊರಡುವ ಮೊದಲ ಗುಂಪಿನಲ್ಲಿ ರುಬಷೊವನನ್ನು ಸೇರಿಸಿದ್ದರು. ಸನಿಹದ ಕೈದಿಯ ಹತ್ತಿರ ಮಾತನಾಡುವುದನ್ನು ಮನ್ನಾಮಾಡಿದೆ; ಸಾಲುಬಿಟ್ಟು ನಡೆಯುವುದೂ, ಒಬ್ಬರಿಗೊಬ್ಬರು ಸನ್ನೆಮಾಡುವುದೂ, ಕಾಗದದ ಚೂರು ಬದಲಾಯಿಸುವುದೂ ಕೂಡ ಮನ್ನಾಮಾಡಲಾಗಿದೆ; ಈ ನಿಯಮಗಳನ್ನು ಮುರಿದವನಿಗೆ ಕೂಡಲೇ ವ್ಯಾಯಾಮದ ಸವಲತ್ತು ನಿರಾಕರಿಸಲ್ಪಡುವುದು; ಶಿಸ್ತನ್ನು ಮೀರಿ ನಡೆದವರನ್ನು ನಾಲ್ಕುವಾರ ಕತ್ತಲುಕೋಣೆಯ ಶಿಕ್ಷೆಗೆ ಗುರಿಪಡಿಸಲಾಗುವುದು. ಹೀಗೆ ಸೆರೆಮನೆಯ ಶಿಸ್ತನ್ನು ಮುದಿ ಕಾವಲುಗಾರನು ಅನುಕ್ರಮವಾಗಿ ವಿವರಿಸಿ ಹೇಳಿದನು. ಕೆಲವು ಹೆಜ್ಜೆ ನಡೆದ ಮೇಲೆ ಕಾವಲುಗಾರನು ೪೦೬ನೆಯ ಕೋಣೆಯ ಬಾಗಿಲನ್ನು ತೆರೆದನು. ರುಬಷೊವಗೆ ಮೊದಲಾಗಿ ಕಂಡದ್ದು ೪೦೬ನೆಯ ಕೈದಿಯ ಕಾಲು. ಬೂಟುಗಳು ಕಪ್ಪಾಗಿದ್ದುವೆಂದೂ, ಇಜಾರಿನಲ್ಲಿ ಚೌಕುಳಿ ಇತ್ತೆಂದೂ ರುಬಷೊವ ಗುರುತಿಸಿದನು. ೪೦೬ಕ್ಕೂ ಕಾವಲುಗಾರನ ನಿಯಮಾವಳಿಯ ಪಾಠ ನಡೆಯಿತು. ೪೦೬ ಮಲಗಿದ್ದ ಮಂಚದಿಂದೆದ್ದನು. ಅವನೊಬ್ಬ ಗಿಡ್ಡನೆಯ ಮುದುಕನಾಗಿದ್ದನು. ಅವನ ಮೋರೆಯಲ್ಲಿ ಬಿಳೀ ಗಡ್ಡ ಬೆಳೆದಿತ್ತು. ಚೌಕಳಿ ಇಜಾರದ ಮೇಲ್ಗಡೆ ಅವನಿಗೊಂದು ಕರಿಯ ವೆಸ್ಟ್‌ಕೋಟಿತ್ತು; ಅದರಲ್ಲೊಂದು ಮಿನುಗುವ ಲೋಹದ ಸರಪಳಿಯೂ ಕಾಣುತಿತ್ತು. ಆತ ಬಾಗಿಲಲ್ಲಿ ನಿಂತು ರುಬಷೊವನನ್ನು ಒಂದರೆಕ್ಷಣ ದಿಟ್ಟಿಸಿ, ಗುರುತಿಸವನಂತೆ ತಲೆಯಲ್ಲಾಡಿಸಿ ಕಾವಲುಗಾರನೊಡನೆ ಹೊರಟನು. ರುಬಷೊವ ೪೦೬ ಹಿಂಬಾಲಕನಿರ

ಬೇಕೆಂದು ಮೊದಲು ಭಾವಿಸಿದ್ದುದು ತಪ್ಪಾಯಿತು. ಹುಟ್ಟು ತನ್ನ ಪಕ್ಕಕ್ಕೆ ಹಾಕಿಕೊಳ್ಳುವ ಒಂದು ವೈಕಲ್ಯವನ್ನು ಬಿಟ್ಟರೆ ೪೦೭ನೆಯವನ ಕಣ್ಣುಗಳಲ್ಲಿ ಮಕ್ಕಳ ಭೋಳೇತನವು ಮಿನುಮಿನುಗುತ್ತಿದ್ದಿತು. ಕಷ್ಟದಿಂದ ಕಾಲಿಡುತ್ತ, ಒಮ್ಮೊಮ್ಮೆ ಹಿಂತಿರುಗಿ ರುಬಷೊವನನ್ನು ನೋಡುತ್ತ ಆತ ನಡೆಯುತ್ತಿದ್ದನು. ಉಪ್ಪರಿಗೆಯ ಮೆಟ್ಟಲಿಳಿಯುವಾಗ ಕಾವಲಿನ ಸಿಪಾಯಿ ಹಿಡಿಯದಿದ್ದರೆ ೪೦೭ ಕೆಳಗೆ ಉರುಳಿ ಬಿಡುತ್ತಿದ್ದನು. ಅವನು ಸಿಪಾಯಿಗೆ ಉಪಕಾರ ಹೇಳಿದುದು ರುಬಷೊವನ ಕಿವಿಗೆ ಬಿತ್ತು. ಸಿಪಾಯಿ ಹಲ್ಲು ಕಿರಿಯುವುದನ್ನು ರುಬಷೊವ ನೋಡಿದನು. ತೆರೆದಿದ್ದ ಹೆಬ್ಬಾಗಿಲ ಮೂಲಕ ಅವರು ಅಂಗಳವನ್ನು ಪ್ರವೇಶಿಸಿದರು. ಆಗಲೇ ಅಲ್ಲಿ ಜತೆ ಜತೆಯಾಗಿ ಇತರ ಕೈದಿಗಳನ್ನು ನಿಲ್ಲಿಸಿದ್ದರು; ಇವರಿಬ್ಬರು ಸೇರಿಕೊಳ್ಳುತ್ತಲೆ ಎರಡು ಸಿಳ್ಳಿನೊಡನೆ ವ್ಯಾಯಾಮವು ಆರಂಭವಾಯಿತು.

ಆಕಾಶವು ಶುಭ್ರವಾಗಿ ತೆಳು ನೀಲಿ ಬಣ್ಣದಿಂದ ರಾರಾಜಿಸುತ್ತಿತ್ತು. ರುಬಷೊವ ಕಂಬಳಿಯನ್ನು ಮರೆತದ್ದರಿಂದ ಚಳಿಯಲ್ಲಿ ನಡುಗುತ್ತಿದ್ದನು ರಿಪ್‌ವ್ಯಾನ್ ವಿಂಕಲನಿಗೆ ಕಾವಲುಗಾರನು ಒಂದು ವಸ್ತ್ರವನ್ನು ಹೊದೆಯಲು ಕೊಟ್ಟಿದ್ದನು, ಅದು ಅವನ ಕಾಲತನಕವೂ ಜೋಲಿಕೊಂಡಿತ್ತು. ರುಬಷೊವ ೪೦೬ನೆಯ ನಂಬರಿನ ಕಿಟಕಿಯಾವುದೆಂದು ಕಂಡು ಹಿಡಿಯಲು ಪ್ರಯತ್ನಿಸಿದನು. ಅಲ್ಲಿ ಕೆಲಕ್ಷಣ ಕಣ್ಣಿಟ್ಟು ನೋಡಿದನು. ೪೦೨ನೆಯವನಿಗೆ ವ್ಯಾಯಾಮವೂ ಇಲ್ಲ, ಅವನನ್ನು ಕೋಣೆಯಿಂದ ಹೊರ ಬಿಡುವುದೆಂಬುದೇ ಇರಲಿಲ್ಲ.

ಅಂಗಳಕ್ಕೆ ಪ್ರದಕ್ಷಿಣೆ ಬರುವಾಗ ರಿಪ್‌ವ್ಯಾನ ವಿಂಕಲನ ತುಟಿಗಳಿಂದ ಏನೋ ದನಿ ಹೊರಡುತ್ತಿತ್ತು. ಮೊದಮೊದಲು ರುಬಷೊವಗೆ ಅದೇನೆಂದು ಅರ್ಥವಾಗಲಿಲ್ಲ. ಅದು 'ಧರಣೀತಲದ ಪತಿತರೇ, ಜಾಗ್ರತರಾಗಿ' ಎಂಬ ಹಾಡಿನ ಸೊಲ್ಲೆಂದು ಅವನಿಗೆ ತಿಳಿಯಿತು. ಅವನು ಹುಚ್ಚನೇನೂ ಅಲ್ಲ. ಆದರೆ ಏಳು ಸಹಸ್ರ ದಿನ-ರಾತ್ರಿಯ ಕಾರಾಗೃಹವಾಸದ ದೆಸೆಯಿಂದ ಅವನು ಒಂದು ತರಹ ಆಗಿದ್ದನೆಂಬುದರಲ್ಲಿ ಸಂದೇಹವಿರಲಿಲ್ಲ. ಎರಡು ದಶಕಗಳವರೆಗೆ ಪ್ರಪಂಚದಿಂದ ದೂರವಾಗಿದ್ದರೆ ಏನಾಗಬಹುದೆಂದು

ರುಬಷೊವ ಊಹಿಸಹತ್ತಿದನು. ಇಪ್ಪತ್ತು ವರ್ಷಗಳ ಹಿಂದೆ ದಾರಿಯಲ್ಲಿಷ್ಟು ಮೋಟಾರುಗಳು ಓಡುತ್ತಿರಲಿಲ್ಲ, ರೇಡಿಯೋ ಇರಲೇ ಇಲ್ಲ, ಈಗಿನ ರಾಜಕೀಯ ಧುರೀಣರ ಹೆಸರೇ ಯಾರೂ ಕೇಳಿರಲಿಲ್ಲ. ಅಖಿಲ ಜನ ಸಮುದಾಯವು ಹೂಡುವ ಬೃಹತ್ ಆಂದೋಲನವಾಗಲಿ, ರಾಜಕೀಯ ಅಲ್ಲೋಲಕಲ್ಲೋಲಗಳಾಗಲಿ, ಓರೆ ಕೋರೆ ದಾರಿಗಳಾಗಲಿ, ಕ್ರಾಂತಿಯು ಹಾದು ಹೋಗುವ ಅನಿರೀಕ್ಷಿತ ಅವಸ್ಥೆಗಳಾಗಲಿ, ಯಾವುದೂ ಆಗ ಕಣ್ಣಿಗೆ ಬೀಳುತ್ತಿರಲಿಲ್ಲ. ಸ್ವರ್ಗವೇ ಧರೆಗಿಳಿದು ಬರುವ ಕಾಲ ಸಮೀಪಿಸಿತೆಂದು ಎಲ್ಲರೂ ಉತ್ಕಂಠರಾಗಿದ್ದ ಕಾಲವದು....

ರುಬಷೊವ ತನ್ನ ಕಲ್ಪನೆಯನ್ನು ಎಷ್ಟು ಮುನ್ ಚಾಚಿದರೂ, ನೆರೆಯುವನ ಮನಸ್ಸಿನ ಸ್ಥಿತಿಯನ್ನು ಅರಿಯಲಾರದೆ ಹೋದನು. ಇನ್ನೊಬ್ಬರ ಸ್ಥಾನದಲ್ಲಿ ನಿಂತು ಯೋಚಿಸುವ ಕಲೆಯಲ್ಲಿ ಅವನೆಷ್ಟು ನಿಷ್ಣಾತನಾದರೂ, ಐವನೊವನ ವಿಚಾರಗಳನ್ನು ಐವನೊವನ ದೃಷ್ಟಿಯಿಂದ ಅರಿಯಬಲ್ಲನಾದರೂ, ರಿಪ್‌ವ್ಯಾನ್ ವಿಂಕಲನ ದೃಷ್ಟಿ ಅವನಿಗೆ ಬರಲೊಲ್ಲದು. ಏನು ಮಾಡಿದರೂ ಬರಲೊಲ್ಲದು. ರುಬಷೊವ ಒಮ್ಮೆ ಆತನ ಕಡೆಗೆ ಪಕ್ಕದಿಂದ ನೋಡಿದಾಗ ಆತ ಮುಗುಳ್ನಗುವಂತಿತ್ತು.

ಕೋಣೆಗೆ ಹಿಂತೆರಳುವಲ್ಲಿ ರಿಪ್‌ವಾನ್ ವಿಂಕಲ್ ರುಬಷೊವನ ಕಡೆಗೆ ಹಿಂತಿರುಗಿ ನೋಡಿದನು. ಅದೇಕೋ ಅವನ ಮುಖದಲ್ಲಿ ಬೆಚ್ಚಿಬಿದ್ದ ಚಿಹ್ನೆ ಮೂಡಿತು: ಇನ್ನೇನು ರುಬಷೊವನನ್ನು ಆತ ಕರೆಯಬೇಕು, ಅಷ್ಟರಲ್ಲಿ ಪಹರೆಯುವನು ೪೦೬ರ ಬಾಗಿಲನ್ನು ಧಡೀರನೆ ಮುಚ್ಚಿದನು. ರುಬಷೊವ ತನ್ನ ಕೊಠಡಿಯನ್ನು ಸೇರುತ್ತಲೇ ೪೦೬ನೆಯವನ ಹತ್ತಿರ ಗೋಡೆ ಬಡಿದು ಸಂಭಾಷಣೆಗೆಳಸಿದನು. ೪೦೬ ಪ್ರತ್ಯುತ್ತರಿಸಲಿಲ್ಲ.

ಆದರೆ ಅವರಿಬ್ಬರನ್ನೂ ತನ್ನ ಕಿಟಿಕಿಯಿಂದ ನೋಡಿದ ೪೦೨ನೆಯವನಿಗೆ ರುಬಷೊವನಿಂದ ಎಲ್ಲಾ ಮಾಹಿತಿ ಬೇಕಾಗಿರುವಂತೆ ತೋರಿತು. ಗಾಳಿಯ ವಾಸನೆ ಹೇಗಿತ್ತು? ಎಷ್ಟು ಚಳಿ ಇತ್ತು? ಯಾರೆಲ್ಲ ಇದ್ದರು? ರಿಪ್‌ವ್ಯಾನ್ ವಿಂಕಲನ ಹತ್ತಿರ ಏನಾದರೂ

ಎರಡು ಮಾತನ್ನಾಡಲು ಸಾಧ್ಯವಾಯಿತೆ? ಹೀಗೆ ಏನೇನೋ ಪ್ರಶ್ನೆಗಳಿಗೆ ರುಬಷೊವ ಉತ್ತರಿಸಬೇಕಾಗಿತ್ತು. ೪೦೨ನೆಯವನೊಡನೆ ಹೋಲಿಸಿದರೆ ತಾನೆಷ್ಟೋ ಉತ್ತಮ ಸ್ಥಿತಿಯಲ್ಲಿರುವೆನಲ್ಲಾ ಎಂದುಕೊಂಡ ರುಬಷೊವ; ಅವನ ಮೇಲೆ ಕರುಣೆಯೂ ಅಂತರಂಗದ ಒಂದು ಮೂಲೆಯಲ್ಲಿ ತಾನು ತಪ್ಪಿತಸ್ಥನೆಂಬೊಂದು ಭಾವನೆಯೂ ಏಕಕಾಲದಲ್ಲಿ ರುಬಷೊವನ ಹೃದಯದಲ್ಲಿ ಮೊಳೆತುವು.

ಮರುದಿನ ಮತ್ತು ಅದರ ಮರುದಿನ ರುಬಷೊವ ಮತ್ತು ರಿಪ್ ವ್ಯಾನವಿಂಕಲ್ ವ್ಯಾಯಾಮಕ್ಕೆ ಜತೆಯಾಗಿಯೇ ಅಂಗಳಕ್ಕೆ ತೆರಳಿದರು. ಪ್ರದಕ್ಷಿಣೆ ಬರುವಾಗಲೂ ಅವರಿಬ್ಬರು ಜತೆಯಾಗಿರುತ್ತಿದ್ದರು. ಇಬ್ಬರೂ ಕಂಬಳಿ ಹೊದ್ದುಕೊಂಡು ಮೌನವಾಗಿ ಸುತ್ತು ಬರುತ್ತಿದ್ದರು: ರುಬಷೊವ ವಿಚಾರ ಮಗ್ನನಾಗಿ ಒಮ್ಮೊಮ್ಮೆ ಇತರ ಕೈದಿಗಳನ್ನೂ, ಮೇಲಿನ ಕಿಟಕಿಗಳನ್ನು ನೋಡುತ್ತಲೂ ತಿರುಗುತ್ತಿದ್ದರೆ, ಮುದಿಯನು ತನ್ನ ಹಾಡಿನ ಸೊಲ್ಲನ್ನು ಗುಣುಗುತ್ತ, ಮಂದಹಾಸವನ್ನು ಬೀರುತ್ತ ಪ್ರದಕ್ಷಿಣೆ ಬರುತ್ತಿದ್ದನು.

ಮೂರನೆಯ ದಿನದ ತನಕವೂ ಅವರು ಪರಸ್ಪರವಾಗಿ ಮಾತಾಡಿಕೊಳ್ಳಲಿಲ್ಲ. ಮೌನದ ನಿಯಮವನ್ನು ಸಿಪಾಯಿಗಳು ಜಾರಿ ಮಾಡಲು ಅಷ್ಟೊಂದು ಉತ್ಸುಕರಾಗಿರಲಿಲ್ಲವಾಗಿ ಎಷ್ಟೋ ಜನ ಕೈದಿಗಳು ಸ್ವರ ಹೊರಡಿಸದೆ ತುಟಿಯ ಅಲುಗುವಿಕೆಯಿಂದಲೇ ಮಾತಾಡಿಕೊಳ್ಳುತ್ತಿದ್ದರು.

ಮೂರನೆಯ ದಿನ ರುಬಷೊವ ಪೆನ್ಸಿಲ್ ಮತ್ತು ನೋಟಬುಕ್ಕನ್ನು ತಂದಿದ್ದನು. ನೋಟಬುಕ್ ಅವನ ಎಡ ಜೇಬಿನಿಂದ ಹೊರಗೆ ಇಣಿಕುತ್ತಿತ್ತು. ಹತ್ತು ಮಿನಿಟುಗಳ ತರುವಾಯ ಮುದಿಯನು ಅದನ್ನು ನೋಡಿದನು. ಅವನ ಕಣ್ಣು ಒಮ್ಮೆಲೆ ಹೊಳೆಯಿತು. ಆತ ಸಿಪಾಯಿಗಳು ಅವರ ಮಾತಿನಲ್ಲಿ ಮಗ್ನರಾಗಿರುವ ವೇಳೆಯನ್ನು ನೋಡಿ ರುಬಷೊವನ ಕಿಸೆಯಿಂದ ಪೆನ್ಸಿಲ್, ನೋಟಬುಕ್ಕುಗಳನ್ನೆಳೆದು ತೆಗೆದು ಕಂಬಳಿಯೊಳಗಿಂದಲೆ ಏನನ್ನೋ ಬರೆದು, ಆ ಹಾಳೆಯನ್ನು ಹರಿದು ರುಬಷೊವನ ಕೈಗೆ ಕೊಟ್ಟನು. ರುಬಷೊವ ಸಿಪಾಯಿಗಳು ತನ್ನ ಕಡೆ

ನೋಡದಿರುವಾಗ ಆ ಹಾಳೆಯಲ್ಲಿ ಏನು ಬರೆದಿದೆ ಎಂದು ನೋಡಿದರೆ ಅದರಲ್ಲಿ ಅವರಿರುವ ದೇಶದ ಒಂದು ಸಮರ್ಪಕ ನಕಾಶೆಯನ್ನೂ ಬೆಟ್ಟ ಗುಡ್ಡ ನದಿಗಳನ್ನೂ ಬಿಡಿಸಿ ನಡುವೆ ಕ್ರಾಂತಿ ಧ್ವಜವನ್ನು ನೆಟ್ಟದ್ದು ಕಂಡಿತು. ಅರ್ಧ ಪ್ರದಕ್ಷಿಣೆ ಬರುವಷ್ಟಕ್ಕೆ ಆತ ಇನ್ನೊಂದು ಅಂಥದೇ ಚಿತ್ರ ವನ್ನು ಬರೆದ ಎರಡನೆಯ ಹಾಳೆಯನ್ನೂ ರುಬಷೊವಗೆ ಮುಟ್ಟಿಸಿದನು. ರುಬಷೊವನ ಪ್ರತಿಕ್ರಿಯೆ ಏನೆಂದು ನೋಡಲು ರುಬಷೊವನನ್ನು ನೋಡಿದಾಗ ಆತ ಸಮ್ಮತಿಯನ್ನು ಸೂಚಿಸಿದನು.

'ಬೇಕಾದರೆ ಕಣ್ಣು ಮುಚ್ಚಿ ಬರೆಯಬಲ್ಲೆ' ಎಂದನು. ರುಬಷೊವ ಗೋಣಲ್ಲಾಡಿಸಿದನು. 'ಏನು, ನಿನಗೆ ನಂಬಿಕೆಯಾಗದಲ್ಲವೆ? ಇಪ್ಪತ್ತು ವರ್ಷ ಅಭ್ಯಾಸ ಮಾಡಿದ್ದೇನೆ' ಎಂದು ಮುದಿಯ ನುಡಿದನು. ಸಿಪಾಯಿ ಗಳ ಕಡೆಗೊಮ್ಮೆ ನೋಡಿ, ಕಣ್ಣು ಮುಚ್ಚಿ, ನಡೆಯುವುದನ್ನು ನಿಲ್ಲಿಸದೆ ಮೂರನೆಯ ನಕಾಶೆಯನ್ನು ಬಿಡಿಸಲಾರಂಭಿಸಿದನು. ರುಬಷೊವಗೆ ಇವನೆಲ್ಲಿ ಸಾಲು ತಪ್ಪುವನೋ, ಎಡವಿ ಬಿದ್ದು ಸಿಪಾಯಿಗಳ ಕಣ್ಣಿಗೆ ಬೀಳುವನೋ ಎಂಬ ಅಂಜಿಕೆಯಾಯಿತು. ಆದರೆ ಅರ್ಧ ತಾಸಿನೊಳಗೆ ನಕಾಶೆಯ ಕೆಲಸ ಮುಗಿದು ಮೂರನೆಯ ಹಾಳೆ ರುಬಷೊವನ ಕೈಗೆ ಬಂದಿತು. ಎಲ್ಲವೂ ಸಮರ್ಪಕವಾಗಿತ್ತು, ನಡುವಿನ ಧ್ವಜ ಮಾತ್ರ ಅಳತೆ ಮೀರಿ ದೊಡ್ಡದಾಗಿದ್ದಿತು. 'ಈಗ ನಂಬುತ್ತೀಯಾ?' ಎಂದು ಗೆಲವಿನ ಧ್ವನಿಯಲ್ಲಿ ಮುದಿಯ ಪ್ರಶ್ನಿಸಿದನು. ರುಬಷೊವ ಕತ್ತು ಅಲುಗಿಸಿದನು. ಅದೇಕೋ ಮುದುಕನ ಮುಖಮುದ್ರೆ ಒಮ್ಮಿಂ ದೊಮ್ಮೆ—ಕೊಠಡಿಯನ್ನು ಪ್ರವೇಶಿಸುವಾಗ ಆಗುವಂತೆ—ಭಯಾ ಕ್ರಾಂತವಾಯಿತು.

ಆತ ರುಬಷೊವಗೆ ಗುಟ್ಟಾಗಿ 'ಉಪಾಯವಿಲ್ಲ, ನನ್ನನ್ನು ತಪ್ಪಾದ ರೈಲುಗಾಡಿ ಹತ್ತಿಸಿದರು' ಎಂದನು. ರುಬಷೊವ 'ಹಾಗೇಂದರೆ?' ಎಂದು ಕೇಳಿದನು. ರಿಪ್‌ವ್ಯಾನ ವಿಂಕಲ್ ಮೆಲುದನಿಯಲ್ಲಿ ದುಃಖ ಪೂರಿತವಾಗಿ 'ಹೊರಡುವಾಗ ನನ್ನನ್ನು ಕಳಿಸಿದ ರೈಲು ನಿಲ್ದಾಣವೇ ಬೇರೊಂದಾಯಿತು. ನನಗೆ ತಿಳಿದಿಲ್ಲವೆಂದು ಅವರ ಭಾವನೆ. ನನಗೆ ತಿಳಿ

ದಿದೆ ಎಂದು ಯಾರೊಡನೆಯೂ ಹೇಳ ಬೇಡ' ಎಂದು ಸಿಪಾಯಿಗಳನ್ನು ಸೂಚಿಸಿ ಹೇಳಿದನು.

ರುಬಷೊವ ಗೋಣಲ್ಲಾಡಿಸಿದನು. ಮತ್ತೆ ಬಿಗಿಲಾಯಿತು. ಪ್ರದಕ್ಷಿಣೆ ಮುಗಿಯಿತು.

ಹಿಂತಿರುಗುವಾಗ ಗೇಟಿನ ಬಳಿ ಮುದಿಯನು 'ನಿನಗೂ ಬಂಡಿ ತಪ್ಪಿ ಹೋಗಿರಬೇಕಲ್ಲವೆ?' ಎಂದು ಕೇಳಿದನು. ರುಬಷೊವ ತಲೆ ಯಲ್ಲಾಡಿಸಿದನು.

ಮುದಿಯನು ರುಬಷೊವನ ಕೈಯೊಳಗಿನ ಮುದ್ದೆಯಾದ ನಕಾಶೆ ಯನ್ನು ನೋಡಿ 'ಏನಾದರೂ ಆಸೆ ಬಿಡಬಾರದು; ಒಂದಲ್ಲ ಒಂದುದಿನ ನಾವು ಅಲ್ಲಿಗೆ ತಲಪಿಯೇ ತಲಪುವೆವು, ಎಂದು ಹೇಳಿ ರುಬಷೊವನ ನೋಟಬುಕ್ಕನ್ನೂ ಪೆನ್ಸಿಲನ್ನೂ ಅವನಿಗೆ ಹಿಂದೆಕೊಟ್ಟನು. ಮೆಟ್ಟಲು ಹತ್ತುವಾಗ ಮರಳಿ ಅವನ ಬಾಯಿಂದ ಹಾಡಿನ ಸೊಲ್ಲು ಗುಂಯ್‌ ಗುಡುತಿತ್ತು.

## ೬

ಐವನೊವನು ಕೊಟ್ಟ ಅವಧಿ ಮುಗಿಯುವ ಒಂದು ದಿನ ಮುಂಚಿ ತವಾಗಿ ರಾತ್ರಿ ಊಟವನ್ನು ಹಾಕುತ್ತಿರುವ ಸಮಯ ರುಬಷೊವಗೆ ವಾತಾವರಣದಲ್ಲಿ ಏನೋ ಒಂದು ಪರಿವರ್ತನೆ ಕಾಣಿಸಿತು. ಸೇವಕರಲ್ಲಿ ಒಬ್ಬನು ಅವನನ್ನು ಸ್ವಲ್ಪ ಹೆಚ್ಚು ಹೊತ್ತು ದಿಟ್ಟಿಸಿದನೆ? ಮುದಿ ಕಾವಲುಗಾರನ ಸ್ವರದಲ್ಲಿ ಅರ್ಥವತ್ತಾದ ಒಳದನಿಯೊಂದಿತ್ತೆ? ವಾತಾ ವರಣದಲ್ಲಿ ಒತ್ತಡ ಹೆಚ್ಚಾಗಿದೆಯೆ? ಅಂತೂ ರುಬಷೊವನ ನರಮಂಡ ಲವು ಸೆಡೆಯುತ್ತಿದ್ದುದು ನಿಶ್ಚಯ.

ಭೋಜನದ ಮೆರವಣಿಗೆ ತೆರಳಿದ ಮೇಲೆ ರುಬಷೊವ ಬಾಗಿಲ ತೂತಿನಿಂದ ನೋಡಿದನು. ಹೊರಗಿನ ವಿದ್ಯುದ್ದೀಪಗಳು ವಿದ್ಯುಚ್ಛಕ್ತಿ ಕಡಮೆಯಾದುದರಿಂದ ಮಸುಕಾಗಿ ಉರಿಯುತ್ತಿದ್ದುವು; ನಡವೆಯುಲ್ಲಿ ಎಂದಿನಂತೆ ಗಂಭೀರ ಮೌನ ಕವಿದಿತ್ತು. ರುಬಷೊವ ಮಂಚದ ಮೇಲೆ

ಮಲಗಿದನು, ಒಂದೆರಡು ಸಾಲು ಬರೆಯಲು ಯತ್ನಿಸಿದನು, ಒಂದು ಸಿಗರೇಟನ್ನು ಮುಗಿಸಿ ಇನ್ನೊಂದನ್ನು ಹಚ್ಚಿದನು. ಕೆಳಗಡೆ ಅಂಗಳ ವನ್ನು ನೋಡಿದನು: ಹಿಮಗಡ್ಡೆ ಕರಗಿ ಕೆಸರಿನ ಹಾಗಾಗಿತ್ತು, ಆಕಾಶ ದಲ್ಲಿ ಮೋಡಗಳು ಸುತ್ತುತ್ತಿದ್ದುವು, ಸೆರೆಮನೆಯ ಸುತ್ತಣ ದಿಬ್ಬದ ಮೇಲೆ ಪಹರೆಯವನು ರೈಫಲ್ ಹಿಡಿದು ಗಸ್ತು ಹೊಡೆಯುತ್ತಿದ್ದನು.

ರುಬಶೊವ ಸಂಪ್ರದಾಯ ವಿರುದ್ಧವಾಗಿ ಗೋಡೆಯ ಬಳಿ ಹೋಗಿ ೪೦೨ರವನ ಜತೆ ಸಂಭಾಷಣೆಯನ್ನು ಆರಂಭಿಸಿದನು. 'ನಿದ್ದೆ ಬಂದಿ ದೆಯೇ?' ಎಂದು ಕೇಳಿದನು.

ಸ್ವಲ್ಪ ಸಮಯ ಉತ್ತರವಿಲ್ಲ. ರುಬಶೊವ ನಿರಾಶೆ ಯಿಂದ ಕಾದನು. ಆ ಮೇಲೆ ಎಂದಿಗಿಂತಲೂ ನಿಧಾನವಾಗಿ

**'ಇಲ್ಲ, ಏನು ನಿನಗೂ ಏನಾದರೂ ಒಂದು ತರಹ ಅನಿಸುತ್ತಿದೆಯೆ?'**

**'ಅನಿಸುವುದು ಅಂದರೆ?'**

೪೦೨ ಸ್ವಲ್ಪ ಹೊತ್ತು ತಡೆದು ಮತ್ತಷ್ಟು ನಿಧಾನವಾಗಿ

**'ನೀನು ನಿದ್ದೆಹೋದರೆಯೆ ಒಳ್ಳೆಯದು'**

ರುಬಶೊವ ಮಂಚದ ಮೇಲೆ ಮಲಗಿ ನೀಳವಾದ ಉಸಿರು ಬಿಡುತ್ತಿದ್ದನಾದರೂ ೪೦೨ರವನು ಹಿರಿಯರಂತೆ ಎಚ್ಚರಿಕೆ ಕೊಡುವುದು ಅವನಿಗೆ ಇಷ್ಟವಾಗಲಿಲ್ಲ. ಅವನು ಮಂಚದ ಮೇಲೆ ಮಲಗಿ ಕಣ್ಣೆದಿರು ಹಿಡಿದ ಕನ್ನಡಕವನ್ನೆ ದಿಟ್ಟಿಸುತ್ತಿದ್ದನು. ಅಷ್ಟರಲ್ಲಿ ೪೦೨ರವನು ಮತ್ತೆ ಮಾತಿಗಾರಂಭಿಸಿದನು:

**'ನಿನಗೆ ಕೂಡಲೇ ತಿಳಿದದ್ದು ವಿಚಿತ್ರ.'**

**'ತಿಳಿದದ್ದು ಎಂದರೆ? ಯಾವುದು?'**

**ಈ ರಾತ್ರಿ ರಾಜಕೀಯ ಭಿನ್ನಾಭಿಪ್ರಾಯಗಳ ಬಗ್ಗೆ ನಿರ್ಣ ಯಕ್ಕೆ ಬರುತ್ತಾರೆ.'**

ರುಬಶೊವಗೆ ಈ ಮಾತಿನ ಅರ್ಥವಾಯಿತು. ಗೋಡೆಗೊರಗಿ ಕೂತು ಇನ್ನೂ ಏನು ಬರಲಿದೆಯೋ ಎಂದು ಉತ್ಸುಕನಾಗಿ ಆತ

ಕೂತಿದ್ದನು. ಆದರೆ ೪೦೭ರಿಂದ ಯಾವ ವರ್ತಮಾನವೂ ಇಲ್ಲ. ರುಬಷೊವ ತುಸು ಹೊತ್ತಿನ ಮೇಲೆ ಬಡಿದನು:

**'ಗುಂಡು ಹಾಕುತ್ತಾರೋ?'**

**'ಮತ್ತೇನು?'**

**'ನಿನಗೆ ಹೇಗೆ ಗೊತ್ತು?'**

**'ಸೀಳ್ಬಾಯಿಯವನು ಹೇಳಿದ'**

**'ಯಾವಾಗ?'**

**'ಗೊತ್ತಿಲ್ಲ....ಹಾಂ, ಬೇಗನೆ ಇದೆ'**

**'ಯಾರು ಯಾರೆಂದು ಹೆಸರು ಗೊತ್ತೆ?'**

'ಇಲ್ಲ' ಎಂದು ೪೦೭ರಿಂದ ಉತ್ತರ ಬಂದಿತು. ಸ್ವಲ್ಪ ತಡೆದ ಮೇಲೆ 'ನಿನ್ನ ಜಾತಿಯವರು. ರಾಜಕೀಯ ಭಿನ್ನಾಭಿಪ್ರಾಯದವರು' ಎಂದು ಕೇಳಿಸಿತು.

ರುಬಷೊವ ಮಂಚದ ಮೇಲೆ ಮಲಗಿ ಇನ್ನೂ ಏನಾದರೂ ಬರಬಹುದೇ ಎಂಬ ನಿರೀಕ್ಷೆಯಲ್ಲಿ ತೋಳಿನ ಮೇಲೆ ತಲೆಯನ್ನಿರಿಸಿ ನಿಶ್ಚಲನಾಗಿ ಬಿದ್ದುಕೊಂಡನು. ಹೊರಗೆ ಎಲ್ಲವೂ ಮೌನವಾಗಿತ್ತು, ಇಡಿ ಕಾರಾಗೃಹವೇ ಅಂದು ರಾತ್ರಿ ಅಂಧಕಾರದಲ್ಲಿ ಘನೀಭೂತವಾದಂತಿತ್ತು.

ರುಬಷೊವ ಫಾಶೀ ಶಿಕ್ಷೆಯನ್ನು ಪ್ರತ್ಯಕ್ಷ ಕಂಡವನಲ್ಲ. ಯಾದವೀ ಕಲಹದ ಸಮಯ ಅವನಿಗೆ ತನ್ನ ಶಿಕ್ಷೆಯನ್ನೇ ನೋಡಲು ಒದಗಿದ ಸಂದರ್ಭವೂ ಕೂಡ ತಪ್ಪಿಹೋಗಿತ್ತು. ಆದರೆ ಸಾಮಾನ್ಯ ಪರಿಸ್ಥಿತಿಯಲ್ಲಿ ಫಾಶಿ ಶಿಕ್ಷೆ ಹೇಗೆ ತೀರೀತೆಂದು ಅವನಿಗೆ ತಿಳಿಯದು. ಶಿಕ್ಷೆಗೆ ಗುರಿಯಾದವರನ್ನು ರಾತ್ರಿ ಹೊತ್ತಿಗೆ ಗುಂಡಿಟ್ಟು ಕೊಲ್ಲುವರೆಂದು ಮಾತ್ರ ಗೊತ್ತಲ್ಲದೆ ವಿವರಗಳಾವುವೂ ಅವನಿಗೆ ತಿಳಿಯವು; ಪಾರ್ಟಿಗೆ ಸಾವಿನಲ್ಲಿ ಯಾವ ರಹಸ್ಯವೂ ಅಡಗಿದಂತಿರಲಿಲ್ಲ. ಅದು ಯಾವುದೋ ಆಚರಣೆಯ ಅಥವಾ ವಿಚಾರದ ತರ್ಕಬದ್ಧ ಪರಿಣಾಮವಾದುದರಿಂದ ಸಾವಿನಲ್ಲಿ ವಿಚಿತ್ರವಾದ ವಿಷಯವೇನೂ ಇರಲಿಲ್ಲ. ಮರಣವಾಗಲಿ 'ಫಾಶಿ' ಅಥವಾ 'ಗಲ್ಲು' ಎಂಬ ಶಬ್ದಗಳಾಗಲಿ ಪಾರ್ಟಿಯಲ್ಲಿ ಬಳಸಲ್ಪಡುತ್ತಿರಲಿಲ್ಲ. ಅದರ ಬದಲು ಸಾಂಪ್ರದಾಯಿಕವಾಗಿ 'ಶಾರೀರಿಕ ನಿರ್ನಾಮ' ಎಂಬ

ಪದವೇ ರೂಢಿಯಾಗಿತ್ತು. ಆ ಪದಕ್ಕಾದರೂ ರಾಜಕೀಯ ಚಟುವಟಿಕೆ ಯಿಂದ ಬಿಡುಗಡೆ ಎನ್ನುವುದರ ಹೊರತು ಬೇರಾವ ವಿಶೇಷಾರ್ಥವೂ ಇರಲಿಲ್ಲ. ಸಾಯುವುದು ಒಂದು ಕೇವಲ ತಾಂತ್ರಿಕ ವಿಷಯ, ಅದರಲ್ಲಿ ಯಾರಿಗೂ ಅಭಿರುಚಿ ಇರಬೇಕಾದ್ದಿಲ್ಲ; ತಾರ್ಕಿಕ ಸಮೀಕರಣದ ಒಂದು ಅವಯವದ ಪಾತ್ರದಲ್ಲಿ ಮರಣಕ್ಕೆ ಯಾವ ಶಾರೀರಿಕ ಸ್ವರೂಪವೂ ಇರಲಿಲ್ಲ.

ರುಬಷೊವ ಕನ್ನಡಕದ ಮೂಲಕ ಕೋಣೆಯ ಕಗ್ಗತ್ತಲನ್ನು ಭೇದಿಸಿ ನೋಡಲೆಳಸಿದನು. ಕಾರ್ಯಕ್ರಮ ಆರಂಭವಾಯಿತೆ? ಅಥವಾ ಇನ್ನು ಆರಂಭವಾಗಬೇಕೆ? ಬೂಟು ಮತ್ತು ಕಾಲುಚೀಲಗಳನ್ನು ತೆಗೆದಿದ್ದುದ ರಿಂದ ಅವನ ಕಾಲು ಕತ್ತಲಲ್ಲೂ ಕಾಣುತ್ತಿತ್ತು. ಸುತ್ತಲಿನ ಮೌನವು ಅಸಹನೀಯವಾಗಿ ಬೆಳೆಯುತ್ತಿತ್ತು—ಎಲ್ಲವನ್ನು ನುಂಗಿ, ಎಳೆದಿಟ್ಟ ನಗಾರಿಯಂತೆ ಗಡುಸಾಗಿ ನೆಲೆನಿಂತ ದುರ್ದಮನೀಯ ಮೌನ. ರುಬಷೊವ ತನ್ನ ಪಾದಗಳನ್ನೇ ದಿಟ್ಟಿಸಿ, ಕಾಲ್ಬೆರಳುಗಳನ್ನು ಆಡಿಸಿದನು. ಆ ಬಿಳಿಯ ಪಾದಗಳಿಗೊಂದು ಪ್ರತ್ಯೇಕ ಜೀವನವಿರುವಂತೆ ಅವನಿಗನಿ ಸಿತು. ರುಬಷೊವಗೆ ತನ್ನ ದೇಹದ ಅಸ್ತಿತ್ವವು ಬಲು ಉತ್ಕಟವಾಗಿ ಅನುಭವವಾಗುತಿತ್ತು, ಕಂಬಳಿಯೊಳಗಿನ ಕಾಲು ಬೆಚ್ಚಗಾಗಿಯೂ, ತಲೆಯಡಿಯ ತೋಳು ತಲೆಯೊತ್ತಿನಿಂದ ಭಾರವಾಗಿಯೂ ಕಂಡು ಮನ ಸ್ಸಿಗೆ ಹಿತವಾಗುತಿತ್ತು. 'ಶಾರೀರಿಕ ನಿರ್ನಾಮ'ದ ಜಾಗ ಯಾವುದಿರ ಬಹುದು? ಕ್ಷೌರಿಕನ ಕೋಣೆಯ ಆಚೆಕಡೆ, ಮೆಟ್ಟಲನ್ನು ಇಳಿದು ಹೋಗಬೇಕೇನೊ? ಗ್ಲೆಟ್‌ಕಿನನ ಚರ್ಮದ ಬೆಲ್ಟಿನ ಹಸಿ ವಾಸನೆ ರುಬ ಷೊವನ ಮೂಗಿಗೆ ಬಡಿಯಿತು. ಅವರು ಬಲಿಪಶುವಿಗೆ ಏನು ಹೇಳ ಬಹುದು?—'ಗೋಡೆಗೆ ಮುಖಮಾಡಿ ನಿಲ್ಲು' ಎಂತಲೆ? 'ದಯಮಾಡಿ' ಎಂದು ಸೇರಿಸಬಹುದೆ? ಅಥವಾ 'ಹೆದರ ಬೇಡ, ನೋವು ಗೊತ್ತೇ ಆಗದು' ಎಂತಲೆ? ಬಹುಶಃ ಗ್ಲೆಟ್‌ಕಿನ್ ಯಾವ ಸುದ್ದಿಯೂ ಇಲ್ಲದೆ ಕೈದಿ ಗಳು ಮುಂದಿನಿಂದ ನಡೆಯುತ್ತಿದ್ದಾಗ ಹಿಂದಿನಿಂದ ಗುಂಡುಹಾಕಬಹುದು. ಗ್ಲೆಟ್‌ಕಿನ್ ರಿವಾಲ್ವರನ್ನು ಕಿಸೆಯೊಳಗೆ ಬಚ್ಚಿಟ್ಟಾನೋ? ಬೇರೆ ಇತರ ಸಾಕ್ಷಿಗಳು ಯಾರಿರಬಹುದು? ಅವರ ಮುಖಮುದ್ರೆ ಹೇಗಿರಬಹುದು?

ಬಲಿಯಾದ ಮನುಷ್ಯ ಮುಂದುಗಡೆ ಬೀಳುವನೇ ಹಿಂದಕ್ಕೋ? ಅವನು ಬೊಬ್ಬೆ ಹಾಕುವನೇ, ಇಲ್ಲವೆ? ಒಂದೇ ಗುಂಡಿಗೆ ಅವನು ಸಾಯದಿದ್ದರೆ ಎರಡನೆಯದನ್ನು ಹಾರಿಸಬೇಕಲ್ಲವೆ?

ರುಬಷೊವ ಸಿಗರೇಟನ್ನು ದೀರ್ಘವಾಗಿ ಸೇದಿ ಅರ್ಥವಿಲ್ಲದ ಮಾತು 'ಶಾರೀರಿಕ ನಿರ್ನಾಮ' ಎಂದನು. ಮರಣವು ತಾಂತ್ರಿಕವಾಗಿರಲು ಸಾಧ್ಯವೇ ಇಲ್ಲ, ಅದು ದುರೂಹ್ಯವಾದ ಒಂದು ಸತ್ಯ. ನಮ್ಮದೆ ಮರಣ ವಾದರಂತೂ ಇನ್ನಷ್ಟು ಕಲ್ಪನಾತೀತ. ಪ್ರಾಯಃ ಇಷ್ಟು ಹೊತ್ತಿಗೆ ಎಲ್ಲವೂ ಮುಗಿದಿರಬಹುದು. ನಡೆದು ಹೋದ ಮೇಲೆ ಅದರಲ್ಲಿ ವಾಸ್ತವ ವಾದ್ದೇನಿದೆ? ಕತ್ತಲೂ ಮೌನವೂ ಒಂದನ್ನೊಂದು ಮೀರಿಸುತಿದ್ದವು. ೪೦೨ರಿಂದ ಸುದ್ದಿ ಇಲ್ಲ.

ಹೊರಗಿಂದ ಯಾರಾದರೂ ಕಿರ್ರೆಂದು ಕಿರಿಚಿದರೂ ರುಬಷೊವಗೆ ಸಂತೋಷವಾಗುತಿತ್ತು---ಮೌನದಿಂದ ಅಷ್ಟು ಭೀತನಾಗಿದ್ದನಾತ. ಕೆಲವು ಹೊತ್ತಿನಿಂದ ಅವನ ಸೊಳ್ಳೆಗೆ ಅರ್ಲೊವಳ ಮಂದವಾಸನೆ ಬಡಿಯುತ್ತಿತ್ತು. ಸಿಗರೇಟಿಗೂ ಅವಳದೇ ವಾಸನೆ. ಅವನ ಚೀಲದಲ್ಲಿದ್ದ ಸಿಗರೇಟೆಲ್ಲ ಪೌಡರಿನ ವಾಸನೆಯಿಂದ ತೊಯ್ದಿದ್ದುವು........ಮೌನ ಮುಂದುವರಿಯಿತು. ಮಂಚವೊಂದೇ ಆಗಿಂದಾಗ ಮೆಲ್ಲನೆ ಸಪ್ಪಳ ಮಾಡುತ್ತಿತ್ತು.

ರುಬಷೊವ ಇನ್ನೊಂದು ಸಿಗರೇಟ ಹಚ್ಚುವುದರಲ್ಲಿದ್ದಾಗ ಗೋಡೆಯಲ್ಲಿ ಬಡಿತ ಆರಂಭವಾಯಿತು.

'**ಬರುತ್ತಿದ್ದಾರೆ**' ಎಂದು ಅದು ನುಡಿಯಿತು.

ರುಬಷೊವ ಆಲಿಸಿದನು. ಅವನ ಹಣೆಯ ನರಗಳು ತೀವ್ರವಾಗಿ ಬಡಿದುಕೊಳ್ಳುತ್ತಿದ್ದುವು. ಅವನು ಕಾದಹಾಗೆ ಮೌನವು ಒತ್ತರಿಸಿತು. ಕನ್ನಡಕವನ್ನು ತೆಗೆದು 'ನನಗೇನೂ ಕೇಳಿಸುತ್ತಿಲ್ಲವಲ್ಲಾ?' ಎಂದು ಮರುನುಡಿದನು.

೪೦೨ ಬಹಳ ಹೊತ್ತು ಸುಮ್ಮಗಿದ್ದನು. ಆ ಮೇಲೆ ತೀವ್ರವಾಗಿ, '**ನಂಬರ ೩೮೦ ಸುದ್ದಿ ದಾಟಿಸು**' ಎಂದನು.

ರುಬಷೊವ ಸಟಕ್ಕನೆಎದ್ದು ಕೂತನು. ಅವನಿಗರ್ಥವಾಯಿತು: ೩೮೦ರ ನೆರೆ ಕೊಠಡಿಯಿಂದ ಸುದ್ದಿ ಇಷ್ಟುದೂರ ಬಂದಿತ್ತು– ಪರಸ್ಪರ ಸಹಕಾರದಿಂದ. ಇದೀಗ ಅವನ ಸರದಿ. ಸುದ್ದಿಯನ್ನು ಮುಂದಿನ ಕೋಣೆಗಳಿಗೆ ಕಳಿಸಬೇಕಾದ್ದು ಅವನ ಕರ್ತವ್ಯ. ಬರಿಗಾಲಲ್ಲೇ ಕೋಣೆಯ ಆಚೆಗೋಡೆಗೆ ನಡೆದು, ಬಕೀಟಿನ ಪಕ್ಕದಲ್ಲಿ ನಿಂತು, ರುಬಷೊವ ೪೦೬ರವನಿಗೆ ಸುದ್ದಿ ಕಳಿಸಿದನು:

**'ಕೇಳು ೩೮೦ನ್ನು ಗುಂಡಿಟ್ಟು ಮುಗಿಸುತ್ತಾರೆ. ದಾಟಿಸು.'**

ಬಕೀಟು ನಾರುತಿತ್ತು. ಅದರ ನಾತದಲ್ಲಿ ಅರ್ಲೋವಳ ದೇಹ ಗಂಧವು ವಿಲೀನವಾಯಿತು.

ರುಬಷೊವ ತನ್ನ ಮಂಚದ ಬಳಿ ಬಂದು **'೩೮೦ ಯಾರು?'** ಎಂದು ಕೇಳಿದನು.

ಆಗಲೂ ಉತ್ತರವಿಲ್ಲ. ತನ್ನ ಹಾಗೆ ೪೦೨ ಕೂಡ ಕೋಣೆಯಲ್ಲಿ ಅತ್ತಿಂದಿತ್ತ ಗಡಿಯಾರದ ಲೋಲಕದಂತೆ ಅಡ್ಡಾಡುತ್ತಿರಬಹುದೇನೋ ಎಂದು ರುಬಷೊವ ಯೋಚಿಸಿದನು. ಅದೇರೀತಿ ಮೊದಲಿನ ೧೧ ಕೋಣೆಗಳಲ್ಲಿಯೂ ಅದರ ನಿವಾಸಿಗಳು ಲೋಲಕಗಳಾಗಿರಬಹುದೇನೋ ಅನಿಸಿತು. ೪೦೨ ಮತ್ತೆ ರುಬಷೊವಗೆ ವರ್ತಮಾನ ತಂದನು;

**'ತೀರ್ಪನ್ನು ಅವನಿಗೆ ಓದಿ ಹೇಳುತ್ತಿದ್ದಾರೆ. ದಾಟಿಸು'**

ರುಬಷೊವ ತನ್ನ ಹಿಂದಿನ ಪ್ರಶ್ನೆಯನ್ನು ಮತ್ತೊಮ್ಮೆ ಕೇಳಿದನು. **'ಅವನಾರು?'**

ಆದರೆ ೪೦೨ ತನ್ನ ಕೋಣೆಯ ಆಚೆ ಕಡೆಯ ಗೋಡೆಯ ಪಕ್ಕಕ್ಕೆ ಸರಿದ ಹಾಗಿತ್ತು. ಸ್ವಲ್ಪ ಹೊತ್ತಿನಲ್ಲಿ ಈಚೆ ಗೋಡೆಯಲ್ಲಿ **'ಕಾಪಾಡಿರೆಂದು ಬೊಬ್ಬಿಡುತ್ತಿದ್ದಾನೆ ಅವನು.'** ಎಂಬ ಸದ್ದು ಮೂಡಿತು.

ರುಬಷೊವ ಬಕೀಟಿನ ಹತ್ತಿರ ತೆರಳಿ 'ಕಾಪಾಡಿರೆಂದು ಅವನು ಬೊಬ್ಬಿಡುತ್ತಿದ್ದಾನೆ' ಎಂಬುದನ್ನು ೪೦೬ರವನಿಗೆ ದಾಟಿಸಿದನು. ಅದೇಕೋ ರುಬಷೊವಗೆ ತಲೆ ಸುತ್ತುತಿತ್ತು.

**'ಅವರು ಅವನನ್ನು ಹಿಡಿದು ತರುತಿದ್ದಾರೆ. ಅವನು ಬೊಬ್ಬಿರಿಯುತ್ತ ಅವರನ್ನು ನೂಕುತ್ತ ಇದ್ದಾನೆ. ದಾಟಿಸು'**

ಎಂದು ಆಂತರಿಂದ ಸುದ್ದಿ ಬಂದಾಗಲಂತು ರುಬಷೊವಗೆ ಅವನ ಹೆಸರು ತಿಳಿಯುವ ಆತುರ ಇನ್ನಷ್ಟು ಅಧಿಕವಾಯಿತು.

**'ಹೆಸರೇನು?'**

'ಬೊಗ್ರೊವ್. ವಿರೋಧಿ ಗುಂಪಿನವ ದಾಟಿಸು.'

ರುಬಷೊವನ ಕಾಲು ಭಾರವಾದಂತೆ ಕಂಡಿತು. ಗೋಡೆಗೆ ಒರಗಿನಿಂತು ಅವನು ಆಂಕಕ್ಕೆ ಸುದ್ದಿ ದಾಟಿಸಿದನು:

**ಮೈಕೆಲ್ ಬೊಗ್ರೊವ್, ಪ್ರೊಟೆಮ್‌ಕಿನ್ ಯುದ್ಧ ನೌಕೆಯ ಮಾಜಿ ನಾವಿಕ, ಪ್ರಾಚ್ಯ ನೌಕಾಸೇನೆಯ ಮಹಾ ದಂಡ ನಾಯಕ, ಕ್ರಾಂತಿಯ ಪ್ರಥಮ ಪ್ರಶಸ್ತಿ ಪಡೆದ ಮಹಾನು ಭಾವನನ್ನು ಗಲ್ಲಿಗೇರಿಸಲು ಒಯ್ಯುತ್ತಿದ್ದಾರೆ'**

ಹಣೆಯಿಂದ ಬೆವರನ್ನೊರಸಿಕೊಂಡು **'ದಾಟಿಸು'** ಎಂದುದ ನ್ನೊನ್ನು ಗೋಡೆಗೆ ಬಡಿದು, ರುಬಷೊವ ಬೊಗ್ರೊವನ ಕುರಿತು ಯೋಚಿಸ ತೊಡಗಿದನು.

ಬೊಗ್ರೊವನ ಪ್ರತ್ಯಕ್ಷ ಚಿತ್ರವು ಅವನ ಸ್ಮರಣೆಗೆ ನಿಲುಕಲಿಲ್ಲ ವಾದರೂ ಅವನ ಭಾರೀ ದೇಹದ ಆಕಾರ, ಅವನ ಕೈಗಳ ಬೀಸಾಟ, ಮುಖದ ಮೇಲಿನ ಕಲೆಗಳು ಮತ್ತು ಮೂಗಿನ ಏರಿಕೆ ಜ್ಞಾಪಕಕ್ಕೆ ಬಂ ದುವು. ೧೯೦೫ರ ಗಡಿಪಾರಿನ ಸಂದರ್ಭದಲ್ಲಿ ರುಬಷೊವ ಮತ್ತು ಬೊಗ್ರೊ ವ ಒಂದೇ ಕೋಣೆಯಲ್ಲಿ ವಾಸಮಾಡಿದ್ದರು. ರುಬಷೊವ ಆತನಿಗೆ ಓದು, ಬರಹ ಮತ್ತು ಇತಿಹಾಸದ ಮೂಲತತ್ವಗಳನ್ನು ಉಪದೇಶಮಾಡಿದ್ದನು. ಅಂದಿನಿಂದ ರುಬಷೊವ ಎಲ್ಲೇ ಇರಲಿ ಶಿಷ್ಯನಿಂದ ವರ್ಷಕ್ಕೆ ಎರಡು ಪತ್ರ ಗಳು ಬರುತ್ತಿದ್ದುವು. ಪತ್ರದ ಕೊನೆಯಲ್ಲಿ 'ನಿಮ್ಮ ಕಾಮ್ರೇಡ, ಸಾಯು ವವರೆಗೂ ನಿಮ್ಮ ವಿಶ್ವಾಸಿ, ಬೊಗ್ರೊವ' ಎಂದು ಸಹಿಮಾಡಿರುತಿತ್ತು.

**'ಅವರು ಬರುತಿದ್ದಾರೆ'** ಎಂದು ಳಂ೨ ಸ್ವಲ್ಪಗಟ್ಟಿಯಾಗಿ ಬಡೆದ ನು. ಇನ್ನು ಸ್ವಲ್ಪ ಹೊತ್ತು ಕಳೆದು **'ಬಾಗಿಲಿನತೂತಿನ ಸಮೀಪನಿಲ್ಲು. ಬ್ಯಾಂಡ್ ಬಜಾವು ದಾಟಿಸು.'** ರುಬಷೊವ ಈ ಸುದ್ದಿಯನ್ನು ದಾಟಿಸಿ ಬಾಗಿಲಬಳಿ ಹೋಗಿನಿಂತನು. **'ಸರಿ, ಈಗಲೇ'** ಎಂಬ ಸದ್ದು ಕೇಳುತ್ತಲೇ ದೂರದಿಂದ ಜೈಲಿನ ಬಾಗಿಲಿನ ಬ್ಯಾಂಡಿನ ಸದ್ದು ಮೊದಲು

ಮೆದುವಾಗಿ ದೂರದ ತೆರೆಯಂತೆ ಉರುಳುವುದು ಕೇಳಿಸಿತು. ದೂರದಲ್ಲಿ ಬ್ಯಾಂಡ ಬಾರಿಸುವ ಸದ್ದನ್ನು ಹೊರಡಿಸುವ ಮಹಾ ಸಂಕಲಿಯು ೩೮೦ ರಿಂದ ೪೦೨ ಅಲ್ಲಿಂದ ೪೦೬, ೪೦೬ರಿಂದ ಮುಂದಕ್ಕೆ ಹೆಣೆದುಕೊಂಡಿತ್ತು. ಕೋಣೆಯ ಪ್ರತಿ ಬಾಗಿಲಿನಲ್ಲಿಯೂ ನಿಂತ ಕೈದಿ ತನ್ನಿಂದಾಗಿ ಸಂಕಲೀಯು ಮುರಿಯಬಾರದೆಂದು ಭಕ್ತಿಯಿಂದ ಏಕತಾಳದಲ್ಲಿ ಬ್ಯಾಂಡ ಬಾರಿಸುತ್ತಿದ್ದನು. ರಿಪ್‌ವ್ಯಾನ್ ವಿಂಕಲ್ ಕೂಡ ಈ ಸಾಮೂಹಿಕ ಸಂಗೀತದಲ್ಲಿ ಪಾತ್ರವಹಿಸಿದ್ದನು. ರುಬಷೊವನ ಎಡಗಡೆಯಲ್ಲಿ ಕಬ್ಬಿಣದ ಗೇಟು ತೆರೆದ ಸದ್ದಾಯಿತು. ಎಡಗಡೆಯ ಬ್ಯಾಂಡಿನ ಸದ್ದು ಏರ ತೊಡಗಿತ್ತು; ಸಾಮಾನ್ಯ ಕೊಠಡಿಗಳನ್ನು, ಏಕಾಂತ ಕೊಠಡಿಗಳಿಂದ ಪ್ರತ್ಯೇಕಿಸುವ ಕಬ್ಬಿಣದ ಗೇಟು ತೆರೆದದ್ದು ರುಬಷೊವಗೆ ಗೊತ್ತು. ಬೀಗದ ಕೈ ಝುಣ ಝುಣಿಸಿತ್ತು ಗೇಟು ಮರಳಿ ಹಾಕಿರಬೇಕು. ಪಾದ ಧ್ವನಿ ಕೇಳಿಸಿತು. ಎಡಗಡೆಯ ಬ್ಯಾಂಡ ಕ್ರಮಶಃ ಗಟ್ಟಿಯಾಗುತ್ತ ಬಂದಿತ್ತು. ರುಬಷೊವಗೆ ೪೦೧ರಿಂದ ೪೦೭ರ ವರೆಗಿನ ಕೋಣೆಯ ಮುಂಭಾಗ ಮಾತ್ರ ದೃಷ್ಟಿ ಪಥದಲ್ಲಿತ್ತು. ಹೊರಗೆ ನೋಡುತ್ತಿದ್ದಂತೆ ಹೆಜ್ಜೆಗಳು ದ್ರುತಗತಿಯಿಂದ ಸಾಗುವುದೂ, ಯಾರೋ ಮುಳುಮುಳು ಅಳುವುದೂ, ನೆಲದ ಮೇಲೆ ಕಾಲು ಜಾರಿಕೊಂಡು ಅಥವಾ ಎಳೆದುಕೊಂಡು ಬರುವುದೂ ಕೇಳಿಸಿತು. ಬಾಗಿಲ ತೂತಿಗೆ ಕಣ್ಣಿಟ್ಟು, ಕಾಲ ದೇಶಗಳನ್ನು ಮರೆತು, ರುಬಷೊವ ತಾಳ ತಪ್ಪದಂತೆ ಬಾಗಿಲಿನ ಮೇಲೆ ಬಡೆಯುತ್ತಿದ್ದನು. ಹಳದಿ ವಿದ್ಯುದ್ದೀಪಗಳ ಮಂದ ಪ್ರಕಾಶವಷ್ಟೇ ಕಾಣಿಸುತ್ತಿತ್ತು. ಅಳುದನಿಯೂ, ಪದಘಾತವೂ ಸಮಿೂಪಿಸಿದಂತೆ ಕಂಡಿತು. ಬ್ಯಾಂಡಿನ ಶಬ್ದ ಅತ್ಯುಚ್ಚವಾಯಿತು. ರುಬಷೊವ ಬಡೆಯುವುದನ್ನು ಬಿಟ್ಟು ಕಣ್ಮುಂದೆಯೆ ನೋಡಿದನು. ಒಂದು ಸೆಕೆಂಡಿನಲ್ಲಿ ಅವರೆಲ್ಲ ಅವನ ದೃಷ್ಟಿಪಥದಿಂದ ಮರೆಯಾದರು.

ಆ ಕೆಲ ಕ್ಷಣಗಳಲ್ಲಿ ನೋಡಿದ ದೃಶ್ಯವು ರುಬಷೊವನ ಮನಸ್ಸಿನಲ್ಲಿ ಸ್ಥಿರವಾಯಿತು. ಸಮವಸ್ತ್ರಧಾರಿಗಳಾದ ಇಬ್ಬರು ಧಾಂಡಿಗರ ನಡುವೆ, ಅವರ ತೋಳಿಗೆ ಸಿಲುಕಿ ಒಂದು ವ್ಯಕ್ತಿ ಜೋತಾಡುತ್ತಿದ್ದನು. ಹೊಟ್ಟೆ ಬಗ್ಗಿಸಿ, ಮುಖ ತಗ್ಗಿಸಿ, ದೇಹವನ್ನು ಎಳೆದು ಹಿಡಿದು, ನಡುವಿನವನು

ಸಿಪಾಯಿಗಳಿಗೆ ಪ್ರಯಾಸಕೊಡುವಂತ ತೋರುತಿತ್ತು. ಅವನ ಕಾಲುಗಳು ನೆಲಕ್ಕೆ ಮುಟ್ಟಿಯೂ ಮುಟ್ಟದಂತೆ, ನೆಲವನ್ನೊರಸಿಕೊಂಡು ಹೋಗುವಂತಿತ್ತು. ನರೆತ ಕೂದಲು ನೆಲಕ್ಕೆ ಬಗ್ಗಿದ ಮುಖದ ಮೇಲೆ ಅಸ್ತವ್ಯಸ್ತವಾಗಿ ಹರಡಿತ್ತು. ತರೆದ ಬಾಯಿಯಿಂದ ಎಂಜಲು ಕೆನ್ನೆಯ ಮೇಲೆಲ್ಲ ಸಪೂರವಾಗಿ ಹರಿಯುತಿತ್ತು. ತಲೆಕೂದಲಿನಲ್ಲಿ ಬೆವರಿನ ಹನಿಗಳಿದ್ದುವು. ರುಬಷೊವನ ದೃಷ್ಟಿ ಪಥದಿಂದ ಈ ನರಜಂತುವು ಹಾದು ಹೋದ ಬಳಿಕ ದೂರದಲ್ಲಿ 'ಊ–ಆ–ಓ' ಎಂಬ ನರಳಿಕೆಯ ಪ್ರತಿಧ್ವನಿ ಕೇಳಿಸುತ್ತಿತ್ತು. ಆದರೆ ನಡವೆಯಲ್ಲಿ ಕ್ಷೌರಿಕನ ಅಂಗಡಿಯ ಪಕ್ಕದಲ್ಲಿ ತಿರುಗುವುದಕ್ಕೆ ಮುಂಚಿತವಾಗಿ ಎರಡು ಸಲ ಆತ ಗಟ್ಟಿಯಾಗಿ, 'ರು-ಬ-ಷೊವ' ಎಂದು ಕೂಗಿದುದು ರುಬಷೊವಗೆ ಸ್ಪಷ್ಟವಾಗಿ ಕೇಳಿಸಿತು.

ಆ ಮೇಲೆ ಮೌನ ಆವರಿಸಿತು. ಹೊರಗಿನ ಹಳದಿ ವಿದ್ಯುದ್ದೀಪ ಯಥಾಪ್ರಕಾರ ಉರಿಯುತಿತ್ತು. ನಡವೆಯು ನಿರ್ಜನವಾಗಿ ಬಿಕೋ ಅನ್ನುತಿತ್ತು. ೪೦೭ನೆಯ ಕೊಠಡಿಯ ಮುದಿಯನು ಮಾತ್ರ 'ಧರಣೀತಲದ ಪತಿತರೇ ಜಾಗ್ರತರಾಗಿ' ಎಂದು ಗೋಡೆತಟ್ಟುವುದನ್ನು ನಿಲ್ಲಿಸಲಿಲ್ಲ.

ರುಬಷೊವಗೆ ತಿಳಿಯದೆಯೆ ಆತ ಮಂಚದವರೆಗೆ ಹೋಗಿ ಮಂಚದ ಮೇಲೆ ಬಿದ್ದುಕೊಂಡಾಗಿತ್ತು. ಕಿವಿಯಲ್ಲಿ ಸಾಮೂಹಿಕ ಬ್ಯಾಂಡಿನ ನಿನಾದ ಇನ್ನೂ ಗುಯ್‌ಗುಡುತ್ತಿದ್ದರೂ, ಹೊರಗಿನ ಮೌನವು ಹಿಂದಿನ ಗಂಭೀರ ವೇದನೆಯನ್ನು ಕಳೆದುಕೊಂಡು ಸಹಜವಾಗಿತ್ತು. ೪೦೨ ನಿದ್ದೆ ಹೋಗಿರಬಹುದು. ಬೊಗ್ರೊವ ಅಥವಾ ಸೆರೆಯ ಯಾತನೆಯಿಂದ ಅಳಿದುಳಿದ ಅವನ ಶರೀರ ಶೇಷವು ಇಷ್ಟು ಹೊತ್ತಿಗೆ ಚಿರಶಾಂತಿಯನ್ನು ಪಡೆದಿರಬಹುದು.

'ರುಬಷೊವ, ರುಬಷೊವ' ಎಂಬೆರಡು ಕೂಗು ಅವನ ಸ್ಮರಣೆಯಲ್ಲಿ ಸ್ಥಿರಗೊಂಡಿತ್ತು. ಕಣ್ಣಿಂದ ನೋಡಿದ ದೃಶ್ಯಕ್ಕಿಂತ ಕಿವಿಯಿಂದ ಕೇಳಿದ ಈ ಕೂಗೂ ಹೆಚ್ಚು ಸ್ಪಷ್ಟವಾಗಿತ್ತು. ಸಿಪಾಯಿಗಳ ತೋಳಿನ ನಡುವೆ ಸಿಕ್ಕು ಜೋತಾಡುತ್ತಿದ್ದ ಜೀವಕ್ಕೂ, ಬೊಗ್ರೊವನಿಗೂ ಸಂಬಂಧ ಕಲ್ಪಿಸುವುದು ಬಹಳ ಪ್ರಯಾಸದ ಕೆಲಸವೇ ಸರಿ. ಅವನ ಕೂದಲು

ಬೆಳ್ಳಗಾದ್ದನ್ನು ರುಬಷೊವ ಗಮನಿಸಿದ್ದು ಈಗಲೇ ಸರಿ. ಬೊಗ್ರೊವ ನಿಗೆ ಅವರೇನು ಮಾಡಿರಬೇಕು? ಅವನ ಬಾಯಿಂದ ಮಕ್ಕಳ ಹಾಗೆ ಬಿಕ್ಕಲು ಹೊರಡಿಸಬೇಕಾದರೆ ಅವನಿಗವರು ಏನು ಮಾಡಿರಬೇಕು? ನಡವೆಯಲ್ಲಿ ಒಯ್ಯುವಾಗ ಅರ್ಲೋವಾ ಕೂಡ ಇದೇ ರೀತಿ ಬಿಕ್ಕಿ ಬಿಕ್ಕಿ ಅತ್ತಿರಬಹುದೇ?

ರುಬಷೊವ ಎದ್ದು ಕೂತು ಹಣೆಯನ್ನು ೪೦೭ರವನ ಕೋಣೆಗೆ ತಾಗಿಕೊಂಡಿದ್ದ ಗೋಡೆಗೆ ಆನಿಸಿದನು. ಅಸ್ವಸ್ಥತೆಯ ಒಂದು ತರಂಗವೇ ಅವನನ್ನು ಮುತ್ತುತಿತ್ತು. ಅರ್ಲೋವಳ ಮರಣವನ್ನು ಇಷ್ಟು ಸೂಕ್ಷ್ಮವಾಗಿ ಅವನು ವಿಶ್ಲೇಷಿಸಿದ್ದೂ ಈಗಲೇ. ತನ್ನ ನಡತೆಯ ತಾರ್ಕಿಕ ನಿರ್ದೋಷತೆಯ ಗುಂಗಿನಲ್ಲಿ ಅರ್ಲೋವಳ ಮರಣದ ಯಾಥಾರ್ಥ್ಯವು ಮರೆಯಾಗಿತ್ತು. ಆದರೆ ಹೊಟ್ಟೆ ಮಗಚುವ ಈಗಿನ ಈ ಪರಿಸ್ಥಿತಿಯಲ್ಲಿ ಅವನಿಗೆ ತನ್ನ ಹಿಂದಿನ ವಿಚಾರಸರಣಿಯು ಕೇವಲ ಉನ್ಮಾದವೆಂಬಂಶವು ಸ್ಪಷ್ಟವಾಯಿತು. ಬೊಗ್ರೊವನ ಬಿಕ್ಕಲು ತಾರ್ಕಿಕ ಸಮೀಕರಣವನ್ನು ಹದಗೆಡಿಸಿತು. ಇದುವರೆಗೆ ಅರ್ಲೋವಾ ಈ ತಾರ್ಕಿಕ ಸಮೀಕರಣದ ಒಂದು ಅಲ್ಪ ಅವಯುವವಾಗಿದ್ದಳು. ಹಿಮ್ಮಡಿ ಎತ್ತರದ ಬೂಟಿನ ಅರ್ಲೋವಳ ಕಾಲು ನಡವೆಯಲ್ಲಿ ಎಳೆಯಲ್ಪಡುವ ದೃಶ್ಯವು ಗಣಿತದ ಸಮತೋಲವನ್ನು ಕೆಡಿಸಿಬಿಟ್ಟಿತು. ಅಮುಖ್ಯವೆಂದೆಣಿಸಿದ್ದ ವಿಷಯವೇ ಈಗ ಬೃಹತ್ತಾಗಿ, ನಿರಪೇಕ್ಷವಾಗಿ, ಸ್ವತಂತ್ರವಾಗಿ ಬೆಳೆಯಿತು; ಬೊಗ್ರೊವನ ಬಿಕ್ಕಲು, ಆತ ತನ್ನ ಹೆಸರನ್ನು ಕೂಗಿ ಕರೆದ ಅಮಾನುಷ ಸ್ವರ, ಮತ್ತು ಬಾಗಿಲ ಬ್ಯಾಂಡಿನ ನಾದತರಂಗ. ರುಬಷೊವನ ಕಿವಿಯನ್ನು ತುಂಬಿದುವು; ತರ್ಕದ ಕ್ಷೀಣಸ್ವರವನ್ನು ಒತ್ತಿ ಹಿಡಿದು ಮುಳುಗುವ ಶಬ್ದವನ್ನು ಮೇಲಿನ ಬುರುಗುನೊರೆ ಮುಚ್ಚುವಂತೆ ಮುಚ್ಚಿಬಿಟ್ಟುವು.

## ೭

ನಿದ್ದೆಯಲ್ಲಿ ಅವನು ನರಳುತ್ತಿದ್ದನು; ಪ್ರಥಮ ಸಲ ತನ್ನನ್ನು ಅವರು ಸೆರೆಹಿಡಿದ ಕನಸು ಕಾಣುತ್ತಿದ್ದನು; ಏನು ಮಾಡಿದರೂ ಕೈಗಳು

ಅಂಗಿಯು ತೋಳಿನೊಳಕ್ಕೆ ಸೇರಲೊಲ್ಲವು; ಇನ್ನೇನು ಒದೆ ಬರಲಿದೆ ಎಂದುಕೊಂಡನು, ಆದರೆ ಒದೆಯೂ ಬರಲೊಲ್ಲದು.

ಬವಲು ಅವನಿಗೆ ಎಚ್ಚರವಾಯಿತು. ಕೋಣೆಯ ವಿದ್ಯುದ್ದೀಪವನ್ನು ಒಮ್ಮೆಲೆ ಯಾರೋ ಬೆಳಗಿಸಿದರು. ಹಾಸಿಗೆಯ ಬಳಿ ನಿಂತವನೊಬ್ಬ ರುಬಷೊವನನ್ನೇ ನೋಡುತ್ತಿದ್ದನು. ರುಬಷೊವ ಮಲಗಿ ಕಾಲು ತಾಸು ಆಗಿರಲಾರದು, ಆದರೆ ಕನಸಿನಿಂದ ವಾಸ್ತವಕ್ಕೆ ಮರಳಲು ಅವನಿಗೆ ಯಾವಾಗಲೂ ಸ್ವಲ್ಪಸಮಯ ತಗಲುತಿತ್ತು. ಪ್ರಕಾಶಮಾನವಾದ ದೀಪ ಕಣ್ಣು ಕುಕ್ಕುತಿತ್ತು. ಅವನ ಬುದ್ಧಿ ಏನೇನನ್ನೊ ಯೋಚಿಸುತಿತ್ತು. ಹೌದು ಅವನಿರುವುದು ಒಂದು ಕೋಣೆ—ಆದರೆ ಶತ್ರು ರಾಜ್ಯದ ಸೆರೆ ಮನೆಯ ಕೋಣೆಯಲ್ಲ. ಅಂದರೆ ಅವನು ಸ್ವತಂತ್ರ, ಆದರೆ ಹಾಸಿಗೆಯ ಮೇಲ್ಗಡೆ ತೂಗಿಕೊಂಡಿರಬೇಕಾದ ಒಂದನೆಯ ನಂಬರಿನವನ ಚಿತ್ರ ಪಠವೇಕೆ ಕಾಣುವುದಿಲ್ಲ? ಅಲ್ಲದೆ ಐವನೊವ ಹಾಸಿಗೆಯ ಬಳಿ ಸಿಗರೇಟ ಸುರುಳಿಯನ್ನು ಬಿಡುತ್ತಿದ್ದಾನಲ್ಲವೆ? ಇದೂ ಕನಸೋ? ಅಲ್ಲ, ಐವನೊವ ನಿಜವಾದ ಐವನೊವ, ಬಕೀಟು ವಾಸ್ತವ ಬಕೀಟು. ಅವನಿರುವುದು ಸ್ವದೇಶದಲ್ಲೇ ಆದರೂ ಇದೀಗ ಈ ಸ್ವದೇಶವೇ ಶತ್ರುರಾಜ್ಯವಾಗಿತ್ತು; ಇದುವರೆಗೆ ಸ್ನೇಹಿತನಾಗಿದ್ದ ಐವನೊವ ಕೂಡ ಈಗ ಶತ್ರುವಾಗಿದ್ದನು; ಅರ್ಲೋವಳ ಬಿಕ್ಕಲೂ ಸ್ವಪ್ನವಲ್ಲ. ಅಲ್ಲ,ಅಲ್ಲ, ಅರ್ಲೋವಾ ಎಲ್ಲಿದ್ದಾಳೆ, ತಾನು ಕಂಡದ್ದು ಬೊಗ್ರೊವನನ್ನು ಸಾಯುವತನಕ ವಿಶ್ವಾಸವಿಡುವ ಭರವಸೆ ಕೊಟ್ಟ ಬೊಗ್ರೊವನನ್ನು, ಆತ ರುಬಷೊವನ ಹೆಸರು ಹಿಡಿದು ಕರೆದದ್ದು ಕನಸಲ್ಲವಷ್ಟೆ. ಅರ್ಲೋವಾ ಮಾತ್ರ 'ನೀನು ನನ್ನನ್ನು ಬೇಕಾದ ಹಾಗೆ ನಡೆಸಿಕೊ. ಏನು ಬೇಕಾದರೂ ಮಾಡಿಸು' ಅಂದಿದ್ದಳಲ್ಲವೆ?

'ಏನು ಮೈ ಚೆನ್ನಾಗಿಲ್ಲವೆ?' ಎಂದು ಐವನೊವ ಕೇಳಿದನು.

ರುಬಷೊವ ದೀಪದ ಅಮಿತ ಪ್ರಕಾಶದಿಂದಾಗಿ ಕಣ್ಣು ಮುಚ್ಚಿರು ವಂತೆಯೇ 'ನನ್ನ ನಿಲುವಂಗಿಯನ್ನಿಲ್ಲಿ ತಾ' ಎಂದನು.

ಐವನೊವ ರುಬಷೊವನನ್ನೇ ಪರೀಕ್ಷಿಸಿ ನೋಡಿದನು. ಆತನ ಮುಖದ ಬಲಭಾಗವು ಊದಿಕೊಂಡಿತ್ತು. 'ಸ್ವಲ್ಪ ಬ್ರ್ಯಾಂಡಿ

ಕುಡಿಯುತ್ತೀಯಾ?' ಎಂದು ಐವನೊವ ಕೇಳಿದನು. ಉತ್ತರಕ್ಕೆ ಕಾಯದೆ ಬಾಗಿಲ ತೂತಿನಿಂದ ಹೊರಗಡೆ ಕೇಳಿಸುವಂತೆ ಏನೋ ಕೂಗಿದನು. ರುಬಷೊವ ಅವನು ಬಾಗಿಲ ಬಳಿ ಹೋಗುವುದನ್ನೇ ನೋಡಿದನು; ತಲೆಸುತ್ತುವುದು ನಿಲ್ಲದಾಗಿತ್ತು: ಅವನು ಎಚ್ಚರ ವಾಗಿದ್ದನೇನೋ ನಿಜ, ಆದರೆ ಎಲ್ಲವೂ ಮಂಜಿನ ಮುಸುಕಿನೊಳಗೆ ನಡೆಯುವಂತೆ ಅವನಿಗೆ ತೋರುತಿತ್ತು.

'ನಿನ್ನನ್ನೂ ಸೆರೆಹಿಡಿದರೋ?' ಎಂದು ಅವನು ಐವನೊವನಿಗೆ ಕೇಳಿದನು.

ಐವನೊವ ಸಮಾಧಾನದಿಂದ 'ಇಲ್ಲ. ನಿನ್ನನ್ನು ನೋಡಲು ಬಂದೆ. ನಿನಗೆ ಜ್ವರ ಬರುತ್ತಿದೆ ಎಂದು ಕಾಣುತ್ತದೆ' ಎಂದನು.

'ನನಗೊಂದು ಸಿಗರೇಟ ಕೊಡು.' ಎಂದನು ರುಬಷೊವ, ಸಿಗರೇಟನ್ನು ದೀರ್ಘವಾಗಿ ಒಂದೆರಡು ಸಲ ಎಳೆದ ತರುವಾಯ ಅವನ ದೃಷ್ಟಿ ನಿಚ್ಚಳವಾಯಿತು. ಸಿಗರೇಟು ಸೇದಿಕೊಂಡೇ ಮಂಚದ ಮೇಲೆ ಬಿದ್ದುಕೊಂಡು ಮಾಡನ್ನೇ ನೋಡತೊಡಗಿ ದನು. ಕೋಣೆಯ ಬಾಗಿಲು ತೆರೆಯಿತು. ಕಾವಲುಗಾರನು ಬ್ರಾಂಡಿ ಮತ್ತು ಕುಡಿಯುವ ಪಾತ್ರೆಯನ್ನು ತಂದನು. ಆದರೆ ಈ ಕಾವಲುಗಾರ ಮುದಿಯನಲ್ಲ, ಬೇರೊಬ್ಬ, ಕನ್ನಡಕಧಾರಿ, ಸಮವಸ್ತ್ರಧಾರಿ, ತರುಣ. ಐವನೋವನಿಗೆ ನಮಸ್ಕರಿಸಿ, ಬ್ರಾಂಡಿಯನ್ನು ಅವನ ಕೈಗೆ ಕೊಟ್ಟು, ಬಾಗಿಲು ಇಕ್ಕಿಕೊಂಡು ಆತ ಹೊರನಡೆದನು; ಅವನ ಹೆಜ್ಜೆಯ ಸಪ್ಪಳವು ನಡೆಯಲ್ಲಿ ಕ್ರಮಶ: ಮಾಯವಾಯಿತು.

ಐವನೊವ ರುಬಷೊವನ ಮಂಚದ ಅಂಚಿನಲ್ಲಿ ಕೂತು ಪಾತ್ರೆಗೆ ಬ್ರಾಂಡಿ ಎರೆದು 'ಕುಡಿ' ಎಂದನು. ರುಬಷೊವ ಪಾತ್ರೆ ಬರಿದುಮಾಡಿ ದನು. ತಲೆಯಲ್ಲಿ ಸುತ್ತುತ್ತಿದ್ದ ಮಂಜು ಕರಗಿತು. ಮೊದಲ ಸೆರೆ, ಎರಡ ನೆಯ ಸೆರೆ, ಅರ್ಲೋವಾ, ಬೊಗ್ರೋವ, ಐವನೊವ ಎಲ್ಲರೂ ಅವರವರ ಕಾಲ ದೇಶಗಳಿಗೆ ಹೊಂದಿಕೊಂಡು ಆಯಾ ಸ್ಥಾನದಲ್ಲಿ ನಿಂತರು.

'ಭಾರೀ ನೋವಾಗುತ್ತಿದೆಯೆ?' ಎಂದು ಐವನೊವ ಕೇಳಿದನು.

'ಇಲ್ಲ' ಎಂದನು ರುಬಷೊವ. ಆದರೆ ಐವನೊವಗೆ ಈ ಕೋಣೆಯಲ್ಲೇನು ಕೆಲಸ ಎಂಬ ಗೂಢವನ್ನು ಆತನ ಮನಸ್ಸು ಭೇದಿಸಲಾರದೆ ಹೋಯಿತು.

'ನಿನ್ನ ಗಲ್ಲ ಬಾತುಹೋಗಿದೆ. ಬಹುಶಃ ಜ್ವರವೂ ಇರಬೇಕು.'

ರುಬಷೊವ ಮಂಚದಿಂದೆದ್ದು, ಬಾಗಿಲ ತೂತಿನಿಂದ ಹೊರಗೆ ಒಮ್ಮೆ ದೃಷ್ಟಿ ಹಾಯಿಸಿ, ತಲೆಯ ಮಂಜು ಸಂಪೂರ್ಣವಾಗಿ ಕರಗುವ ವರೆಗೆ ಒಂದೆರಡು ಸಲ ಕೋಣೆಯಲ್ಲಿ ಸಂಚಾರಮಾಡಿದನು. ಆ ಮೇಲೆ ಹೊಗೆ ಸುರುಳಿಯನ್ನು ಬಿಡುತ್ತ ಮಂಚದಂಚಿನಲ್ಲಿ ಕೂತಿದ್ದ ಐವನೊವನ ಸಮ್ಮುಖಕ್ಕೆ ಬಂದು 'ನಿನಗಿಲ್ಲೇನು ಕೆಲಸ?' ಎಂದು ಕೇಳಿದನು.

'ನಿನ್ನ ಹತ್ತಿರ ಮಾತನಾಡುವುದಿದೆ. ಮಲಗಿಕೋ. ಇನ್ನೊಮ್ಮೆ ಬ್ರಾಂಡಿ ಕುಡಿ'.

ರುಬಷೊವ ಐವನೋವನ ಕಡೆ ವ್ಯಂಗ್ಯ ದೃಷ್ಟಿಯನ್ನು ಬೀರಿ 'ಇದುವರೆಗೂ ನೀನು ಸಹಜವಾಗಿ, ವಿಶ್ವಾಸಪೂರ್ವಕವಾಗಿ ವರ್ತಿಸುತ್ತಿದ್ದೀ ಎಂದು ನಾನು ಭಾವಿಸುತ್ತಿದ್ದೆ. ಈಗ ನೋಡಿದರೆ ನೀನೊಂದು ಹಂದಿಯಾಗಿರುವಿ. ಇಲ್ಲಿಂದ ತೊಲಗು' ಎಂದನು.

ಐವನೊವ ಚಲಿಸಲಿಲ್ಲ. 'ನೀನು ಈಗ ಹೇಳಿದ ಮಾತುಗಳಿಗೆ ಕಾರಣಕೊಡು ನೋಡುವ' ಎಂದನು.

ರುಬಷೊವ ೪೦೬ನೆಯ ಕೋಣೆಯ ಗೋಡೆಗೆ ಒರಗಿ ಐವನೊವನ ಕಡೆಗೆ ನೋಡಿದನು. ಐವನೊವ ಸ್ವಸ್ಥಚಿತ್ತದಿಂದ ಸಿಗರೇಟು ಸೇದುತ್ತಿದ್ದನು.

ರುಬಷೊವ ನುಡಿದನು. 'ಒಂದನೆಯ ಕಾರಣ ಹೇಳಲಿ?– ಬೊಗ್ರೊವನಿಗೆ ನಾನು ಸ್ನೇಹಿತನೆಂಬುದು ನಿನಗೆ ಗೊತ್ತಿದೆ. ಗೊತ್ತಿದ್ದೇ ಬೊಗ್ರೊವನನ್ನು ಅಥವಾ ಅವನ ಅಳಿದುಳಿದ ಜೀವಶೇಷವನ್ನು ನನ್ನ ಕಣ್ಣುಮುಂದೆಯೇ, ನನಗೆ ಎಚ್ಚರಿಕೆಯ ರೂಪದಲ್ಲಿ, ಅಂತಿಮ ಪ್ರಯಾಣಕ್ಕೆ ಎಳೆದುಕೊಂಡು ಹೋಗುವ ಏರ್ಪಾಡು ಮಾಡಿದಿ. ಈ ದೃಶ್ಯವು ನನ್ನ ಕಣ್ಣಿಗೆ ಬೀಳಲೇ ಬೇಕೆಂಬ ಇರಾದೆಯಿಂದ ಬೊಗ್ರೊವನ ಕೊನೆಗಾಲವನ್ನು ಮೊದಲೇ ಹೇಳಿಬಿಟ್ಟು ಕೈದಿಗಳು ನನಗೆ ಸುದ್ದಿ ಮುಟ್ಟಿಸುವ

ಹಾಗೂ ನೋಡಿಕೊಂಡಿ. ಜೊಗ್ರೊವನನ್ನು ಹೊರಗೆಳೆದು ತರುವುದಕ್ಕೆ ಮೊದಲು ನಾನಿಲ್ಲಿರುವ ವಿಷಯವನ್ನು ಅವನಿಗೆ ತಿಳಿಸಿ ಅವನ ಪ್ರತಿಕ್ರಿಯೆ ಏನೆಂದು ನೋಡುವ ಹಂಚಿಕೆಯು ನೀನು ದಿಗ್ದರ್ಶಿಸಿದ ಈ ನಾಟಕದ ಒಂದು ಅತ್ಯಂತ ಕುಶಲಕರ್ಮವೆಂದು ನನಗನಿಸುತ್ತಿದೆ. ನೀನು ಭಾವಿಸಿದ ಪ್ರತಿಕ್ರಿಯೆಯೇ ಜೊಗ್ರೊವನ ಬಾಯಿಯಿಂದ ಹೊರಟದ್ದನ್ನು ಕೇಳಿ ನಿನಗೆ ಆನಂದವಾಯಿತೆ? ನನ್ನ ಮನಃಸ್ಥಿತಿಯು ಸಂಪೂರ್ಣವಾಗಿ ಕೆಡಬೇಕೆಂದು ತಾನೇ ಇದೆಲ್ಲ ನಾಟಕ? ಆ ಮೇಲೆ ಬ್ರಾಂಡಿಯನ್ನು ಹಿಡಿದುಕೊಂಡು ಅವತಾರ ಪುರುಷರಂತೆ ಸರ್ವೋದ್ಧಾರಕ ಐವನೊವ ರುಬಷೊವನ ಕೊಠಡಿಗೆ ಆಗಮಿಸಿದರೆ ಹೇಗಿರುತ್ತದೆ? ಅವರಿಬ್ಬ ರೊಳಗೆ ಸಂಧಾನವಾಗುವ ಮರ್ಮಸ್ಪರ್ಶಿ ದೃಶ್ಯದಲ್ಲಿ ಅವರು ಪರಸ್ಪರ ಆಲಿಂಗನಮಾಡಿಕೊಳ್ಳುವರೆಂದೂ, ಯುದ್ಧದ ರಸನಿಮಿಷಗಳನ್ನು ಸ್ವಾರಸ್ಯವಾಗಿ ಚರ್ಚಿಸುತ್ತ ಏತನ್ಮಧ್ಯೆ ಐವನೊವ ತಂದ 'ರುಬಷೊವ ಹೇಳಿಕೆ'ಗೆ ನಾನು ಸಹಿಮಾಡುವೆನೆಂದೂ ನೀನು ಬಗೆದಿರುವಿ ಯಲ್ಲವೆ? ಸಹಿಮಾಡಿದ್ದೊಂದಾದರೆ ಕೈದಿಯು ನಿದ್ರೆ ಹೋಗುವನು. ಕಾಮ್ರೇಡ ಐವನೊವ ಹೇಳಿಕೆಯನ್ನು ಜೇಬಿನೊಳಗಿಟ್ಟುಕೊಂಡು ತುದಿಗಾಲಲ್ಲಿ ಹೊರನಡೆದು, ಕೆಲವೇ ದಿನಗಳಲ್ಲಿ ಮೇಲಧಿಕಾರಿಸ್ಥಾನಕ್ಕೆ ಬಡಾವಣೆ ಪಡೆಯುವನಲ್ಲವೆ?........ದಯಮಾಡಿ ಇಲ್ಲಿಂದ ಹೊರಗೆ ಹೋಗು.'

ಐವನೊವ ಚಲಿಸಲಿಲ್ಲ: ಹೊಗೆಯನ್ನು ಗಾಳಿಗೆ ಬಿಡುತ್ತಾ, ಚಿನ್ನದ ಹಲ್ಲು ತೋರುವಂತೆ ಮುಗುಳ್ನಕ್ಕು 'ನನ್ನ ಬುದ್ಧಿ ಇಷ್ಟು ಅನಾಗರಿಕ ವೆಂದು ಭಾವಿಸಿದಿಯಾ? ಅಥವಾ ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಮನಃಶಾಸ್ತ್ರದಲ್ಲಿ ನಾನಷ್ಟು ದಡ್ಡನೆಂದು ನಿನ್ನ ಎಣಿಕೆಯೋ?' ಎಂದು ಕೇಳಿದನು.

ರುಬಷೊವ ಭುಜವನ್ನೊ ಹಾರಿಸಿ 'ನಿನ್ನ ಉಪಾಯಗಳನ್ನು ನೋಡಿದರೆ ನನಗೆ ಜಿಗುಪ್ಸೆ ಬರುತ್ತದೆ. ನಾನು ನಿನ್ನನ್ನು ಹೊರ ದೂಡುವಂತೆ ಇಲ್ಲ. ನಿನ್ನಲ್ಲಿ ತುಸುವಾದರೂ ಸಭ್ಯತೆ ಇರುವ ಪಕ್ಷದಲ್ಲಿ,

ನೀನು ಇನ್ನಾದರೂ ನನ್ನನ್ನು ಸುಮ್ಮಗಿರಗೊಟ್ಟು ಇಲ್ಲಿಂದ ಹೊರಡುತ್ತೀ. ನಿಮ್ಮ ಮೇಲೆ ನನಗೆಷ್ಟು ಹೇವವೆಂದು ನೀನು ತಿಳಿ' ಎಂದನು.

ಐವನೊವ ಗಾಜಿನ ಪಾತ್ರೆಯನ್ನು ನೆಲದಿಂದ ಮೇಲಕ್ಕೆತ್ತಿ ಅದರಲ್ಲಿ ಬ್ರಾಂಡಿ ತುಂಬಿಸಿ ಕುಡಿದ ಮೇಲೆ 'ನಾನೊಂದು ಒಪ್ಪಂದವನ್ನು ಸೂಚಿಸಲೆ? ನನ್ನನ್ನು ನಡುವೆ ಎಲ್ಲಿಯೂ ನಿಲ್ಲಿಸದೆ ಐದು ನಿಮಿಷ ಮಾತನಾಡಲು ಬಿಟ್ಟು ಸ್ವಸ್ಥಚಿತ್ತದಿಂದ ಹೇಳುವುದನ್ನು ಕೇಳು. ಆ ಮೇಲೂ ನಾನು ಹೋಗಬೇಕೆಂದು ನೀನನ್ನುವುದಾದರೆ ನಾನು ಹೊರಡಲು ಸಿದ್ಧನಾಗುವೆ.'

'ಹಾಂ, ಕೇಳುತ್ತಿದ್ದೇನೆ' ಎಂದು ರುಬಷೊವ ಎದ್ದುನಿಂತು ಐವನೊವನ ಕೈಗಡಿಯಾರವನ್ನೇ ದಿಟ್ಟಿಸತೊಡಗಿದನು.

'ಮೊದಲಾಗಿ ನಿನ್ನ ಮನಸ್ಸಿನಲ್ಲಿ ಸಂದೇಹ ಅಥವಾ ಭ್ರಮೆ ಉಳಿದಿದ್ದರೆ ಅದನ್ನು ನಿರ್ಮೂಲಗೊಳಿಸಲು ಒಂದು ಮಾತು ಹೇಳುತ್ತೇನೆ: ಬೊಗ್ರೊವನನ್ನು ನಿಜವಾಗಿಯೂ ಕೊಂದಾಯಿತು. ಎರಡನೆಯದಾಗಿ, ಬೊಗ್ರೊವ ಈಗ ಹಲವು ತಿಂಗಳಿಂದ ಸೆರೆಮನೆಯಲ್ಲಿ ಕೊಳೆಯುತ್ತಿದ್ದನು. ಕೊನೆಕೊನೆಯಲ್ಲಿ ಅವನಿಗೆ ಹಲಬಗೆಯ ಚಿತ್ರಹಿಂಸೆಯೂ ನಡೆಯಿತು. ನೀನು ಸಾರ್ವಜನಿಕ ವಿಚಾರಣೆಯ ಸಮಯ ಇದರಲ್ಲಿ ಒಂದಕ್ಷರ ಹೇಳಿದರೂ ನಾನು ಸತ್ತೆ. ಬೊಗ್ರೊವನನ್ನು ನಾವು ಹಾಗೇಕೆ ನಡೆಸಿದೆವು ಎನ್ನುವ ವಿಚಾರವನ್ನು ಆ ಮೇಲೆ ಚರ್ಚಿಸೋಣ. ಮೂರನೆಯದಾಗಿ, ಅವನನ್ನು ನಿನ್ನ ಕೋಣೆಯ ಬಳಿಯಿಂದಲೇ ಒಯ್ದುದ್ದು ಮತ್ತು ಅವನಿಗೆ ನಿನ್ನ ಹೆಸರನ್ನು ಹೇಳಿದ್ದು ಎಲ್ಲವೂ ಉದ್ದೇಶಪೂರ್ವಕವೇ. ನಾಲ್ಕನೆಯದಾಗಿ, ಈ ಕೊಳಕು ಉಪಾಯವನ್ನು ಏರ್ಪಡಿಸಿದವನು ನಾನಲ್ಲ; ನನ್ನ ಇಚ್ಛೆಗೆ ವಿರುದ್ಧವಾಗಿ ಗ್ಲೆಟ್‌ಕಿನ್ ಮಾಡಿದ ಕೆಲಸ ಇದು.'

ಐವನೊವ ಸ್ವಲ್ಪ ಹೊತ್ತು ಮಾತು ನಿಲ್ಲಿಸಿದನು. ರುಬಷೊವ ಗೋಡೆಗೆ ಒರಗಿಕೊಂಡೇ ಇದ್ದನು.

'ನಾನಾದರೆ ಇಂಥ ತಪ್ಪನ್ನು ಮಾಡುತ್ತಿರಲಿಲ್ಲ. ನಿನ್ನ ಮನಸ್ಸನ್ನು ನೋಯಿಸಬಾರದು ಎಂಬ ದೃಷ್ಟಿಯಿಂದಲ್ಲ, ನನಗೆ ನಿನ್ನ

ಪರಿಚಯ, ನಿನ್ನ ಮನಸ್ಸಿನ ಪರಿಚಯ, ಸಾಕಷ್ಟಿರುವುದರಿಂದ. ಇತ್ತೀ ಚೆಗೆ ನಿನ್ನಲ್ಲಿ ಮಾನವೀಯ ಸೂಕ್ಷ್ಮ ಭಾವಗಳಿಗೆ ಪ್ರಾಶಸ್ತ್ಯ ಕೊಡುವ ಪ್ರವೃತ್ತಿ ಬೆಳೆಯುವುದನ್ನು ನಾನು ಕಂಡಿದ್ದೇನೆ. ಅಲ್ಲದೆ ಅರ್ಲೋವಾಳ ಕಥೆಯನ್ನು ನೀನು ಮನಸ್ಸಿಗೆ ಹಚ್ಚಿಕೊಂಡಿದ್ದಿ ಎನ್ನುವುದೂ ನನಗೆ ಗೊತ್ತಿದೆ. ಬೊಗ್ರೊವ–ದೃಶ್ಯವು ನಿನ್ನನ್ನು ಮಾನವೀಯತೆ ಮತ್ತು ನೀತಿಯ ಕಡೆಗೆ ಇನ್ನಷ್ಟು ತೀವ್ರವಾಗಿ ಒಲಿಸುವುದು ನಿಶ್ಚಯವಾದು ದರಿಂದ ಮನೋವಿಜ್ಞಾನವನ್ನರಿತ ಯಾರೂ ಗ್ಲೆಟ್‌ಕಿನ್ ಮಾಡಿದ ತಪ್ಪನ್ನು ಮಾಡುತ್ತಿರಲಿಲ್ಲವೆನ್ನುವುದು ನಿರ್ವಿವಾದ. ಈಗ ಹತ್ತು ದಿವಸ ಗಳಿಂದ ನಿನ್ನ ಮೇಲೆ 'ಕಠಿನೋಪಾಯ'ಗಳನ್ನು ಪ್ರಯೋಗಿಸಿ ನೋಡ ಬೇಕೆಂದು ನನಗೆ ಮೇಲಿಂದ ಮೇಲೆ ಉಪದೇಶಿಸುತ್ತಿದ್ದಾನೆ. ನೀನು ಅವನಿಗೆ ಕಾಲು ಚೀಲದ ತೂತನ್ನು ತೋರಿಸಿದ್ದರಿಂದ ಅವನಿಗೆ ನಿನ್ನನ್ನು ಕಂಡರಾಗುವುದಿಲ್ಲ ಎಂಬುದೊಂದು; ಎರಡನೆಯದು, ಅವನಿಗೆ ಹಳ್ಳಿಯ ರೈತರನ್ನು ತಿದ್ದಿಯೇ ಅಭ್ಯಾಸ........ಬೊಗ್ರೊವ–ಅಧ್ಯಾಯದ ಕುರಿತು ಇಷ್ಟು ವಿವರಗಳು ಸಾಕೆಂದು ತೋರುತ್ತದೆ. ನಾನು ಇಲ್ಲಿ ಬಂದಾಗ ನಿನ್ನ ಬುದ್ಧಿ ನೆಟ್ಟಗಿರಲಿಲ್ಲವೆಂದು ನಾನು ಬ್ರಾಂಡಿ ತರಿಸಿ ಕೊಡಬೇಕಾಯಿತು. ನೀನು ಅಮಲೇರುವಷ್ಟು ಕುಡಿಯುವುದು ನನಗೆ ಅನುಕೂಲವಲ್ಲ. ನಿನ್ನ ಮನಸ್ಸಿಗೆ ತೀವ್ರ ಆಘಾತಗಳನ್ನು ಕೊಟ್ಟು ನಿನ್ನ ನೈತಿಕ ಬಲವು ಇನ್ನಷ್ಟು ಪುಷ್ಟಿಗೊಳ್ಳುವಂತೆ ಮಾಡಬೇಕೆಂದು ನಾನು ಬಯಸೆನು. ನಿನ್ನ ವಿಷಯ ನೀನೇ ಸ್ವಸ್ಥಚಿತ್ತದಿಂದ ಕೂಲಂಕಷ ವಾಗಿ ಚರ್ಚಿಸಬೇಕೆಂದು ನನ್ನ ಆಶಯ. ಸಂಪೂರ್ಣವಾಗಿ, ಕೊನೆತನಕ ಚರ್ಚಿಸಿ ತೀರ್ಮಾನಕ್ಕೆ ಬರದೆ ನೀನು ಶರಣುಬರಲಾರೆ, ಎಂದು ನನಗೆ ಗೊತ್ತಿದೆ........'

ರುಬಷೊವ ಭುಜ ಹಾರಿಸಿದನು. ಅವನು ಮಾತಾಡುವುದಕ್ಕೆ ಮೊದಲೇ ಐವನೊವ, 'ನನಗೆ ಗೊತ್ತು, ಎಂದೆಂದೂ ಶರಣಾಗೆನೆಂದು ನೀನು ನಿರ್ಧರಿಸಿರುವುದು ನನಗೆ ಗೊತ್ತು. ನನಗೆ ನೀನು ಒಂದು ಆಶ್ವಾಸನೆ ಕೊಟ್ಟರೆ ಸಾಕು: ಶರಣುಬರುವುದರ ತಾರ್ಕಿಕ ಅನಿವಾರ್ಯತೆ

ಮತ್ತು ನಿರಪೇಕ್ಷ ಸತ್ಯತೆಯನ್ನು ನೀನೇ ಕಂಡುಕೊಂಡ ಮೇಲಾದರೂ ನೀನು ಶರಣುಬರುವಿಯಲ್ಲವೆ?–ಉತ್ತರ ಕೊಡು' ಎಂದ.

ರುಬಷೊವ ಕೂಡಲೇ ಪ್ರತ್ಯುತ್ತರ ಕೊಡಲಿಲ್ಲ. ಸಂಭಾಷಣೆಯನ್ನು ಇಷ್ಟು ದೂರ ಮುಂದುವರಿಯಲು ಬಿಡಬಾರದೆಂದೆನಿಸಿತು ಅವನಿಗೆ. ಐದು ಮಿನಿಟು ದಾಟಿದರೂ ಐವನೊವನನ್ನು ಆತ ಇನ್ನೂ ಹೊರಗೆ ಕಳಿಸಿರಲಿಲ್ಲ. ಹೊರಕಳಿಸದಿದ್ದರೆ ಬೊಗ್ರೊವ ಮತ್ತು ಅರ್ಲೋವಾ, ರಿಚರ್ಡ ಮತ್ತು ಕುಂಟಲೋವಿ ಇವರಿಗೆಲ್ಲ ದ್ರೋಹ ಬಗೆದಂತೆಯೇ ಸರಿ.

'ಹೊರಟುಹೋಗು. ಪ್ರಯೋಜನವಿಲ್ಲ' ಎಂದು ಹೇಳಿದನು ರುಬಷೊವ. ತನಗೆ ತಿಳಿಯದೆಯೆ ಆತ ಕೋಣೆಯಲ್ಲಿ ಅತ್ತಿಂದಿತ್ತ ತಿರುಗಾಡಹತ್ತಿದನು.

ಐವನೊವ ಮಂಚದ ಮೇಲೆ ಕೂತಿದ್ದವನು ಕದಲಲಿಲ್ಲ. 'ನಿನ್ನ ಸ್ವರವನ್ನು ಕೇಳಿದರೆ ಬೊಗ್ರೊವ ಪ್ರಕರಣದಲ್ಲಿ ನನ್ನ ಕೈಯೇನೂ ಇರಲಿಲ್ಲ ವೆಂದು ನೀನು ನಂಬಿದ ಹಾಗಿದೆ. ಅಂದಮೇಲೆ ನನ್ನನ್ನು ಹೋಗಲು ಯಾಕೆ ಹೇಳುತ್ತೀಯಾ? ನನ್ನ ಪ್ರಶ್ನೆಗೆ ಉತ್ತರ ಕೊಡದೆ ಏತಕ್ಕಿದ್ದೀಯಾ?' ಎಂದು ಐವನೊವ ನುಡಿದು ರುಬಷೊವನ ಕಡೆಗೆ ತುಸು ಬಗ್ಗಿ, ಅಣ ಕಿಸುವ ಸ್ವರದಲ್ಲಿ, ನಿಧಾನವಾಗಿ ಒಂದೊಂದೇ ಪದವನ್ನು ಒತ್ತಿ ಒತ್ತಿ '**ಏತಕ್ಕೆಂದರೆ ನೀನು ನನಗೆ ಹೆದರಿಕೊಂಡಿದ್ದೀ.** ಏತಕ್ಕೆಂದರೆ, ನಾನು ವಿಚಾರಿಸುವ ಮತ್ತು ವಾದಿಸುವ ದಾರಿ ನಿನ್ನದೇ ದಾರಿ; ಆದ್ದರಿಂದ ನಿನ್ನ ಪ್ರತಿಧ್ವನಿಗೆ ನೀನು ಅಂಜಿರುವಿ. ಇನ್ನೊಂದು ಕ್ಷಣ ದಲ್ಲಿ 'ಸೈತಾನನೇ ತೊಲಗು' ಎಂದು ಬೊಬ್ಬಿರಿಯುವಿ; ಎಂದನು.

ರುಬಷೊವ ನಿಸ್ಸಹಾಯತೆಯಿಂದ ಕಿಟಕಿಯ ಬಳಿ ಅತ್ತಿತ್ತ ಹೆಜ್ಜೆ ಹಾಕಿದನು. ಐವನೊವ 'ನೈತಿಕ ಉತ್ಸರ್ಗ'ವೆಂದು ಯಾವ ಭಾವ ವನ್ನು ಕರೆದಿದ್ದನೋ ಅದು ತರ್ಕಕ್ಕೆ ಒಳಪಡುವುದಾಗಿರದೆ 'ವ್ಯಾಕರಣ ಬದ್ಧ ಕಾದಂಬರಿ'ಯ ಪ್ರಪಂಚಕ್ಕೆ ಸೇರಿದುದಾಗಿತ್ತು. ಅಲ್ಲದೆ ಐವನೊವ ಆಡಿದ ಒಂದೊಂದು ಮಾತೂ ರುಬಷೊವನ ಹೃದಯ ಕುಹರದಲ್ಲಿ ಪಡಿದನಿಗುಡುತಿತ್ತು. ನಯವಾದ ಜಾರುಗುಪ್ಪೆಯಲ್ಲಿ ಕೂತು ಜಾರು ತ್ತಿರುವವನಂತೆ ರುಬಷೊವಗೆ ಅನುಭವವಾಗುತಿತ್ತು. ವಾದ–ಪ್ರತಿ

ವಾದದ ಗರ್ತದಲ್ಲಿ ಸಿಲುಕಿಸಿಕೊಂಡುದೇ ತಪ್ಪಾಯಿತೆಂದು ಆತ ಭಾವಿಸಿದನು.

'ಸೈತಾನನಿಗೆ ಜಯವಾಗಲಿ" ಎಂದು ಹೇಳಿ ಐವನೊವ ಇನ್ನೊಂದು ಬಟ್ಟಲು ಬ್ರಾಂಡಿ ಸುರಿದುಕೊಂಡನು. 'ಹಿಂದಿನ ಕಾಲ ದಲ್ಲಿ ಮನುಷ್ಯನನ್ನು ಮೋಹಿಸುವ ಪ್ರಲೋಭನವು ಪಂಚೇಂದ್ರಿಯಗಳ ಮೂಲಕ ಪ್ರಕಟವಾಗುತಿತ್ತು; ಈಗ ಪ್ರಲೋಭನವು ಶುದ್ಧ ತರ್ಕದ ರೂಪದಲ್ಲಿ ಮನುಷ್ಯನನ್ನು ಕಾಡುತ್ತಿದೆ. ಮೌಲ್ಯಗಳು ಬದಲಾಗು ತ್ತಿವೆ. ನಾನೊಂದು ನಾಟಕವನ್ನು ಬರೆಯಬೇಕೆಂದಿದ್ದೇನೆ. ಅದರಲ್ಲಿ ಸಂತ ರುಬಷೊವನ ಆತ್ಮಕ್ಕೋಸ್ಕರ ದೇವರು ಮತ್ತು ಸೈತಾನನು ಜಗಳಾಡುವುದನ್ನು ಚಿತ್ರಿಸುತ್ತೇನೆ. ಪಾಪಮಯ ಜೀವನವನ್ನು ಮುಗಿಸಿ ರುಬಷೊವ ದೇವರ ದಾರಿ ಹಿಡಿದಿದ್ದಾನೆ. ಆ ದೇವರಿಗಾದರೂ ಎರಡು ಮುಖ; ಔದ್ಯಮಿಕ ಉದ್ಧಾರವಾದದ್ದೊಂದು, ಗಂಜಿನೀರು ಕೊಡುವ ದೀನೋದ್ಧಾರ ಸಂಘದ್ದೊಂದು. ಇಂಥ ಇಬ್ಬಾಯ ದೇವರ ವಿರುದ್ಧ ಹೋರಾಡುವ ಸೈತಾನನು ವರ್ಷಗಟ್ಟಲೆ ತಪಸ್ಸು ಮಾಡಿ ದೇಹ ಸವೆಸಿದವರಂತೆ ನೀಟವಾಗಿ, ತೆಳ್ಳಗಾಗಿ ಇರುವನು. ಆತ ತರ್ಕಶಾಸ್ತ್ರದ ಪರಮ ಭಕ್ತ. ಆತ ಓದುವ ಗ್ರಂಥಗಳು—ಮೆಕಿಯ ವೆಲ್ಲಿ, ಇಗ್ನೇಶಿಯಸ್ ಲೊಯೊಲಾ, ಮಾರ್ಕ್ಸ ಮತ್ತು ಹೆಗಲ್. ಮನುಷ್ಯ ರನ್ನು ನೋಡಿದರೆ ಅವನಿಗೆ ಘೃಣೆ, ಹೃದಯಹೀನ ನಿರ್ದಯತೆ. ಅವನು ಯಾವುದನ್ನು ಅತ್ಯಂತ ತಾತ್ಸಾರದಿಂದ ನೋಡುವನೋ ಅದನ್ನೆ ಮಾಡ ಬೇಕಾದ್ದು ಅವನ ವಿಧಿ: ಕೊಲೆಪಾತಕವನ್ನು ನಿಲ್ಲಿಸುವ ಸಲುವಾಗಿ ಆತ ಕೊಲೆಗಾರನಾಗಬೇಕು; ಕುರಿಗಳನ್ನಿನ್ನು ಮೇಲೆ ಯಾರೂ ಬಲಿಕೊಡ ಬಾರದೆಂಬುದನ್ನು ಜಗತ್ತಿಗೆ ಸಾರುವುದರ ಸಲುವಾಗಿ. ಕುರಿಗಳನ್ನು ಬಲಿಕೊಡತಕ್ಕದ್ದು; ಯಾರೂ ಚಬುಕಿನೇಟನ್ನು ತಿನ್ನುವ ಸ್ಥಿತಿಗೆ ಬರಬಾ ರದೆಂಬ ಮಹೋದ್ದೇಶಕ್ಕೋಸ್ಕರವಾಗಿ ಬೆನ್ನಮೇಲೆ ಬಾಸುಂಡೆಬರುವಂತೆ ಏಟು ಬಿಗಿಯಬೇಕಾದ್ದು; ಯಾವುದೋ ಒಂದು ಮಹಾ ಸೂಕ್ಷ್ಮವನ್ನು ಪ್ರತಿಷ್ಠಿಸುವ ಸಲುವಾಗಿ ಕ್ಷುದ್ರ ದಾಕ್ಷಿಣ್ಯ ಭಾವಗಳನ್ನು ವರ್ಜಿಸ ಬೇಕಾದ್ದು ಮಾನವರ ಮೇಲಣ ಪ್ರೇಮದ ಪೆಸರಿಂದ—ಅದೊಂದು

ವಿಚಿತ್ರ ಜ್ಯಾಮಿತೀಯ ಪ್ರೇಮ–ಮನುಷ್ಯ ದ್ವೇಷವನ್ನು ಹೊಡೆದೆಬ್ಬಿಸ ಬೇಕಾದ್ದು–ಅವನ ಮಟ್ಟಿಗೆ ಅನಿವಾರ್ಯವಾಗುತ್ತದೆ. ಸೈತಾನನಿಗೆ ಜಯ ವಾಗಲಿ! ಕಾಮ್ರೇಡ ರುಬಷೊವ ಹುತಾತ್ಮನಾಗುವ ಪ್ರಯತ್ನದಲ್ಲಿದ್ದಾನೆ. ಉದಾರವಾದಿ ಪತ್ರಿಕಾ ಕರ್ತರು ಅವನು ಜೀವಿಸಿದ್ದಾಗ ಅವನನ್ನೆಷ್ಟೇ ಬಯ್ದರೂ ಸತ್ತಮೇಲೆ ಅವನನ್ನು ಶಿರಸಾವಹಿಸುತ್ತಾರೆ. ಅವನು ಆತ್ಮ ಸಾಕ್ಷಿಯನ್ನು ಶೋಧಿಸಿ ತೆಗೆದಿದ್ದಾನೆ; ಆತ್ಮ ಸಾಕ್ಷಿಯು ಕ್ರಾಂತಿಗೆ ಎರಡು ಮುಖಗಳಷ್ಟೇ ಪ್ರತಿಕೂಲವಾದೊಂದು ವಿಷಯ. ಆತ್ಮ ಸಾಕ್ಷಿಯು ಅರ್ಬುದದಂತೆ ಮಿದುಳನ್ನು ತಿನ್ನುವ ಒಂದು ಘನರೋಗ, ಬೂದು ಬಣ್ಣದ ಪದಾರ್ಥವೆಲ್ಲವನ್ನೂ ಅದು ಕೊರೆದು ತಲೆ ಬುರುಡೆ ಟೊಳ್ಳಾಗುವವರೆಗೂ ಬಿಡುವುದಿಲ್ಲ. ನನ್ನ ನಾಟಕದಲ್ಲಿ ಸೈತಾನ ಸೋಲು ತ್ತಾನೆ–ಆದರೆ ಸೋತರೂ ಹಲ್ಲು ಕಟಿಯುವುದಿಲ್ಲ, ಸಿಟ್ಟಿನಿಂದ ಬೆಂಕಿ ಯಾಗುವುದಿಲ್ಲ. ಬದಲು ಭುಜವನ್ನು ತುಸುವೇ ಮೇಲಕ್ಕೆ ಹಾರಿಸು ತ್ತಾನೆ. ಆತ ತಪಸ್ವಿ, ಆತನ ದೇಹ ಬಡಕಲು. ತನ್ನ ಪಕ್ಷವನ್ನು ಎಷ್ಟೋ ಜನ ನಿರ್ವೀರ್ಯರು ಸಕಾರಣವಾಗಿ ತ್ಯಜಿಸಿರುವುದನ್ನು ಆತ ಬಲ್ಲನು....'

ಐವನೊವ ಇನ್ನೊಂದು ಬಟ್ಟಲು ಮದ್ಯವನ್ನು ಕುಡಿದನು. ಅತ್ತಿಂದಿತ್ತ ತಿರುಗುತ್ತಿದ್ದ ರುಬಷೊವ 'ಬೊಗ್ರೊವನನ್ನು ಕೊಂದ ದ್ದೇಕೆ?' ಎಂದು ಕೇಳಿದನು.

'ಏಕೆಂದು ಕೇಳುತ್ತಿಯೋ? ಜಲಾಂತರ್ಗಾಮಿ ನೌಕೆಯ ಸಮಸ್ಯಾ ಪರಿಹಾರಕ್ಕಾಗಿ...........ಜಲಾಂತರ್ಗಾಮಿ ಎಷ್ಟು ಭಾರದ್ದಿರಬೇಕು ಎಂಬ ಚರ್ಚೆ ಬಹಳ ಕಾಲದಿಂದಲೂ ನಡೆಯುತ್ತಿತ್ತೆಂದು ನೀನು ಬಲ್ಲೆಯಷ್ಟೇ. ಅದೇ ಅವನಿಗೆ ಮುಳುವಾಯಿತು.

'ಹೆಚ್ಚು ಭಾರವನ್ನು ಹೊರುವ ಮತ್ತು ದೂರದಿಂದಲೇ ಕಾರ್ಯ ವೆಸಗುವ ಸಬ್‌ಮೆರೀನುಗಳನ್ನು ಕಟ್ಟಬೇಕೆಂಬುದು ಬೊಗ್ರೊವನ ವಾದ. ಹಗುರವಾದ ಮತ್ತು ಸಮೀಪದಿಂದ ಕಾರ್ಯವೆಸಗುವ ಸಬ್ ಮೆರೀನುಗಳನ್ನು ಕಟ್ಟಬೇಕೆಂಬುದು ಪಾರ್ಟಿಯ ವಾದ. ಎರಡು ಪಕ್ಷಗಳೂ ಸಾಕಷ್ಟು ಪ್ರಬಲವಾದ ತಾಂತ್ರಿಕ ಕಾರಣಗಳನ್ನು ಕೊಡಲು ಸಮರ್ಥವಾಗಿದ್ದುವು. ತಜ್ಞರು ಪುಟಗಟ್ಟಲೆ ಬೀಜಗಣಿತದ ಸಮೀಕರಣ

ಗಳನ್ನು ಬರೆದು ತೋರಿಸಿದರು, ಎಷ್ಟೆಷ್ಟೋ ನಕಾಶೆಗಳನ್ನು ಎಳೆದು ತೋರಿಸಿದರು. ಆದರೆ ನಿಜವಾದ ಸಮಸ್ಯೆಯು ಗುಟ್ಟು ಬೇರೆಯೇ ಸ್ಥಳದಲ್ಲಿ ಅಡಗಿದ್ದಿತು. ದೊಡ್ಡ ಜಲಾಂತರ್ಗಾಮಿಗಳನ್ನು ಕಟ್ಟುವ ಅರ್ಥ: ಪರದೇಶಗಳ ಮೇಲೆ ಆಕ್ರಮಣ, ಜಾಗತಿಕ ಕ್ರಾಂತಿ. ಚಿಕ್ಕ ಜಲಾಂತರ್ಗಾಮಿ ಎಂದರೆ: ಕರಾವಳಿಯ ರಕ್ಷಣೆ, ಜಾಗತಿಕ ಕ್ರಾಂತಿಯ ದಿನವನ್ನು ಆದಷ್ಟು ಹಿಂದೂಡುವುದು. ಈ ಎರಡನೆಯ ವಾದವು ಒಂದನೆಯ ನಂಬರಿನವನ ಅಭಿಪ್ರಾಯ, ಅರ್ಥಾತ್ ಪಾರ್ಟಿಯ ಅಭಿಪ್ರಾಯ.

'ಬೊಗ್ರೊವನಿಗೆ ರಾಷ್ಟ್ರೀಯ ನೌಕಾಪಡೆಯ ಕಚೇರಿಯಲ್ಲಿಯೂ, ಹಳೆಯ ನೌಕಾಧಿಕಾರಿಗಳಲ್ಲಿಯೂ ಸಾಕಷ್ಟು ಬೆಂಬಲವಿತ್ತು. ಆದುದರಿಂದ ಅವನನ್ನು ಬರೇ ಸೆರೆಯಲ್ಲಿಟ್ಟು ದೂರಮಾಡಿದರೆ ಕೆಲಸ ಸಾಗದು, ಸಾರ್ವಜನಿಕರ ದೃಷ್ಟಿಯಲ್ಲಿ ಅವಹೇಳನೆಗೆ ಆತ ಗುರಿಯಾಗಬೇಕು. ಭಾರವಾದ ಜಲಾಂತರ್ಗಾಮಿ ಕಟ್ಟಬೇಕೆನ್ನುವವರು ವಿದ್ರೋಹಿಗಳೆಂದೂ, ರಾಷ್ಟ್ರಘಾತಕರೆಂದೂ ಆರೋಪ ಹೊರಿಸುವುದು ಅಗತ್ಯವಾಗಿತ್ತು. ಸಣ್ಣ ಸಣ್ಣ ಎಷ್ಟೊ ತಂತ್ರಜ್ಞರು ನಾವು ಹೇಳಿದ ಹಾಗೆ ಕೇಳಲು ತಯಾರಾಗಿದ್ದರು, ಸಾರ್ವಜನಿಕವಾಗಿ ಯಾವ ಹೇಳಿಕೆಗೂ ತಮ್ಮ ಸಹಿಕೊಡಲು ಸಿದ್ಧರಾಗಿದ್ದರು. ಆದರೆ ಬೊಗ್ರೊವ ಕೊನೆತನಕ ತನ್ನ ಹಠವನ್ನು ಬಿಡಲಿಲ್ಲ. ಕಾಲವೇ ಬದಲಾಗಿರುವುದೆಂದೂ, ಯುರೋಪಖಂಡದಲ್ಲಿ ಪ್ರತಿಗಾಮಿಗಳ ವರ್ಚಸ್ಸು ಪ್ರಬಲವಾಗುತ್ತಿದೆ ಎಂದೂ, ನಾವಿನ್ನೂ ತರಂಗದ ಬುಡದಲ್ಲೇ ಇದ್ದು ಮೇಲಕ್ಕೇರಲು ಇನ್ನೊಂದು ಮಹಾ ತರಂಗವು ಏಳುವತನಕ ಕಾಯಬೇಕೆಂದೂ ಹೇಳಿದರೆ ಆತನಿಗೆ ಅರ್ಥವಾಗುತ್ತಿರಲಿಲ್ಲ. ಸಾರ್ವಜನಿಕ ವಿಚಾರಣೆಯನ್ನೇರ್ಪಡಿಸಿದಲ್ಲಿ ಜನರ ಮನಸ್ಸು ಮತ್ತಷ್ಟು ಗೊಂದಲಕ್ಕೀಡಾಗಬಹುದೆಂದು 'ನಮಗೆ ನಮಗೆ ಖಚಿತವಾದುದರಿಂದ ಅವನನ್ನು ಆಡಳಿತದ ರೀತ್ಯಾ ನಾಶ ಮಾಡದ ಹೊರತು ಬೇರೆ ದಾರಿ ಇರಲಿಲ್ಲ. ನಮ್ಮ ಸ್ಥಳದಲ್ಲಿ ನೀನಿರುತ್ತಿದ್ದರೆ ನೀನೂ ಹೀಗೆಯೇ ಮಾಡುತ್ತಿರಲಿಲ್ಲವೆ?'

ರುಬಷೊವ ಉತ್ತರ ಕೊಡದೆ ೪೦೬ರ ಗೋಡೆಗೊರಗಿ ನಿಂತಿದ್ದನು. ಬಕೇಟಿನಿಂದ ಹೊಲಸು ನಾರುತಿತ್ತು. ಆತ ಕನ್ನಡಕದ ಮೂಲಕ ಐವನೊವನನ್ನು ದಿಟ್ಟಿಸಿ, 'ಅವನ ಬಿಕ್ಕಲು ನರಳಿಕೆಯನ್ನು ನೀನು ಕೇಳಲಿಲ್ಲವೆಂದು ತೋರುತ್ತದೆ' ಎಂದನು.

ಐವನೊವ ಹೊಸದಾಗಿ ಒಂದು ಸಿಗರೇಟನ್ನು ತೆಗೆದು ಹಳೆಯ ತುಂಡಿಗೆ ತಾಗಿಸಿ ಬೆಂಕಿ ಹಚ್ಚಿ ಬಾಯಲ್ಲಿಟ್ಟುಕೊಂಡನು. ಅವನಿಗೂ ಬಕೇಟಿನ ನಾತ ಅಸಹನೀಯವಾಗಿ ಕಂಡಿತು.

'ಇಲ್ಲ, ನನಗೆ ಕೇಳಿಸಲಿಲ್ಲ. ಆದರೇನು. ಅಂಥಾದ್ದೆಷ್ಟೋ ಕೇಳಿದ್ದೇನೆ. ಅದರಲ್ಲೇನಾಯಿತು?'

ರುಬಷೊವ ಮೌನವಾಗಿದ್ದನು. ಅದನ್ನು ವಿವರಿಸಿ ಉಪಯೋಗವಿಲ್ಲ. ಅವನ ಕಿವಿಯೊಳಗೆ ಆ ಬಿಕ್ಕಲಿನ ಜತೆಗೆ ಕೈದಿಗಳ ಸಾಮೂಹಿಕ ಬ್ಯಾಂಡಿನ ಸ್ವರವೂ ಪ್ರತಿಧ್ವನಿಸುತಿತ್ತು. ಅದನ್ನೇನೂ ಮಾತಿನಲ್ಲಿ ಪ್ರಕಟಿಸುವಂತಿಲ್ಲ. ಶಿಖರದಂತೆ ಚಾಚಿರುವ ಚೂಚುಕವುಳ್ಳ ಅರ್ಲೋವಾಳ ಸ್ತನದ ವಕ್ರರೇಖೆಯನ್ನು ಶಬ್ದಗಳಲ್ಲಿ ವರ್ಣಿಸಲಾಗುವುದೇ--- ಅದರಂತೆ. ಹೌದು, ಯಾವುದನ್ನೂ ಆತ ಪ್ರಕಟಿಸಲಾರ. 'ಮೌನವಾಗಿ ಸಾಯಿ' ಎಂದು ಕ್ಷೌರಿಕ ಬರೆದುಕೊಟ್ಟ ಸಂದೇಶ ಸುಳ್ಳಲ್ಲ.

ಐವನೊವ ಮತ್ತೊಮ್ಮೆ 'ಅದರಲ್ಲೇನಾಯಿತು?' ಎಂದನು. ರುಬಷೊವನಿಂದ ಉತ್ತರವಿಲ್ಲದಿರಲು ಆತನೇ ಮಾತು ಮುಂದುವರಿಸಿದನು.

'ನನಗೆ ನಿನ್ನ ಮೇಲೆ ಕರುಣೆಯ ಲವಲೇಶವಾದರೂ ಇರುವುದಾದರೆ ನಾನು ಇಲ್ಲಿಂದ ಈಗಲೇ ಹೊರಡಬೇಕೆಂದು ನಾನು ಬಲ್ಲೆ. ಆದರೆ ನಿನ್ನ ಮೇಲೆ ನನಗೆ ಎಳ್ಳಷ್ಟೂ ಕನಿಕರವಿಲ್ಲ. ನಾನು ಕುಡಿಯುತ್ತೇನೆ; ಸ್ವಲ್ಪ ಕಾಲ ಮಿತಿ ಮೀರಿ ಆರೋಗ್ಯ ಕೆಡುವಷ್ಟು ಕುಡಿಯುತ್ತಿದ್ದುದನ್ನು ನೀನು ಬಲ್ಲೆ; ಆದರೆ ಈ ತನಕ ಕರುಣೆ ಎಂಬ ಎಂಟನೆಯ ವ್ಯಸನವನ್ನು ನಾನು ದೂರವಿಟ್ಟಿದ್ದೇನೆ. ಕರುಣೆಯ ಒಂದು ಗುಟುಕು ಕುಡಿದರೂ ಆ ಮೇಲೆ ಬಿಡುಗಡೆ ಇಲ್ಲ. ಮನುಷ್ಯ ಜಾತಿಗೋಸ್ಕರ ಅಳುವುದು,

ಕುಟ್ಟಿಕೊಂಡು ಅಳುವುದು--ಇದು ಮನುಷ್ಯರಿಗೆ ಅಂಟಿದ ಒಂದು ರೋಗವೆಂದು ನನ್ನ ಭಾವನೆ. ಈ ವಿಷ ಉಂಡೇ ನಮ್ಮ ಮಹಾಕವಿಗಳೆಲ್ಲ ಆತ್ಮಹತ್ಯೆ ಮಾಡಿಕೊಂಡರು. ನಲ್ವತ್ತು ಅಥವಾ ಐವತ್ತು ವರ್ಷಗಳ ವರೆಗೆ ಅವರ ಕ್ರಾಂತಿಯ ಆರ್ಭಟವೇ ಆರ್ಭಟ–ಆ ಮೇಲೆ ಕರುಣೆಯು ಅವರನ್ನು ನುಂಗಿಬಿಡುತ್ತದೆ, ಪ್ರಪಂಚವು ಅವರನ್ನು ಮಹಾತ್ಮರೆಂದು ಅಟ್ಟಕ್ಕೇರಿಸುತ್ತದೆ. ನಿನಗೂ ಈ ಮಹತ್ವಾಕಾಂಕ್ಷೆ ಇರುವ ಹಾಗಿದೆ. ಇದೊಂದು ವೈಯಕ್ತಿಕ ಪ್ರಕ್ರಿಯೆ; ನಿನಗೇ ಮೀಸಲಾದ್ದು, ಅಭೂತ ಪೂರ್ವವಾದ್ದು ಎಂದು ನೀನು ಭಾವಿಸಿದಿ? ಐವನೊವನ ಸ್ವರ ಮೇಲಿ ಮೇಲೇರುತಿತ್ತು. 'ಆನಂದಾತಿರೇಕಕ್ಕೆ ಬಲಿಯಾಗಬೇಡ. ಬ್ರಾಂಡಿ ಬಾಟ್ಲಿಯಲ್ಲಿ ನಿಶ್ಚಿತ ಪ್ರಮಾಣದ ಆನಂದವಿರುತ್ತದೆ. ರಾಸಾಯನಿಕ ವಾಗಿ ಪ್ರಚೋದನೆಗೆ ನೆರವಾಗುವ ಮಾದಕ ಪೇಯಗಳಷ್ಟೇ ವೇದನೆ ಮತ್ತು ಕರುಣೆಯಿಂದ ಉದ್ಭೂತವಾಗುವ ಆನಂದವೂ ಅಗ್ಗವಾಗಿ ದೊರೆಯುವ ಪದಾರ್ಥವೆಂಬುದನ್ನು ತಿಳಿದವರು ದುರದೃಷ್ಟವಶಾತ್ ಕೇವಲ ಕೆಲವೇ ಮಂದಿ. ಕ್ಲೊರೊಫೋರ್ಮಿನಿಂದ ನಾನು ಎಚ್ಚತ್ತು ನನ್ನ ದೇಹವು ಎಡಕಾಲಿನ ಮೊಣಗಂಟಿಗೇ ಮುಗಿಯಿತೆಂದು ನನಗೆ ಅಸಹನೀಯ ವೇದನೆಯಾದಾಗಲೂ ನನಗೆ ಇಂಥದೇ ಒಂದು ಅತಿರೇಕ ದುಃಖಾನುಭವವು ದೊರೆಕೊಂಡಿತ್ತು. ನೀನು ಆಗ ನನಗೆ ಮಾಡಿದ ಉಪದೇಶ ನೆನಪಿದೆಯೆ?' ಎಂದು ಹೇಳಿ ಐವನೊವ ಇನ್ನೊಂದು ಬಟ್ಟಲು ಬ್ರಾಂಡಿ ಹೊಯ್ದುಕೊಂಡನು.

'ನಾನು ಹೇಳುವ ಮುಖ್ಯ ವಿಷಯವಿಷ್ಟೆ: ಈ ಪ್ರಪಂಚವು ನಮ್ಮ ರಾಗ–ಭಾವಗಳು ವಿನೋದಿಸುವ ಅತಿಭೌತಿಕ ವಿಲಾಸವಾಟಿಕೆ ಎಂದು ಯಾರೂ ಭಾವಿಸಬಾರದು. ಇದು ನಮ್ಮ ಪ್ರಥಮ ವೇದವಾಕ್ಯ. ಅನುಕಂಪ, ಅನುತಾಪ, ಆತ್ಮಸಾಕ್ಷಿ, ಜಿಗುಪ್ಸೆ, ವ್ಯಾಕುಲ, ಪಶ್ಚಾತ್ತಾಪ ಮತ್ತು ಪ್ರಾಯಶ್ಚಿತ್ತಗಳು ಅತಿ ಜಘನ್ಯವಾದ ಲೋಲುಪ್ತಿಗೆ ಸಮಾನ ವೆಂದು ನಮ್ಮ ಎಣಿಕೆ. ತಲೆಯನ್ನಡಿಗಿಟ್ಟು ನಮ್ಮ ನಾಭಿಯಿಂದಲೇ ಮೋಹಿತರಾಗಿ, ಕೊರಳನ್ನು ಗ್ಲಟ್‌ಕಿನನ ಗುಂಡಿನ ಬಾಯಿಗೆ ಕೊಡು ವುದು ಸುಲಭದಲ್ಲಿ ಜಾರಿಕೊಳ್ಳುವ ಪರಿಹಾರ ವಿಧಾನವಲ್ಲವೆ? ಒಂಪೆ

ಯನ್ನು ವರ್ಜಿಸುವುದೂ, ಪಶ್ಚಾತ್ತಾಪ ಪಡುವುದೂ, ಅಂತರಾತ್ಮನೊಡ
ನೆ ಸಂಧಿ ಮಾಡಿಕೊಳ್ಳುವುದೂ ನಿಮ್ಮಂಥವರಿಗೆ ಇದಿರಾಗುವ ದೊಡ್ಡ
ಪ್ರಲೋಭನವೆಂದು ನನ್ನ ಮತ. ಸ್ಪಾರ್ಟಕಸ್‌ನಿಂದ ಹಿಡಿದು ಫ್ರೆಂಚರ
ಡಾಂಟನ್‌ವರೆಗೂ, ಅಲ್ಲಿಂದ ಡಾಸ್ಟೊವಸ್ಕಿಯುವರೆಗೂ ಎಲ್ಲ ಮಹಾನ್
ಕ್ರಾಂತಿಕಾರರು ಈ ಪ್ರಲೋಭನಕ್ಕೆ ತುತ್ತಾದವರೇ.ಕ್ರಾಂತಿಗೆ ದ್ರೋಹ
ಬಗೆದ ಮಹಾ ನಿದರ್ಶನಬೇಕೆಂದರೆ ಇವರನ್ನು ಸ್ಮರಿಸಬೇಕು. ದೇವರ
ಪ್ರಲೋಭನವು ಸೈತಾನನ ಪ್ರಲೋಭನಕ್ಕಿಂತ ಅಪಾಯಕರವೆಂದು
ಮಾನವ ಕೋಟಿಯ ಇತಿಹಾಸ ಹೇಳುತ್ತದೆ.ಜಗತ್ತು ಗೊಂದಲದ ಪ್ರಭು
ತ್ವದಲ್ಲಿರುವವರೆಗೆ ದೇವರಿಗಿಲ್ಲಿ ಸ್ಥಾನವಿಲ್ಲ; ಆತ್ಮ ಸಾಕ್ಷಿಯ ಹತ್ತಿರ
ಒಡಂಬಡಿಕೆಮಾಡಿಕೊಳ್ಳುವುದೆಂದರೆ ಅದು ಹೇಯವಾದ ಪಾಪ. ನಿನ್ನ
ಅಭಿಶಪ್ತ ಅಂತಾರಾತ್ಮನು ಬಾಯಿ ತೆರೆದನೆಂದರೆ ಕಿವಿಯನ್ನು ಗಟ್ಟಿಯಾಗಿ
ಎರಡು ಕೈಗಳಿಂದಲೂ ಮುಚ್ಚಿಕೊಳ್ಳು....' ಇಷ್ಟು ಹೇಳಿ ಐವನೊವ ಹಿಂದು
ಗಡೆಯ ಬ್ರಾಂಡಿ ಬಾಟ್ಲಿಯನ್ನೆತ್ತಿಕೊಂಡು ಇನ್ನೊಂದು ಬಟ್ಟಲನ್ನು
ಸುರುವಿಕೊಂಡನು. ಅರ್ಧ ಬಾಟ್ಲಿ ಮುಗಿದುದನ್ನು ರುಬಷೊವ ಗಮನಿ
ಸಿದನು. ಇವನಿಗೂ ಯಾರಾದರೂ ಸಮಾಧಾನ ಹೇಳುವವರಿದ್ದರೆ
ಆದೀತು ಎಂದು ರುಬಷೊವ ತನ್ನಷ್ಟಕ್ಕೆ ಯೋಚಿಸಿದನು.

'ನೀರೋ' ಫೂಶೇ ಅಂಥವರು ಇತಿಹಾಸದ ಮಹಾಪರಾಧಿಗಳೆನ್ನು
ವುದು ತಪ್ಪು, ನಿಜವಾಗಿನೋಡಿದರೆ ಗಾಂಧಿ, ಟಾಲ್‌ಸ್ಟಾಯ್ ಅಂಥವರು
ಅಪರಾಧಿಗಳು. ಬ್ರಿಟಿಷ್ ಗುಂಡುಗಳಿಗಿಂತಲೂ ಭಾರತೀಯ ಸ್ವಾತಂ
ತ್ರ್ಯಕ್ಕೆ ಗಾಂಧಿಯ ಅಂತರ್ವಾಣಿಯು ದೊಡ್ಡ ವಿಘ್ನವಾಗಿದೆ. ನಮ್ಮನ್ನು
ನಾವು ಮೂವತ್ತು ರೂಪಾಯಿಗೆ ಮಾರಿಕೊಂಡರೆ ಅದನ್ನು ಪ್ರಾಮಾಣಿಕ
ವ್ಯಾಪಾರವೆನ್ನಬಹುದು, ನಮ್ಮ ಆತ್ಮ ಸಾಕ್ಷಿಗೆ ನಮ್ಮನ್ನು ಮಾರಿಕೊಳ್ಳು
ವುದೆಂದರೆ ಮಾನವ ಕುಲವನ್ನೇ ಕೈಬಿಟ್ಟಹಾಗೆ. ಇತಿಹಾಸವು ನೀತಿಪರವೂ
ಅಲ್ಲ, ಅನೀತಿಪರವೂ ಅಲ್ಲ; ಅದಕ್ಕೂ ನೀತಿಗೂ ಸಂಬಂಧವೇ ಇಲ್ಲ,
ಅದಕ್ಕೆ ಆತ್ಮಸಾಕ್ಷಿಯೆಂಬುದಿಲ್ಲ. ಇತಿಹಾಸವನ್ನು ಧರ್ಮಸೂತ್ರಗಳಿ
ಗನುಸಾರವಾಗಿ ನಡೆಯಿಸುತ್ತೇವೆನ್ನುವದು ಹಾಗೇ ಇದ್ದುದು ಹಾಗೇ
ಇರಲಿ ಎನ್ನುವ ಅಪ್ರಾಗತಿಕ ಧೋರಣೆ ಎಂದು ನನ್ನಷ್ಟೇ ನೀನೂ ತಿಳಿದಿ

ದುವಿ. ಈ ಆಟದಲ್ಲಿ ನಿರ್ಣಯವಾಗತಕ್ಕ ಮಹತ್ವದ ಪಂಥವೇನೆಂದು ತಿಳಿದೂ ತಿಳಿದು ಜೊಗ್ರೊವನ ಬಿಕ್ಕಲನ್ನು ಎತ್ತಿ ಹಿಡಿಯುತ್ತಿಯಾ........ ಹೀಗೆಂದು ಕೈಯ ಬಟ್ಟಲನ್ನು ಬರಿದುಮಾಡಿ,–ದಪ್ಪವಾದ ಅಲ್ಯೋ‍ನವಾಳಿ ಗೋಸ್ಕರ ನಿನ್ನ ಅಂತರಾತ್ಮವನ್ನು ಮಿಡಿಸುತ್ತಿಯಾ.' ಎಂದನು.

ಐವನೊವಗೆ ಅಷ್ಟು ಕುಡಿದರೂ ಸಾಲದೆಂದು ರುಬಷೊವಗೆ ಮೊದಲೇ ಗೊತ್ತಿತ್ತು; ಎಷ್ಟು ಕುಡಿದರೂ ಐವನೊವ ಮತ್ತನಾಗಲಿಲ್ಲ, ಮಾತಿನ ಸ್ವರದಲ್ಲಿ ಸ್ವಲ್ಪ ಹೆಚ್ಚಾಗಿ ಭಾರಬೀಳುತಿತ್ತೋ ಏನೋ, ಅಷ್ಟೇ ವ್ಯತ್ಯಾಸ. 'ನನಗಿಂತ ನಿನಗೇ ಸಮಾಧಾನ ಹೇಳಬೇಕು' ಎಂದುಕೊಂಡ ರುಬಷೊವ ಸ್ವಗತವಾಗಿ. ಐವನೊವನ ಇದಿರುಗಡೆಯ ಚಿಕ್ಕ ಸ್ಟೂಲಿನ ಮೇಲೆ ಕುಳಿತು ಅವನು ಐವನೊವನ ಮಾತುಗಳನ್ನಾಲಿಸಿದನು. ಅದರಲ್ಲಿ ಯಾವುದೂ ಹೊಸದೆನಿಸಲಿಲ್ಲ. ಅದೇ ವಾದವನ್ನು ಅದೇ ಪದಗಳಲ್ಲಿ ಅದೆಷ್ಟೋ ಸಲ ರುಬಷೊವನೇ ಹಲಗಾಲ ಯೋಚಿಸಿದ್ದುಂಟು, ಇತರ ರಿಗೆ ಹೇಳಿದ್ದುಂಟು. ಆದರೆ ಒಂದೇ ಒಂದು ವ್ಯತ್ಯಾಸ–ಇಂದಿಗೂ ಅಂದಿಗೂ: ಐವನೊವ ಅತ್ಯಂತ ತಿರಸ್ಕಾರದ ದನಿಯಲ್ಲಿ ಸೂಚಿಸಿದ್ದ ಆ ಅಂತರ್ವಾಣಿ ಅಥವಾ ಆತ್ಮಸಾಕ್ಷಿಯು ಯಥಾರ್ಥವಾಗಿ ಇರಲಿಲ್ಲವೆಂದು ಅವನ ಆಗಿನ ನಂಬಿಕೆಯಾಗಿತ್ತು. ಇಂದಾದರೆ ಹಾಗಲ್ಲ. ವ್ಯಾಕರಣಬದ್ಧ ಕಾದಂ ಬರಿಯು ಅವನ ಶಾರೀರಿಕ ವಾಸ್ತವತೆಯ ಒಂದಂಶವಾಗಿತ್ತು. ತನಗೆ ವೈಯಕ್ತಿಕವಾಗಿ ಪರಿಚಯವಾದ ದೆಸೆಯಿಂದಲೇ ಈ ಅವೈಚಾರಿಕ ಪ್ರಕ್ರಿಯೆಗಳ ಸತ್ಯತೆಯು ಅವನಿಗೀಗ ಗೋಚರವಾಗುತ್ತಿರಬಹುದೆ? 'ನಿಗೂಢವಾದ ಈ ಅಮಲನ್ನು' ಅನುಭವಿಸಿದ ಮಾತ್ರಕ್ಕೆ ಅದರೊಡನೆ ಹೋರಾಡ ಬಾರದೆಂದಿದೆಯೆ? ಒಂದು ವರ್ಷದ ಕೆಳಗೆ ಅಲ್ಯೋ‍ನವಾಳನ್ನು ಮರಣದ ಸಂದರ್ಶನೆಗೆ ಕಳಿಸಿದಾಗ ರುಬಷೊವ ಮರಣದ ವಿವರಗಳ ಕಲ್ಪನೆಯನ್ನು ಮಾಡಿರಲಿಲ್ಲ. ಮರಣದ ವಿಷಯ ಕೆಲವು ವಿವರಗಳನ್ನು ಈಗ ಅರಿತಮಾತ್ರಕ್ಕೆ ಆತ ಬೇರೆ ವಿಧವಾಗಿ ವರ್ತಿಸಬೇಕೆಂಬ ಕಡ್ಡಾಯ ವಿದೆಯೆ? ರಿಚರ್ಡ, ಅಲ್ಯೋ‍ನವಾ ಮತ್ತು ಕುಂಟ ಲೋವಿಯ ಬಲಿ ಒಂದೋ ಸರಿ, ಅಥವಾ ತಪ್ಪು–ಎರಡರಲ್ಲೊಂದು. ಆದರೆ ರಿಚರ್ಡನ ಉಗ್ಗಲಿಗೂ ಅಲ್ಯೋ‍ನವಾಳ ಸ್ತನದ ಆಕಾರಕ್ಕೂ. ಜೊಗ್ರೊವನ

ಬಿಕ್ಕಲಿಗೂ ಮತ್ತು ನಿರಪೇಕ್ಷ ಸತ್ಯ ಅಥವಾ ಅಸತ್ಯಕ್ಕೂ ಏತರ ಸಂಬಂಧ?

ರುಬಷೊವ ಮರಳಿ ಕೋಣೆಯನ್ನು ಸುತ್ತಲಾರಂಭಿಸದನು. ಸೆರೆಮನೆಗೆ ಸೇರಿದಂದಿನಿಂದ ಈ ವರೆಗೆ ತಾನು ಅನುಭವಿಸಿದ್ದೆಲ್ಲ ಕೇವಲ ಉಪೋದ್ಘಾತವೆಂಬುದಾಗಿಯೂ, ತಲೆಯೊಳಗಿನ ವಿಚಾರ ಮಂಥನವು 'ಅತಿಭೌತಿಕ ವಿಲಾಸ ವಾಟಿಕೆ'ಯ ಹೊಸಲಿಗೇ ಅವನನ್ನು ತಂದುಬಿಟ್ಟದ್ದರಿಂದ ಇನ್ನೊಮ್ಮೆ ಮೊದಲಿಂದ ಎಲ್ಲವನ್ನೂ ತೊಡಗ ಬೇಕಾದ ಪ್ರಮೇಯವಿರುವುದನ್ನೂ ರುಬಷೊವ ಗಮನಿಸಿದನು. ಐವನೊವನ ಕೈಯ ಮದ್ಯದ ಬಟ್ಟಲನ್ನು ಕಸಿದುಕೊಂಡು ತನ್ನ ಗಂಟಲಿಗೆ ಸುರಿದುಕೊಂಡನು. ಐವನೊವ ನೋಡುತ್ತಲೇ ಇದ್ದನು.

'ಇದಾದರೆ ಯೋಗ್ಯ'ವೆಂದು ನಸುನಕ್ಕು, ಸಂಭಾಷಣೆಯ ರೂಪ ದಲ್ಲೇ ಇರುವ ಸ್ವಗತವು ಒಳ್ಳೆಯ ಒಂದು ಶೋಧನೆ. ನನ್ನ ಪಾತ್ರ ವನ್ನು ನಾನು ಚೆನ್ನಾಗಿ ಮಾಡಿದೆನಲ್ಲವೆ? ವಿರೋಧಿ ಪಕ್ಷವು ಇಲ್ಲದೆ ಹೋಯಿತಲ್ಲಾ ಎಂದು ನನಗೆ ಕೊರಗು. ಶುದ್ಧ ವೈಚಾರಿಕ ತರ್ಕ ವನ್ನು ತಪ್ಪಿಸಿಕೊಳ್ಳುವುದು ಅದರ ಸ್ವಭಾವವೆನ್ನುವುದು ಸುಳ್ಳಲ್ಲ. ಆದರೆ ಪ್ರಲೋಭನದ ಉಪಾಯವೇ ಇದು: ಒಬ್ಬನೇ ಇರುವಾಗ, ಮೈಮರೆತಾಗ, ಮುಳ್ಳಿನ ಮರೆಯಲ್ಲೋ ಬೆಟ್ಟದ ನೆತ್ತಿಯಲ್ಲೋ ವಿಹರಿಸುತ್ತಿರುವಾಗ, ನಿದ್ರಿಸುವಾಗ ದಾಳಿಮಾಡುವುದು. ನೀತಿವಾದಿ ಗಳ ರೀತಿಯೇ ಅನ್ಯಾಯದ್ದು, ನಾಟಕೀಯವಾದುದು........'

ರುಬಷೊವ ಈ ಮಾತುಗಳಿಗೆ ಕಿವಿಗೊಡುತ್ತಿರಲಿಲ್ಲ. ಆಚೆ ಯಿಂದೀಚೆ ಈಚೆಯಿಂದಾಚೆ ಕಾಲು ಹಾಕುತ್ತಾ ಇಂದು ಅರ್ಲೋವಾ ಜೀವಿಸಿದ್ದರೆ ತಾನಾಕೆಯನ್ನು ಬಲಿಕೊಡುತ್ತಿದ್ದೆನೋ ಹೇಗೆಂಬುವನ್ನು ವಿಮರ್ಶಿಸುತ್ತಿದ್ದನು. ಈ ಒಂದು ಸಮಸ್ಯೆಯು ಬಗೆಹರಿದರೆ ಎಲ್ಲ ಪ್ರಶ್ನೆಗಳಿಗೂ ಉತ್ತರ ದೊರೆಯುವುದೆಂದು ಅವನಿಗೆ ಗೊತ್ತು. ಐವ ನೊವನ ಇದಿರು ನಿಂತು, "ನಿನಗೆ 'ರಾಸ್ಕೊಲ್ ನಿಕೊವನ' ನೆನ ಸಿದೆಯೆ?" ಎಂದು ಕೇಳಿದನು.

ಐವನೊವ ವ್ಯಂಗ್ಯವಾಗಿ ನಕ್ಕು 'ನೀನು ಆ ವಿಷಯಕ್ಕೆ ಬಂದೇ ಬರುವಿಯೆಂದು ನನಗೆ ಗೊತ್ತು. **'ಪಾಪ ಮತ್ತು ಪ್ರಾಯಶ್ಚಿತ್ತ'** ........ನೀನೊಂದು ದೊಡ್ಡ ಮಗು ಅಥವಾ ನಿನ್ನ ಬುದ್ಧಿ ವಯಸ್ಸಾದಂತೆ ಹಿಂದೆ ಸರಿಯುತ್ತಿದೆ.'

'ತಡೆ, ಸ್ವಲ್ಪ ತಡೆ' ಎಂದು ರುಬಷೊವ ಅತ್ಯಂತ ವಿಹ್ವಲನಾಗಿ ನುಡಿದು, 'ನೀನೆಂದುದೆಲ್ಲ ಪೊಳ್ಳು ಮಾತು. ಇದೀಗ ನಾವು ವಿಷಯದ ಹತ್ತಿರ ಹತ್ತಿರ ಬರುತ್ತಿದ್ದೇವೆ. ನನಗೆ ನೆನಪಿರುವ ಮಟ್ಟಿಗೆ ವಿದ್ಯಾರ್ಥಿ ರಾಸ್ಕೊಲ್‌ನಿಕೊವಗೆ ಮುದುಕಿಯನ್ನು ಕೊಲ್ಲುವ ಹಕ್ಕಿತ್ತೇ ಇಲ್ಲವೇ ಎನ್ನುವುದು ಮುಖ್ಯ ಸಮಸ್ಯೆ. ಆತ ತರುಣ, ಪ್ರತಿಭಾವಂತ; ಲೋಕದ ಬದುಕು ಅವನನ್ನು ಕುತೂಹಲದಿಂದ ಅಪೇಕ್ಷಿಸುವಂತಿದೆ; ಆಕೆಯೋ ಮುದುಕಿ, ಜಗತ್ತಿಗೆ ತೀರ ನಿಷ್ಪ್ರಯೋಜಕಳು. ಆದರೆ ಸಮೀಕರಣವು ಸರಿಹೋಗುವುದಿಲ್ಲ ನೋಡು. ಮೊದಲನೆಯದಾಗಿ, ಪರಿಸ್ಥಿತಿಯು ಎರಡನೆಯ ವ್ಯಕ್ತಿಯೊಂವನ್ನು ಅವನ ಕೈಯಿಂದ ಕೊಲೆ ಮಾಡಿಸುತ್ತದೆ; ನೋಟಕ್ಕೆ ಸರಳವಾಗಿಯೂ, ತಾರ್ಕಿಕವಾಗಿಯೂ ಕಾಣುವ ಆಚರಣೆಯು ತರ್ಕವಿರುದ್ಧವೂ, ಅನಿರೀಕ್ಷಿತವೂ ಆದ ಪರಿಣಾಮದಲ್ಲಿ ನಿಲುಗಡೆ ಹೊಂದುವುದೆಂದು ಯಾರು ಭಾವಿಸಿದ್ದರು? ಎರಡನೆಯದಾಗಿ, ಸಮೀಕರಣವು ಹೇಗೂ ಹದಕೆಡುವಂಥಾದ್ದೇ. ಏಕೆಂದರೆ ಮನುಷ್ಯರಮಟ್ಟಿಗೆ ಗಣಿತಶಾಸ್ತ್ರದ 'ಎರಡೆರಡ್ಲಿ ನಾಲ್ಕು' ಸುಳ್ಳೆಂದು ರಾಸ್ಕೊಲ್ ನಿಕೊವನೇ ಕಂಡುಕೊಳ್ಳುತ್ತಾನೆ....' ಎಂದನು.

'ಓಹೋ, ಹಾಗೋ' ಎಂದು ಐವನೊವ ಉದ್ಗಾರವೆತ್ತಿ, 'ನನ್ನ ಅಭಿಪ್ರಾಯವನ್ನು ಕೇಳುತ್ತೀಯಾ? ಡಾಸ್ಟೊವಸ್ಕಿಯ ಈ ಕಾದಂಬರಿಯ ಎಲ್ಲಾ ಪ್ರತಿಗಳನ್ನೂ ಸುಟ್ಟುಹಾಕಬೇಕು. ಈ ರೀತಿಯ ಮಾನವದರ್ಶನ ಮತ್ತು ಮಡ್ಡ ತತ್ವಜ್ಞಾನವನ್ನು ಅಕ್ಷರಶಃ ಪಾಲಿಸುವವರ, ವ್ಯಕ್ತಿಯು ಪರಮ ಪವಿತ್ರನೆಂದು ಬಗೆದು ಮನುಷ್ಯರನ್ನು ಗಣಿತ ಸೂತ್ರಗಳ ಮೇಲೆ ನಡೆಸಬೇಕೆನ್ನುವವರ, ಪರಿಣಾಮವೇನಾಗುವುದೆಂದು ಯೋಚಿಸಿದರೆ ಜನರ ಮೂರ್ಖತೆ ಯಾರಿಗೂ ಹೊಳೆದೀತು. ಇತಿ ಸ್ವಸ್ವವನ್ನೀಸುವವರ

ಸಲುವಾಗಿಯೂ ಕೆಲವರನ್ನು ಬಲಿಕೊಡಬಾರದೆಂದು ಇದರರ್ಥವಲ್ಲವೆ? ಜೊಗ್ರೊವನಂಥ ಮೂರ್ಖರನ್ನು ಬಲಿಕೊಡದೆ ಎರಡೇ ಎರಡು ವರ್ಷದಲ್ಲಿ ನಮ್ಮ ಕರಾವಳಿಯ ರೇವುಗಳನ್ನೆಲ್ಲ ಶತ್ರು ಬಾಂಬುಗಳು ಚೂರು ಚೂರು ಮಾಡುವುದನ್ನು ನಾವು ನೋಡುತ್ತಿರಬೇಕೆಂದು ಇದರ ಅಂತರಾರ್ಥ ವಲ್ಲವೆ?........' ಎಂದನು.

ರುಬಶೊವ ಗೋಣಲ್ಲಾಡಿಸಿ, 'ನಿನ್ನ ಉದಾಹರಣೆಗಳೆಲ್ಲ ಅಸಾಮಾನ್ಯ ಪರಿಸ್ಥಿತಿಗೆ ಸಂಬಂಧಪಟ್ಟವು' ಎಂದನು.

ಐವನೊವ ಮುಂದುವರಿಸಿದನು:

'ಉಗಿಬಂಡಿಯ ಶೋಧನೆಯಾದ ಲಾಗಾಯಿತು ಪ್ರಪಂಚವು ಅಸಾಮಾನ್ಯ ಪರಿಸ್ಥಿತಿಯಲ್ಲಿಯೇ ನಡೆದು ಬರುತ್ತಿದೆ; ಯುದ್ಧ ಮತ್ತು ಕ್ರಾಂತಿ ಇವೇ ಅಸಾಮಾನ್ಯ ಪರಿಸ್ಥಿತಿಯ ಸಾಕಾರ ರೂಪಗಳಷ್ಟೆ. ನಿನ್ನ ರಾಸ್ಕೊಲ್ ನಿಕೊವ ಅಂತೂ ಒಬ್ಬ ಹುಚ್ಚ, ಅಪರಾಧಿಯೂ ಹೌದು. ಮುದುಕಿಯನ್ನು ತರ್ಕಬದ್ಧವಾದ ವಿಚಾರದಿಂದ ಅವನು ಕೊಂದನೆಂಬು ದರಿಂದಾಗಿ ಅವನನ್ನು ನಾನು ಹುಚ್ಚನೆನ್ನುವುದಲ್ಲ, ತನಗೋಸ್ಕರ, ವೈಯಕ್ತಿಕ ಹಿತಕ್ಕಾಗಿ ಮಾಡಿದನಲ್ಲಾ ಅದಕ್ಕಾಗಿ. ಒಳ್ಳೆಯ ಗುರಿ ಯನ್ನು ಮುಟ್ಟಲು ಯಾವ ಸಾಧನವನ್ನು ಬಳಸಬಹುದು ಎಂಬ ಸೂತ್ರವೊಂದೇ ರಾಜನೀತಿಯ ಪರಮಾಧಾರ. ಅದನ್ನು ಬಿಟ್ಟು ಉಳಿ ದೆಲ್ಲವೂ ಪೊಳ್ಳು ಹರಟೆ, ಮುಟ್ಟಿದೊಡನೆ ಕರಗುವ ನೊರೆಗುಳ್ಳೆ. ರಾಸ್ಕೊಲ್ ನಿಕೊವ್ ಮುಷ್ಕರದ ನಿಧಿಯನ್ನು ಹೆಚ್ಚಿಸುವುದಕ್ಕೋ, ಒಳಗಿಂದೊಳಗೆ ಮುದ್ರಣಾಲಯವನ್ನು ಕಟ್ಟುವುದಕ್ಕೋ, ಅಂತೂ ಪಾರ್ಟಿಯ ಆದೇಶದ ಮೇರೆಗೆ, ಪಾರ್ಟಿಯ ಹಿತಾರ್ಥವಾಗಿ ಮುದುಕಿ ಯನ್ನು ಕೊಂದಿದ್ದರೆ ಸಮೀಕರಣವು ಸರಿಹೋಗುವುದು. ತಪ್ಪು ದಾರಿ ಹಿಡಿಯಿಸುವ ಸಮಸ್ಯೆಯನ್ನೊಳಗೊಂಡ ಆ ಕಾದಂಬರಿಯನ್ನು ಬರೆಯ ಬೇಕಾದ ಅಗತ್ಯವೇ ಇರುತ್ತಿರಲಿಲ್ಲ; ಬರೆಯದಿದ್ದಲ್ಲಿ ಮಾನವ ಕುಲ ಕ್ಕೇನೂ ನಷ್ಟವೂ ಆಗುತ್ತಿರಲಿಲ್ಲ.'

ರುಬಶೊವ ಉತ್ತರ ಕೊಡದೆ ಇಂದಾಗಿದ್ದರೆ ಅರ್ಲೋವಾಳನ್ನು ಬಲಿಯಾಗಲು ಬಿಡುತ್ತಿದ್ದೆನೇ ಎಂಬ ಸಮಸ್ಯೆಯ ಗುಂಗಿನಲ್ಲಿಯೋ

ಮಗ್ನನಾದನು. ತಾರ್ಕಿಕವಾಗಿ ಐವನೊವ ಹೇಳಿದ್ದೆಲ್ಲ ನಿಜ. ಕಣ್ಣಿಗೆ ಕಾಣಿಸದ ಆ ವಿರೋಧಿ ಯಾವಾಗಲೂ ಬಾಯಿ ಮುಚ್ಚಿಕೊಂಡೇ ಇರುವನು: ಮನಸ್ಸಿನ ವೇದನೆಯಿಂದಲೇ ಅವನ ಅಸ್ತಿತ್ವವು ನಮಗೆ ತಿಳಿಯಬೇಕು. ಈ ರೀತಿ ಮರೆಯಲ್ಲಿ ನಿಂತು ಹೊಡೆಯುವ ದುರ್ಬುದ್ಧಿಯನ್ನು ನೋಡಿದರೆ ಐವನೊವ ಹೇಳಿದ ಹಾಗೆ ಆ ವಿರೋಧಿಯ ವಿಷಯ ಸಂದೇಹ ಬಂದರೂ ಸಹಜವೇ.

ಐವನೊವ ಮುಂದುವರಿಸಿದನು: "ತತ್ವಪ್ರಣಾಲಿಗಳನ್ನು ಒಂದರೊಡನೊಂದು ಕಲಸುಮೇಲೋಗರ ಮಾಡುವುದು ನನಗಂತೂ ಇಷ್ಟವಿಲ್ಲ. ಮನುಷ್ಯ ನೀತಿಯ ಕುರಿತು ಜಗತ್ತಿನ ಮುಂದಿರುವುದು ಎರಡೇ ಎರಡು ವಾದ........ ಒಂದಕ್ಕೊಂದು ತೀವ್ರ ವಿರೋಧವಾದ ಎರಡು ಮತಗಳು. ವ್ಯಕ್ತಿಯು ಪವಿತ್ರ, ಮನುಷ್ಯ ಘಟಕಗಳಿಗೆ ಗಣಿತದ ಸೂತ್ರಗಳನ್ನು ಅನ್ವಯಿಸಬಾರದು ಎನ್ನುವ ಕ್ರೈಸ್ತಪ್ರಣೀತ ಮಾನವವಾದ ಒಂದನೆಯದು. ಎರಡನೆಯದು ಸಾಮೂಹಿಕ ಉದ್ದೇಶಕ್ಕಾಗಿ, ಸಮಷ್ಟಿಯ ಹಿತಕ್ಕಾಗಿ ಎಲ್ಲ ಸಾಧನಗಳನ್ನೂ ಬಳಸಬಹುದು, ಮಾತ್ರವಲ್ಲ ಪ್ರಯೋಗಶಾಲೆಯ ಮೊಲಗಳಂತೆ, ಯಜ್ಞಶಾಲೆಯ ಮೇಕೆಯಂತೆ ವ್ಯಕ್ತಿಯನ್ನು ಸಮಾಜಕ್ಕೋಸ್ಕರ ದಮನಿಸುವುದೂ, ಅವಶ್ಯವಿದ್ದರೆ ಬಲಿಕೊಡುವುದೂ ಸುಸಂಗತವೆಂದು ಬಗೆಯುವ ವಾದ. ವಿತಂಡವಾದಿಗಳೂ, ಕುಯುಕ್ತಿವಾದಿಗಳೂ, ಆರಾಮುವಾದಿಗಳೂ ಇವೆರಡನ್ನು ಬೆರಸಿಬಿಟ್ಟಿದ್ದಾರೆ. ಆದರೆ ವ್ಯವಹಾರದಲ್ಲಿ ಇದು ಅಸಂಭವ, ಅಶಕ್ಯ. ಅಧಿಕಾರ ಮತ್ತು ಜವಾಬ್ದಾರಿಯ ಸ್ಥಾನದಲ್ಲಿ ಯಾರನ್ನಿಟ್ಟರೂ ಸರಿಯೇ ಆಯಕಟ್ಟಿನ ಮತ್ತು ಆಯ್ಕೆಯ ಸಂದರ್ಭವು ಇದಿರಾದಾಗಲೆಲ್ಲ ಅವರು ಎರಡನೆಯ ಮಾರ್ಗವನ್ನೇ ಅನುಸರಿಸಿದ್ದಾರೆ: ಕ್ರೈಸ್ತ ಧರ್ಮವು ರಾಷ್ಟ್ರದ ಧರ್ಮವಾಗಿ ಇಷ್ಟು ಶತಮಾನಗಳು ಸಂದುವಲ್ಲಾ. ಒಂದೇ ಒಂದು ರಾಷ್ಟ್ರವಾದರೂ ಕ್ರೈಸ್ತ ಧರ್ಮವನ್ನು ತನ್ನ ರಾಜಕೀಯ ಧೋರಣೆಯಾಗಿ ಮಾಡಿಕೊಂಡ ನಿದರ್ಶನವನ್ನು ನನಗೆ ತೋರಿಸ ಬಲ್ಲೆಯಾ? ಇಲ್ಲ. ಸಾಧ್ಯವಿಲ್ಲ. ಅನಿವಾರ್ಯ ಸಂದರ್ಭಗಳಲ್ಲಿ—ರಾಜಕೀಯವೇ ಒಂದು ಅನಿವಾರ್ಯ ಸಂದರ್ಭ ಎನ್ನು—ಆಳುವವರು ಯಾವ ಕಾಲದಲ್ಲಿಯೂ ಅಸಾ

ಮಾನ್ಯ ಪರಿಸ್ಥಿತಿ' ಎಂದು ಹೇಳಿ ಸ್ವರಕ್ಷಣೆಗಾಗಿ ದ್ವಿತೀಯ ಮಾರ್ಗವನ್ನೇ ಅನುಸರಿಸಿದ್ದಾರೆ. ರಾಷ್ಟ್ರಗಳೂ, ವರ್ಗಗಳೂ ಹುಟ್ಟಿದಂದಿನಿಂದಲೂ ಸ್ವರಕ್ಷಣೆಯ ಅಗತ್ಯ ಅವುಗಳಿಗೆ ತಪ್ಪಲಿಲ್ಲವೆಂದ ಮೇಲೆ ಶುದ್ಧ ಮಾನವ ವಾದವನ್ನು ಚರಿತಾರ್ಥಗೊಳಿಸುವ ಕಾಲವೇ ಇನ್ನೂ ಬರಲಿಲ್ಲವೆಂದರೆ ಆಶ್ಚರ್ಯವಿಲ್ಲ'.

ರುಬಷೊವ ಕಿಟಿಕಿಯಿಂದ ಹೊರಗೆ ನೋಡಿದನು. ಕರಗಿದ ಹಿಮವು ಮರಳಿ ಹೆಪ್ಪುಗಟ್ಟಿ ಹಳದಿ ಬಣ್ಣವನ್ನು ತಾಳಿ ಕಲ್ಲಿನ ರಾಶಿಯಂತೆ ಗುಪ್ಪೆ ಗುಪ್ಪೆಯಾಗಿ ಬಿದ್ದಿತ್ತು. ದಿಬ್ಬದ ಮೇಲಿನ ಸಿಪಾಯಿ ಗಸ್ತುಹೊಡೆಯು ತ್ತಲೇ ಇದ್ದನು. ಆಕಾಶವು ನಿರಭ್ರವಾಗಿದ್ದರೂ ಚಂದ್ರನು ಕಾಣು ತ್ತಿರಲಿಲ್ಲ; ತೋಫಖಾನೆಯ ಮೇಲ್ಗಡೆ ತಾರಾಪಥವು ಗೋಚರಿಸುತ್ತಿತ್ತು.

ರುಬಷೊವ ಭುಜಹಾರಿಸಿ, 'ಮಾನವವಾದ ಮತ್ತು ರಾಜಕೀಯ, ವ್ಯಕ್ತಿಗೌರವ ಮತ್ತು ಸಮಾಜಕಲ್ಯಾಣ, ಇವು ಒಂದಕ್ಕೊಂದು ವಿರೋಧಿಗಳೆಂಬ ಮಾತಿಗೆ ನಾನು ಒಪ್ಪಿದೆ. ಭಾರತಕ್ಕೆ ಗಾಂಧಿಯಷ್ಟು ದೊಡ್ಡ ಗಂಡಾಂತರ ಬೇರಿಲ್ಲ, ಸಾಧನಾಮಾರ್ಗದ ಪಾವಿತ್ರ್ಯದ ಕಡೆಗೆ ಗಮನಕೊಟ್ಟಲ್ಲಿ ರಾಜಕೀಯ ನಿರ್ವೀರ್ಯತೆ ಕಟ್ಟಿಟ್ಟ ಫಲವೆಂಬುದನ್ನೂ ಒಪ್ಪಿದೆ. ಅಂದರೆ ನಕಾರಾತ್ಮಕ ವಿಷಯಗಳಲ್ಲಿ ನನಗೂ ನಿನಗೂ ಒಮ್ಮತವೇ ಎನ್ನೋಣ. ಆದರೆ ಈ ದಾರಿ ನಮ್ಮನ್ನೆಲ್ಲಿಗೆ ತಂದು ಮುಟ್ಟಿಸಿರುವುದೆಂಬುದನ್ನಷ್ಟು ಗಮನಿಸಿದಿಯಾ?' ಎಂದನು.

'ಎಲ್ಲಿಗೆ?'

ರುಬಷೊವ 'ನೋಡು, ಸರಿಯಾಗಿ ನೋಡು. ಸ್ವರ್ಣಯುಗವನ್ನು ಯಾವ ರೀತಿ ನಾವು ಹಾಳುಗೆಡವಿದ್ದೇವೆನ್ನುವುದನ್ನು ಕಣ್ಣುಬಿಟ್ಟು ನೋಡು.'

ಐವನೊವ ನಸುನಕ್ಕು 'ಇರಬಹುದು' ಎಂದು ಹೇಳಿ 'ರೋಮನರ ಗ್ರಾಚ್ಚಿ, ಸೈಂಟ್ ಜಸ್ಟ್, ಪ್ಯಾರಿಸಿನ ಕಮ್ಯೂನ್ ಇವನ್ನೆಲ್ಲ ನೋಡಿ ದಾಗಲೂ ನಮಗೆ ತೋರುವುದೊಂದೇ: ಈ ವರೆಗೂ ಕ್ರಾಂತಿಯನ್ನು ಸೃಷ್ಟಿಮಾಡಿದವರು ನೀತಿವಾದಿಗಳು, ಆದರ್ಶವಾದಿಗಳು. ಅವರು ಮಾಡಿದ್ದೆಲ್ಲವನ್ನೂ ಮನಃಪೂರ್ವಕವಾಗಿಯೇ ಮಾಡಿದರೂ ಕೊನೆಗಂತೂ

ಅದರ ವಿನಾಶಕ್ಕೆ ಅವರೇ ಹೇತುವಾದರು. ಜಗತ್ತಿನ ಇತಿಹಾಸದಲ್ಲೇ ಪ್ರಥಮವಾಗಿ ಪರಿಣಾಮವಾದಿಗಳಾದ ನಾವು.......'

ರುಬಷೊವ ನಡುವೆ ಬಾಯಿಹಾಕಿ, 'ಹೌದು, ಪರಿಣಾಮವಾದಿಗಳಾದ ನೀವು ಭೂಮಿಯ ನ್ಯಾಯಪೂರ್ವಕವಾದ ವಿತರಣೆಯ ಮಹೋದ್ದೇಶ ಸಾಧನೆಗಾಗಿ ಒಂದೇ ಒಂದು ವರ್ಷದಲ್ಲಿ ಐವತ್ತು ಲಕ್ಷ ರೈತಮಕ್ಕಳನ್ನು ಉಪವಾಸ ಕೊಂದು ಮಣ್ಣುಗೂಡಿಸಿದಿರಿ. ಪರಿಣಾಮವಾದಿಗಳಾದ್ದರಿಂದಲೇ ಔದ್ಯಮಿಕ ಸುಲಿಗೆಯಿಂದ ಮನುಷ್ಯ ಜಾತಿಯನ್ನು ವಿಮೋಚನೆಗೊಳಿಸುವ ಭರದಲ್ಲಿ ಹತ್ತು ಲಕ್ಷ ಜನರಿಗೆ ಧ್ರುವಪ್ರದೇಶ ಮತ್ತು ಪ್ರಾಚ್ಯ ಪ್ರದೇಶದ ಕಾಡುಗಳಲ್ಲಿ ಪ್ರಾಚೀನ ಕಾಲದ ಗುಲಾಮರನ್ನು ನಡೆಸಿಕೊಳ್ಳುವಷ್ಟು ಕ್ರೂರವಾದ ಕಡ್ಡಾಯ ಜೇಗಾರಿಶ್ರಮವನ್ನು ವಿಧಿಸಿದ್ದೀರಿ. ಪರಿಣಾಮವಾದಿಗಳಾದ್ದರಿಂದಲೇ ಭಿನ್ನಾಭಿಪ್ರಾಯದ ವಿವಾದಗಳನ್ನು ತೀರ್ಮಾನಿಸಲು ನಮಗೆ ತಿಳಿದ ಉಪಾಯ ಒಂದೇ ಒಂದು: ಮರಣ, ಕೊಲೆ. ಜಲಾಂತರ್ಗಾಮಿಯೋ, ಗೊಬ್ಬರವೋ, ಇಂಡೋಚೀನದ ವಿಷಯ ಪಾರ್ಟಿವಹಿಸಬೇಕಾದ ಧೋರಣೆಯೋ ಎಲ್ಲವನ್ನು ನಿರ್ಣಯಿಸುವ ಮಾರ್ಗ ಒಂದೇ ಒಂದು: ಮರಣ, ಕೊಲೆ. ಕೂಡಿಸುವುದರಲ್ಲೋ ಕಳೆಯುವುದರಲ್ಲೋ ನಕಾಶೆ ಬಿಡಿಸುವುದರಲ್ಲೋ ಒಂದಿನಿಸು ತಪ್ಪಿದರೂ ಕಾರಾಗೃಹವನ್ನೋ, ಗಲ್ಲನ್ನೋ ಸೇರಬೇಕೆಂಬ ಅಂಜಿಕೆಯಲ್ಲಿ ನಮ್ಮ ಇಂಜನಿಯರುಗಳು ಕೆಲಸಮಾಡಬೇಕು. ತಮ್ಮನ್ನೆಲ್ಲಿ ಹೊಣೆಮಾಡಿ ಕೊರಳು ಹಿಚುಕುವರೋ ಎಂಬ ಭಯದಿಂದ ಮೇಲಾಧಿಕಾರಿಗಳು ತಮ್ಮ ಕೆಳ ಅಧಿಕಾರಿಗಳನ್ನು ನಾಶಮಾಡಲು ಹಾತೊರೆಯುತ್ತಿದ್ದರು. ಶೈಲಿಯ ವಿಷಯದಲ್ಲಿ ಏನಾದರೂ ವಿವಾದವೆದ್ದರೆ ನಮ್ಮ ಕವಿಗಳು ಒಬ್ಬರಮೇಲಿನ್ನೊಬ್ಬರು ಸರಕಾರಿ ಗುಪ್ತಚಾರರಿಗೆ ದೂರುಕೊಡುವರು. ನಿಸರ್ಗವಾದಿ ಶೈಲಿಯು ಕ್ರಾಂತಿ ವಿರುದ್ಧವೆಂದು ಪ್ರಗತಿವಾದಿಗಳೂ, ಪ್ರಗತಿವಾದಿ ಶೈಲಿಯು ಕ್ರಾಂತಿವಿರುದ್ಧವೆಂದು ನಿಸರ್ಗವಾದಿಗಳೂ, ಸರಕಾರಕ್ಕೆ ಮೊರೆಯಿಟ್ಟು ಅನ್ಯೋನ್ಯ ಹನನಕ್ಕೆ ಕಾರಣರಾಗುವರು. ಮುಂದಿನ ತಲೆಮಾರುಗಳ ಹಿತಾರ್ಥವಾಗಿ ಇಂದಿನ ತಲೆಮಾರನ್ನು ಉಪವಾಸವಿರಿಸಿ ಜನತೆಯ ಸರಾಸರಿ ಆಯುಷ್ಯ

ವನ್ನು ಕಾಲಂಶದಷ್ಟು ಇಳಿಸಿದ ಮಹಾ ಸಾಹಸಿಗಳು ನಾವು. ದೇಶದ ರಕ್ಷಣೆಗೋಸ್ಕರ ಅಸಾಮಾನ್ಯ ಪರಿಸ್ಥಿತಿಯ ನೆಪದಿಂದ ಕ್ರಾಂತಿಗೆ ವಿರುದ್ಧವಾದ ಕಾನೂನುಗಳನ್ನು ವಿರಚಿಸುವ ಶಾಸನ ಪಟುಗಳು ನಾವು. ನಮ್ಮ ಜೀವನದ ಮಟ್ಟವು ಕ್ರಾಂತಿಪೂರ್ವದ ಅವಧಿಗಿಂತಲೂ ಕೆಳಗೆ ಕುಸಿದಿದೆ; ಕೂಲಿಕಾರರ ಅವಸ್ಥೆ ಹೀನತರವಾದರೂ ಶಿಸ್ತಿನ ಭಾರ ಬೆಳೆಯುತ್ತಿದೆ, ವಸಾಹತು ಸಾಮ್ರಾಜ್ಯದ ಕೂಲಿಗಳ ಗೋಣು ಮುರಿಯುವಂತೆ ನಮ್ಮ ಕೂಲಿಕಾರ ವಿಧಾನಗಳು ಶ್ರಮ ಜೀವಿಗಳ ಮೇಲೆ ಸವಾರಿ ಹೊರಟಿವೆ; ಮರಣ ಶಿಕ್ಷೆಯ ಮಿತಿಯನ್ನು ನಾವು ಹನ್ನೆರಡು ವರ್ಷದ ಮಕ್ಕಳ ವರೆಗೂ ತಂದು ಸುಧಾರಕರೆನಿಸಿದ್ದೇವೆ; ನಮ್ಮ ಲೈಂಗಿಕ ಶಾಸನವು ಇಂಗ್ಲೆಂಡಿಗಿಂತ ಸಂಕುಚಿತವಾದದ್ದಾಗಿದೆ,ವ್ಯಕ್ತಿ ಪೂಜೆಯು ಸರ್ವಾಧಿಕಾರಿ ರಾಜ್ಯಗಳಿಗಿಂತಲೂ ಹೆಚ್ಚು ಪ್ರತಿಗಾಮಿ ರೀತಿಯಲ್ಲಿ ನಡೆಯುತ್ತಿದೆ. ನಮ್ಮ ಪತ್ರಿಕೆಗಳೂ, ಶಾಲೆಗಳೂ ಸೈನಿಕ ಬುದ್ಧಿ, ಅಂಧಶ್ರದ್ಧೆ, ಅನುಸರಣೆಯ ಮತ್ತು ಅಜ್ಞಾನದ ಆಶ್ರಯಗಳಾಗಿವೆ. ನಮ್ಮ ಸರಕಾರದ ನಿರಂಕುಶ ಶಕ್ತಿ ಅಪರಿಮಿತವಾಗಿದೆ, ಇತಿಹಾಸದಲ್ಲಿ ಅಭೂತಪೂರ್ವವೆನಿಸಿದೆ, 'ಮನುಷ್ಯನ ಜನ್ಮಸಿದ್ಧ ಹಕ್ಕು' ಪ್ರಕಟವಾಗಲೇ ಇಲ್ಲವೆಂಬ ರೀತಿಯಲ್ಲಿ ಪತ್ರಿಕಾಸ್ವಾತಂತ್ರ್ಯ,ಅಭಿಪ್ರಾಯ ಸ್ವಾತಂತ್ರ್ಯ ಮತ್ತು ಚಲನಾ ಸ್ವಾತಂತ್ರ್ಯವನ್ನು ದಿಗ್ಬಂಧಿಸಲಾಗಿದೆ. ನಮ್ಮ ಪೋಲೀಸ ಸಂಸ್ಥೆಯಷ್ಟು ದೊಡ್ಡ ಸಂಸ್ಥೆ ಬೇರೆಲ್ಲೂ ಇರಲಾರದು. ಗೂಢಚಾರರೆಂದರೆ ನಮ್ಮ ಅತಿದೊಡ್ಡ ರಾಷ್ಟ್ರೀಯ ಸಂಪತ್ತೆಂದೂ, ಸಂಸ್ಥೆಯೆಂದೂ ತಿಳಿದು ನಾವು ಅವರನ್ನು ಸಮಾಜದ ಮೇಲೆ ಮಾಡಿಟ್ಟಿದ್ದೇವೆ. ಅತ್ಯಂತ ವೈಜ್ಞಾನಿಕವೂ ಕ್ರೂರವೂ ಆದ ಶಾರೀರಿಕ ಮತ್ತು ಮಾನಸಿಕ ಶಿಕ್ಷೆಗಳನ್ನು ಕೊಡುವ ವಿಧಾನವನ್ನು ಪರಿಷ್ಕರಿಸಿಕೊಂಡಿದ್ದೇವೆ. ನಮಗೆ ಮಾತ್ರವೇ ಕಾಣಿಸುವ, ದೂರ ಭವಿಷ್ಯದ ಸುಖದ ಕಡೆಗೆ ಕೈಮಾಡಿ ನರಳುವ ಜನತೆಯನ್ನು ಹುರಿದುಂಬಿಸಲು ಯತ್ನಿಸುತ್ತಿದ್ದೇವೆ. ಈ ತಲೆಮಾರಿನ ಜನರ ಜೀವ ದುಡಿದು ದುಡಿದು ಕಳೇಬರವಾಗಿದೆ; ಕ್ರಾಂತಿಯಲ್ಲಿ ದುಡಿದವರೂ ಇವರೇ, ತದನಂತರ ದೇಶ ಕಟ್ಟಲು ದುಡಿದು ಹೆಣವಾದವರೂ ಇವರೇ. ಇನ್ನು ಅವರಲ್ಲಿ ಹೆಪ್ಪುಗಟ್ಟಿದ ಮಾಂಸ ಪೇಶಿಗಳ ಹೊರತು ಬೇರೇನೂ

ಉಳಿದಿಲ್ಲ........... ಪರಿಣಾಮವಾದದ ಪರಿಣಾಮವಿದು. ಪ್ರಯೋಗ ಕರ್ತರಾದ ಈ ಜನರು ತಮ್ಮ ಗ್ರಾಸದ ಚರ್ಮವನ್ನು ಸುಲಿದು ಸ್ನಾಯು, ನರಗಳನ್ನು ಬೇರ್ಪಡಿಸಿ ಅಲ್ಲೇ ಅರ್ಧದಲ್ಲಿ ನಿಲ್ಲಿಸಿಟ್ಟ ಹಾಗೆ ನನಗೆ ತೋರುತ್ತದೆ."

ಐವನೊವ ಸಂತೋಷಗೊಂಡು 'ಅದರಲ್ಲೇನಂತೆ? ಎಷ್ಟು ಅದ್ಭುತವಾದ ವಿಷಯವಿದು? ಇಂಥದು ಈ ವರೆಗೆ ಇತಿಹಾಸದಲ್ಲೆಂದಾದರೂ ನಡೆದದ್ದುಂಟೆ? ಮನುಷ್ಯ ಜಾತಿಯ ಹಳೆ ಚರ್ಮವನ್ನು ಸುಲಿದು, ಅವರಿಗೆ ಹೊಸ ಚರ್ಮ ಸರಬರಾಜು ಮಾಡುತ್ತಿದ್ದೇವೆ ನಾವು. ಇದು ನರಮಂಡಲವು ದುರ್ಬಲವಾಗಿರುವ ಮನುಷ್ಯರಿಗೆ ಹೇಳಿಸಿದ ಕೆಲಸವಲ್ಲ; ಆದರೆ ಒಂದಾನೊಂದು ಕಾಲದಲ್ಲಿ ನಿನಗೂ ಈ ವಿಷಯದಲ್ಲಿ ಉತ್ಸಾಹವಿತ್ತೆಂಬುದನ್ನು ಮರೆಯಬೇಡ. ಮುದಿ ಹೆಂಗಸಿನ ಹಾಗೆ ನೀನಿಷ್ಟೊ ಅಂಜುಬುರುಕನಾದ್ದು ಹೇಗೆಂಬುದೇ ನನಗೆ ತೋಚದ ವಿಷಯ' ಎಂದನು.

'ಬೊಗ್ರೊವ ನನ್ನ ಹೆಸರು ಹಿಡಿದು ಕರೆದದ್ದರಿಂದ' ಎಂದು ಹೇಳಬೇಕೆನ್ನಿಸಿತು ರುಬಷೊವಗೆ. ಆದರೆ ಈ ಉತ್ತರಕ್ಕೆ ಅರ್ಥವಿಲ್ಲವೆಂದು ಅವನಿಗೆ ಗೊತ್ತು. ಆದ್ದರಿಂದ ಅವನು ಹೀಗೆಂದನು:

'ಸರಿ, ಅದೇ ರೂಪಕವನ್ನು ಮುಂದುವರಿಸೋಣ: ಈ ತಲೆಮಾರಿನ ಜನತೆಯ ಸುಲಿದ ಚರ್ಮ ನನಗೆ ನಿಚ್ಚಳವಾಗಿ ಕಾಣಿಸುತ್ತಿದೆ: ಆದರೆ ಹೊಸ ಚರ್ಮವೆಲ್ಲಿದೆ? ಇತಿಹಾಸದಲ್ಲಿಯೂ ಭೌತಶಾಸ್ತ್ರದಂತೆ ಪ್ರಯೋಗ ನಡೆಸಬಹುದೆಂದು ಹೊರಟವರು ನಾವಲ್ಲವೆ? ಆದರೆ ಈ ನಡುವೆ ಮುಖ್ಯ ವ್ಯತ್ಯಾಸವನ್ನೇ ನಾವು ಗಮನಕ್ಕೆ ತರಲಿಲ್ಲ. ಭೌತಶಾಸ್ತ್ರದಲ್ಲಿ ಬೇಕಾದರೆ ಒಂದು ಪ್ರಯೋಗವನ್ನು ಸಾವಿರ ಸಲ ಪುನರಾವರ್ತಿಸಬಹುದು, ಆದರೆ ಇತಿಹಾಸದಲ್ಲಿ ಪ್ರಯೋಗ ನಡೆಯುವುದು ಒಂದೇ ಸಲ. ಡಾಂಟನ್ ಆಗಲಿ ಸೈಂಟ ಜಸ್ಟ್ ಆಗಲಿ ಗಲ್ಲಿನ ಮರ ಏರುವುದು ಒಂದೇ ಒಂದು ಸಲ. ಅದೇ ರೀತಿ ಭಾರವಾದ ಜಲಾಂತರ್ಗಾಮಿಗಳ ನೀತಿಯೇ ಸರಿ ಎಂದು ನಿರ್ಣೀತವಾದಲ್ಲಿ ಸತ್ತ ಬೊಗ್ರೊವನನ್ನು ಮತ್ತೆ ಪುನರುಜ್ಜೀವಿಸುವಂತಿಲ್ಲ.'

'ಅಂದರೇನು?' ಎಂದು ಐವನೊವ ಕೇಳಿ, 'ಆಚರಣೆಯ ಫಲವನ್ನು ಸರಿಯಾಗಿ ಊಹಿಸುವುದು ಸಾಧ್ಯವಾದರೆ ನಾವೇನು ಕೈಕಟ್ಟಿಕೊಂಡಿರಬೇಕೋ? ಪರಿಣಾಮತಃ ಎಲ್ಲ ಆಚರಣೆಯೂ ಕೆಟ್ಟದ್ದೆಂದು ಭಾವಿಸಬೇಕೋ? ಪ್ರತಿ ಆಚರಣೆಗೂ ನಾವು ನಮ್ಮ ಶಿರಸ್ಸನ್ನೇ ಪಣವಾಗಿಡಬಲ್ಲೆವು— ಅದಕ್ಕಿಂತ ಹೆಚ್ಚಿನದು ಸಾಧ್ಯವಿಲ್ಲ. ವಿರೋಧಿ ಗುಂಪಿನವರಲ್ಲಿ ಇಷ್ಟು ಪ್ರಾಮಾಣಿಕತೆ ಇದ್ದ ಹಾಗಿಲ್ಲ. ತುಕ್ಕು ಹಿಡಿದ ಯಾವ ಸೇನಾಧಿಕಾರಿಯೂ ಸಾವಿರಾರು ಜನರ ಜೀವದ ಚದುರಂಗದಾಟವನ್ನು ಆಡಬಲ್ಲ, ಅವನ ಪ್ರಯೋಗವು ಯಶಸ್ವಿಯಾಗದಿದ್ದರೆ ಹೆಚ್ಚೆಂದರೆ ಅವನನ್ನು ಪದಚ್ಯುತನಾಗಿ ಮಾಡಿ ಪೆನ್ಶನು ಕೊಡಬಹುದು; ಅಷ್ಟೆ. ಪ್ರತಿಗಾಮಿ ಮತ್ತು ಕ್ರಾಂತಿ ವಿರೋಧಕ ಶಕ್ತಿಗಳಿಗೆ ಯಾವ ದಾಕ್ಷಿಣ್ಯವೂ ಇಲ್ಲ. ಇತಿಹಾಸದ ಮಹಾ ಮಹಾ ಸೇನಾನಿಗಳಲ್ಲಿ ಯಾರಾದರೂ ರಾಸ್ಕೋಲ್ ನಿಕೊವನ ಕತೆ ಓದಿ ತಲೆ ಕೆಡಿಸಿಕೊಂಡಿದ್ದಾರೋ? ಇಲ್ಲ. ನಿನ್ನಂಥ ವಿಚಿತ್ರ ಪಕ್ಷಿಗಳನ್ನು ಕ್ರಾಂತಿವೃಕ್ಷದ ಮೇಲೆ ಮಾತ್ರ ಕಾಣಬೇಕು. ಬೇರೆಯವರಿಗಾದರೆ ಸುಲಭದಲ್ಲಿ........' ಎಂದು ಹೇಳಿದನು.

ಕೈಗಡಿಯಾರವನ್ನು ನೋಡಿಕೊಂಡನು ಕಿಟಕಿಯ ಕಾಗದ ಮುಂಜಾವಿನ ತಂಗಾಳಿಯಲ್ಲಿ ಪಟಪಟನೆ ಹೊಡೆದುಕೊಳ್ಳುತ್ತಿತ್ತು. ದಿಬ್ಬದ ಸಿಪಾಯಿ ಈಗಲೂ ಗಸ್ತು ಹೊಡೆಯುತ್ತಿದ್ದನು.

'ನಿನ್ನ ಹಿನ್ನೆಲೆಯುಳ್ಳ ಮನುಷ್ಯನಿಗೆ ಪ್ರಯೋಗದ ಮೇಲೆ ಈ ರೀತಿ ಜಿಗುಪ್ಸೆ ಬಂದದ್ದು ನೋಡಿ ನನಗೆ ಮೋಜೆನಿಸುತ್ತಿದೆ. ಪ್ರತಿ ವರ್ಷ ಸಾಂಕ್ರಾಮಿಕ ರೋಗಗಳಿಗೂ, ನೈಸರ್ಗಿಕ ಬಾಧೆಗಳಿಗೂ ಒಳಗಾಗಿ, ಎಷ್ಟು ಲಕ್ಷ ಜನ ಸಾಯುವುದಿಲ್ಲ? ಇತಿಹಾಸದ ಅತ್ಯಂತ ಫಲದಾಯಕ ಪ್ರಯೋಗದ ಬಗ್ಗೆ ಕೆಲವೊಂದು ನೂರು ಸಾವಿರ ಜನರನ್ನು ಬಲಿಕೊಟ್ಟರೆ ಅದೊಂದು ದೊಡ್ಡದೆನ್ನುತ್ತೀ. ಕಲ್ಲಿದ್ದಲ ಗನಿಯಲ್ಲಿ, ಪಾದರಸದ ಬಾವಿಗಳಲ್ಲಿ, ಭತ್ತದ ಗದ್ದೆಗಳಲ್ಲಿ, ಹತ್ತಿಯ ಹೊಲಗಳಲ್ಲಿ ಪೋಷಕಧಾತುವಿನ ಅಭಾವದಿಂದಲೂ, ಕ್ಷಯರೋಗದಿಂದಲೂ ಸಾಯುವ ಲಕ್ಷೋಪಲಕ್ಷ ಜನರನ್ನು ನೆನಸಿಕೊಳ್ಳು. ಇವರ

ರಖವಾಲಿ ಮಾಡುವವರು ಯಾರಿದ್ದಾರೆ? ಇವರ ಸಾವಿನ ಲೆಕ್ಕವಿಡು ವವರೆಲ್ಲಿದ್ದಾರೆ? ಇವರೇತಕ್ಕೆ, ಏತರಿಂದ ಸತ್ತರೆಂದು ವಿಚಾರಿಸುವವರೆಲ್ಲಿ? ಇಲ್ಲಿ ನಾವು ನಿರಪೇಕ್ಷ ಉಪದ್ರವಿಗಳಾದ ಒಂದೆರಡು ಸಾವಿರ ಜನರನ್ನು ವಿಲೆಮಾಡಿದರೆ ಎಲ್ಲೆಲ್ಲಿನ ಮಾನವವಾದಿಗಳೆಲ್ಲ ಬಾಯಿಯಲ್ಲಿ ನೊರೆ ಕಾರುತ್ತ ನಮ್ಮನ್ನು ಟೀಕಿಸಲು ಹಾತೊರೆಯುತ್ತಾರೆ. ಹೌದು, ರೈತ ಸಮಾಜದಲ್ಲಿ ಪರೋಪಕಾರಿ ಜೀವಿಗಳಾಗಿದ್ದ ಭಾಗವನ್ನು ನಾವು ಉಪವಾಸ ಹಾಕಿ, ಕೊಂದು ನಿರ್ನಾಮಗೊಳಿಸಿದ್ದು ಹೌದು. ರಾಷ್ಟ್ರದ ಆರೋಗ್ಯಕ್ಕೋಸ್ಕರ ನಡೆಸಿದ ಶಸ್ತ್ರಕ್ರಿಯೆ ಅದು. ಕ್ರಾಂತಿಯ ಹಿಂದಿನ ಕ್ಷಾಮದ ವರ್ಷಗಳನ್ನು ನೋಡಿದರೆ ನಿರುದ್ದಿಶ್ಯವಾಗಿಯೂ, ಯಾರಿಗೂ ತಿಳಿಯದೆಯೂ, ಇಷ್ಟು ಜನ ಎಷ್ಟು ಸಲ ಸತ್ತಿದ್ದಾರೆಯೋ ಬಲ್ಲವರಾರು? ಚೀನದ ಹಳದಿ ನದಿಯ ಮಹಾಪೂರದಲ್ಲಿ ವರ್ಷಕ್ಕೆ ಲಕ್ಷಾಂತರ ಜನ ಕೊಚ್ಚಿಕೊಂಡು ಹೋಗುತ್ತಾರಂತೆ. ಮನುಷ್ಯಜಾತಿಯ ಮೇಲೆ ನಿಸರ್ಗವು ನಡೆಸುವ ಪ್ರಯೋಗದಲ್ಲಿ ಯಾವ ಜಿಪುಣತನವನ್ನೂ ನಾವು ಕಾಣೆವು. ನಿಸರ್ಗವೇ ಇಷ್ಟು ಉದಾರವಾಗಿರುವಾಗ ಮನುಷ್ಯರೇ ನಡೆಸುವ ಪ್ರಯೋಗಗಳಲ್ಲಿ ಮನುಷ್ಯರು ಸ್ವಲ್ಪ ಸಂಖ್ಯೆಯಲ್ಲಿ ಆಹುತಿ ಯಾದರೇನಂತೆ?' ಎಂದು ಐವನೊವ ಪ್ರಶ್ನಿಸಿದನು. ರುಬಶೊವ ಏನಾದರೂ ಹೇಳುವನೋ ಎಂದು ತುಸು ತಡೆದು, ಅವನು ಸುಮ್ಮ ಗಿರಲು, ಮುಂದುವರಿಸಿದನು.

‘ಪ್ರಯೋಗಕ್ಕೋಸ್ಕರವಾದರೂ ಮೂಕ ಪ್ರಾಣಿಗಳನ್ನು ವಧೆ ಮಾಡಬಾರದೆನ್ನುವ ಸಂಘದವರು ಹೊರಡಿಸುವ ಪ್ರಕಟನೆಗಳನ್ನು ನೀನೋದಿದ್ದೀಯಾ. ಒಡಕಲು ನಾಯಿಯೊಂದರ ಪಿತ್ಥಕೋಶವನ್ನು ವಿಜ್ಞಾನಿಯು ಪ್ರಯೋಗ ಮಧ್ಯೆ ಕತ್ತರಿಸುತ್ತಿರುವ ವೇಳೆ ಆ ನಾಯಿ ಹಿಂಸಕ ವಿಜ್ಞಾನಿಯ ಕೈಯನ್ನು ನೆಕ್ಕುವ ದೃಶ್ಯದ ವರ್ಣನೆಯಿಂದ ಯಾರಿಗಾದರೂ ಓಕರಿಕೆ ಬಾರದಿದ್ದೀತೆ—ನಿನಗಿಂದು ಬಂದಂತೆ? ಅದರಿ ಈ ಸಂಘದವರ ಅಭಿಪ್ರಾಯವು ಗೆದ್ದಿದ್ದರೆ ಕಾಲರಾ, ಟೈಫಾಯ್ಡ್, ಡಿಫ್ತೀರಿಯಾ ರೋಗಗಳಿಗೆ ನಮ್ಮ ಹತ್ತಿರ ಚುಚ್ಚುವ ಮದ್ದು ಇರು ತಿತ್ತೇ ಎಂಬುದನ್ನು ಯೋಚಿಸು........’

ಬಾಟ್ಲಿಯಲ್ಲಿ ಉಳಿದದ್ದನ್ನೆಲ್ಲ ಒಂದೇ ಗುಟುಕಿಗೆ ಎತ್ತಿಕೊಂಡು ಕಿಟಕಿಯ ಬಳಿ ನಿಂತಿದ್ದ ರುಬಷೊವನ ಬಳಿ ಹೋಗಿ ಕಿಟಕಿಯಿಂದ ಹೊರನೋಡಿ 'ಬೆಳಗಾಯಿತು. ರುಬಷೊವ, ಹುಚ್ಚನ ಹಾಗೆ ಮಾಡ ಬೇಡ. ನಾನು ಇದುವರೆಗೆ ಹೇಳಿದ್ದೆಲ್ಲ ನಮ್ಮ ಶಾಸ್ತ್ರದ ಮೂಲಪಾಠ ವೆಂದು ನೀನೇನೂ ತಿಳಿಯದವನಲ್ಲ. ನಿನ್ನ ನರಮಂಡಲವು ಬಹಳ ದುರ್ಬಲವಾಗಿ ಹೀನ ಸ್ಥಿತಿಯಲ್ಲಿತ್ತು. ಆದರೆ ಈಗ ನೀನು ಸ್ವಲ್ಪ ಸುಧಾರಿಸಿಕೊಂಡಿರಬೇಕು. ರುಬಷೊವನ ಹೆಗಲ ಮೇಲೆ ಕೈಹಾಕಿ ಮಾತನಾಡುವಾಗ ಐವನೊವನ ಸ್ವರವು ಕೋಮಲವಾಗಿತ್ತೆಂದೇ ಹೇಳ ಬೇಕು. 'ಹೋಗಿ ನಿಶ್ಚಿಂತನಾಗಿ ನಿದ್ರಿಸು. ನಾಳೆ ನಿನ್ನ ಹೇಳಿಕೆ ಬರೆದುಕೊಳ್ಳುವ ಕಾಲಕ್ಕೆ ನನಗೂ ನಿನಗೂ ತಲೆ ಸರಿಯಾಗಿರಬೇಕು ನೋಡು. ಸುಮ್ಮನೆ ಭುಜ ಹಾರಿಸಬೇಡ. ಸಹಿ ಹಾಕುವುದಗತ್ಯ ವೆಂದು ನಿನಗೆ ಅರ್ಧವಾಸಿ ಖಂಡಿತವಾಗಿದೆ. ಸಹಿಹಾಕುವುದಿಲ್ಲವೆಂದರೆ ನೀನೊಬ್ಬ ನೀತಿ ದುರ್ಬಲನಾದ ಹೇಡಿ ಎಂದು ಕೆಟ್ಟ ಹೆಸರು ಬಂದೀತು. ಎಷ್ಟೋ ಜನ ಹುತಾತ್ಮರಾದ್ದು ಹೇಡಿತನದ ದೆಸೆಯಿಂದ.'

ರುಬಷೊವ ಮುಸುಕಾದ ಪ್ರಾತಃಕಾಲದ ಬೆಳಕನ್ನು ಈಕ್ಷಿಸಿ ದನು. ದಿಬ್ಬದ ಸಿಪಾಯಿ ಗಸ್ತಿನಲ್ಲಿ ತಿರುಗುತ್ತಿದ್ದನು. ತೋಫ ಖಾನೆಯ ಮೇಲಿನ ಆಕಾಶದಲ್ಲಿ ನಸುಗೆಂಪು ಹರಡುತಿತ್ತು. ಸ್ವಲ್ಪ ಹೊತ್ತಿನ ಮೇಲೆ 'ಇರಲಿ, ಯೋಚಿಸುತ್ತೇನೆ' ಎಂದು ರುಬಷೊವ ಹೇಳಿ ದನು.

ಸಂದರ್ಶಕನ ಹಿಂದೆ ಕದ ಚಾಚಿದಾಗ ತಾನು ಅರ್ಧವಾಸಿ ಶರಣು ಬಂದಾಯಿತೆಂದು ರುಬಷೊವನಿಗೆ ಅನಿಸಿತು. ಮಂಚದ ಮೇಲೆ ದೇಹ ವನ್ನು ಚಾಚಿದಾಗ ಅದೇಕೋ ಆಯಾಸವಾದರೂ ಶರೀರ ಸ್ಥಿತಿ ಸುಧಾರಿ ಸಿದ ಅನುಭವವಾಯಿತು. ತನ್ನ ಜೀವರಸವನ್ನೆಲ್ಲ ಹೀರಿ ಜೀವಧಾತು ವನ್ನೆಲ್ಲ ಕೂರಿದು ಯಾರೋ ಒಯ್ದಂತೆ ಅನಿಸುವುದರ ಜತೆಯಲ್ಲಿ ದೊಡ್ಡ ಭಾರವೊಂದು ತೊಲಗಿದ ಉಲ್ಲಾಸವೂ ಆಗುತಿತ್ತು. ಬೊಗೆಸ್ರೊವನ

ಧ್ವನಿಯ ತೀಕ್ಷ್ಣತೆ ತಗ್ಗಿದ ಹಾಗಿತ್ತು. ಸಾಯುವವರನ್ನು ಬಿಟ್ಟು ಬದುಕಿದ್ದವರ ವಿಶ್ವಾಸವನ್ನು ನೆಮ್ಮದಲ್ಲಿ ಜೊಗ್ರೊವ ಪ್ರಕರಣವನ್ನು ಮಿತ್ರದ್ರೋಹವೆಂದು ಹೇಗೆ ಕರೆಯಲಾದೀತು?

ರುಬಷೊವ ಕನಸು ಕೂಡ ಇಲ್ಲದ ಸವಿನಿದ್ದೆಯನ್ನು ಮಾಡುವ ಸಮಯದಲ್ಲಿ ಐವನೊವ ಗ್ಲೆಟ್‌ಕಿನನನ್ನು ಸಂದರ್ಶಿಸಿದನು. ಗ್ಲೆಟ್‌ಕಿನ್ ಸಂಪೂರ್ಣ ಸಮವಸ್ತ್ರದಲ್ಲಿ ಆಸೀನನಾಗಿ ಫೈಲುಗಳನ್ನು ಮಗಚುತ್ತಿದ್ದನು. ವಾರಕ್ಕೆ ಮೂರು ನಾಲ್ಕು ದಿನವಾದರೂ ಇರುಳೆಲ್ಲ ಫೈಲು ನೋಡುತ್ತಲೇ ಕಳೆಯುವುದು ಅವನಿಗೆ ಈಗೆಷ್ಟೋ ವರ್ಷಗಳಿಂದ ರೂಢಿಯಾಗಿತ್ತು. ಐವನೊವ ಕೋಣೆಯೊಳಕ್ಕೆ ಬರುತ್ತಲೇ ಗ್ಲೆಟ್‌ಕಿನ್ ಶಿಸ್ತಾಗಿ ನಿಂತನು.

'ಎಲ್ಲ ಸರಿಯಾಯಿತು. ನಾಳೆ ಅವನು ಸಹಿ ಮಾಡುತ್ತಾನೆ. ಆದರೆ ನಿನ್ನ ಮೂರ್ಖತನದ ಪರಿಣಾಮವನ್ನು ತೆಗೆಯಲು ನಾನು ಬೆವರು ಸುರಿಸಬೇಕಾಯಿತು.'

ಗ್ಲೆಟ್‌ಕಿನ್ ಉತ್ತರ ಕೊಡಲಿಲ್ಲ. ಡೆಸ್ಕಿನ ಹಿಂದೆ ನೀಟವಾಗಿ ನಿಂತಿದ್ದ ಗ್ಲೆಟ್‌ಕಿನ್ ತಾನು ರುಬಷೊವನ ಕೋಣೆಗೆ ಹೊರಡುವ ಮೊದಲು ಆಡಿದ ಮಾತನ್ನು ಮರೆಯಲಿಲ್ಲವೆಂದು ತಿಳಿದು ಐವನೊವ ಸಿಗರೇಟಿನ ಹೊಗೆಯನ್ನು ಅವನ ಮುಖದ ಮೇಲೆ ಹಾಯಿಸಿ 'ಹುಚ್ಚಾ, ಇನ್ನು ವೈಯಕ್ತಿಕ ಭಾವನೆಗಳನ್ನಿಟ್ಟು ಕೊಂಡಿದ್ದೀಯಾ ಅವನ ಸ್ಥಾನದಲ್ಲಿ ನೀನಿರುತ್ತಿದ್ದರೆ ಅವನಿಗಿಂತ ಗಟ್ಟಿ ನಿಲ್ಲುತ್ತಿದ್ದೀ.'

'ನನಗೆ ಬೆನ್ನುಮೂಳೆ ಇದೆ. ಅವನಿಗಿಲ್ಲ.' ಎಂದ ಗ್ಲೆಟ್‌ಕಿನ್.

'ಅದಕ್ಕೇ ನಾನೆನ್ನುವುದು, ನೀನು ಹುಚ್ಚನೆಂದು. ಈ ಒಂದು ಉತ್ತರಕ್ಕೇ ಅವನಿಗಿಂತ ಮೊದಲು ನಿನಗೇ ಗುಂಡಿಡಬೇಕು.'

ಬಾಗಿಲವರೆಗೆ ಕುಂಟುತ್ತ ನಡೆದು ಹೊರಗೆಹೋಗಿ ಸಪ್ಪಳವೊಡನೆ ಕದ ಜಾಚಿ ಐವನೊವ ಹೊರಟು ಹೋದನು.

ಗ್ಲೆಟ್‌ಕಿನ್ ಡೆಸ್ಕಿನಮುಂದೆ ಕೂತನು. ಐವನೊವ ಯಶಸ್ವಿ ಯಾದಾನೆಂದು ಅವನಿಗೆ ಭರವಸೆ ಇರಲಿಲ್ಲವಾದರೂ, ಎಲ್ಲಾದರೂ ಯಶಸ್ವಿಯಾಗಿ ಬಿಟ್ಟರೋ ಎಂಬ ಅಂಜಿಕೆಯೂ ಇತ್ತು. ಐವನೊವನ ಕೊನೆಯ ವಾಕ್ಯವು ಎಚ್ಚರಿಕೆಯ ಮಾತಾಗಿರಬಹುದೆ? ಅವನ ಹತ್ತಿರ ಯಾವುದು ತಮಾಷೆ, ಯಾವುದಲ್ಲ ಎನ್ನುವುದೇ ಕಷ್ಟ. ಬಹುಶಃ ಐವನೊವಗೆ 'ತನ್ನರಿವೇ' ಎಲ್ಲವೂ ಏನೋ–ಎಲ್ಲ ಬುದ್ಧಿಜೀವಿಗಳಂತೆ.

ಗ್ಲೆಟ್‌ಕಿನ್ ಭುಜಹಾರಿಸಿ, ಕಾಲರ್ ಸರಿಪಡಿಸಿ, ಮರಳಿ ಫೈಲು ಗಳಲ್ಲಿ ಮಗ್ನನಾದನು.

# ನೂರನೆಯ ವಿಚಾರಣೆ

ಕೆಲವೊಮ್ಮೆ ಸತ್ಯಸಂಗತಿಗಳನ್ನು ಬಚ್ಚಿಡಲು ಶಬ್ದಗಳನ್ನುಪಯೋಗಿಸತಕ್ಕದ್ದು. ಆದರೆ ಯಾರೊಬ್ಬರಿಗೂ ತಿಳಿಯದ ಹಾಗೆ ಈ ಕೆಲಸ ನಡೆಯಬೇಕು; ಅಥವಾ ಒಂದು ಪಕ್ಷ ತಿಳಿದಲ್ಲಿ ಕೂಡಲೆ ಕೊಡುವುದಕ್ಕೆ ನೆಪಗಳನ್ನು ತಯಾರಿಸಿಟ್ಟಿರಬೇಕು.

**ಮಖಿಯವೆಲ್ಲಿ—**

ರಫೆಲ್ಲೊ ಗಿರೊಲಾಮಿಗೆ ಕೊಟ್ಟ ಉಪದೇಶ.

'ಹೌದು, ಹೌದು. ಇಲ್ಲ, ಇಲ್ಲ ಎಂಬುದಿಷ್ಟೇ ನಿನ್ನ ಮಾತಾಗಲಿ. ಏತಕ್ಕೆಂದರೆ ಇದಕ್ಕೆ ಹೆಚ್ಚಿನದೆಲ್ಲವೂ ಆಪತ್ತಿನಿಂದ ಬರುವಂಥದು.

**ಮ್ಯಾಥ್ಯೂ—** V. ೩೭.

೧

ನಿ. ಸ. ರುಬಷೊವನ ದಿನಚರಿಯಿಂದ. ಸೆರೆಯಾದ ೨೦ನೆಯ ದಿನ.

'........ವ್ಲಾದಿಮಿರ್ ಬೊಗ್ರೊವ ಉಯ್ಯಾಲೆಯಿಂದ ಕೆಳಗೆ ಬಿದ್ದು ಬಿಟ್ಟನು. ನೂರೈವತ್ತು ವರ್ಷಗಳ ಹಿಂದೆ, ಫ್ರಾನ್ಸಿನ ಬೆಸ್ಟಿಲ್ ಸೆರೆಮನೆಯನ್ನು ಕ್ರಾಂತಿಕಾರರು ನಾಶಮಾಡಿದ ಸಂದರ್ಭದಲ್ಲಿ ಎಷ್ಟೋ ಕಾಲ ಜಡವಾಗಿದ್ದ, ನಿಕ್ಷೇಪ್ತವಾಗಿದ್ದ, ಐರೋಪ್ಯ ಉಯ್ಯಾಲೆ ಮತ್ತೆ ಚಲಿಸತೊಡಗಿತು. ನಿರಂಕುಶಪ್ರಭುತ್ವದ ಬಿಂದುವನ್ನು ಭಾರೀ ಉತ್ಸಾಹದಿಂದ ಬಿಟ್ಟು ಸ್ವಾತಂತ್ರ್ಯದ ನೀಲಾಕಾಶದ ಕಡೆಗೆ ಉಯ್ಯಾಲೆ ಏರಿತು. ನೂರು ವರ್ಷಗಳ ಕಾಲ ಮೇಲೆ ಮೇಲೇರುತ್ತ–ಉದಾರವಾದ ಮತ್ತು ಪ್ರಜಾತಂತ್ರದ ಕ್ಷೇತ್ರವನ್ನು ಮುಟ್ಟಿತು—ಆದರೆ ಅದೋ, ಅದರ ಜೋಕಾಲಿಯ ವೇಗವು, ತುದಿಯನ್ನು ಪರಾವರ್ತನ ಬಿಂದುವನ್ನು ಮುಟ್ಟುತ್ತಲೇ ಮಂದವಾಗಹತ್ತಿತ್ತು. ಒಂದು ಕ್ಷಣ ಜಡವಾಗಿದ್ದು ಮತ್ತೆ ಅತಿಶಯವೇಗದಲ್ಲಿ ಹಿಂದೆ ತಿರುಗಲಾರಂಭಿಸಿತು. ಊರ್ಧ್ವಗಮನದ ಹೊತ್ತು ಪ್ರಯಾಣಿಕರನ್ನು ಎಷ್ಟು ಜೋರಾಗಿ ಒಯ್ದಿತ್ತೋ ಅಷ್ಟೇ ವೇಗದಲ್ಲಿ ಸ್ವಾತಂತ್ರ್ಯದಿಂದ ನಿರಂಕುಶತೆಯ ಕಡೆಗೆ ಅಧೋಗಮನವು ಆರಂಭವಾಯಿತು. ಆಕಾಶದ ಮೇಲೆ ದೃಷ್ಟಿಯನ್ನಿಟ್ಟು ಉಯ್ಯಾಲೆಗೆ ಅವಚಿಕೊಳ್ಳುವುದನ್ನು ಮರೆತವನು ತಲೆತಿರುಗಿ ಉಯ್ಯಾಲೆಯಿಂದ ಬಿದ್ದುಬಿಟ್ಟನು.'

'ತಲೆತಿರುಗಬಾರದೆಂಬ ಮನಸ್ಸುಳ್ಳವರು ಉಯ್ಯಾಲೆಯ ಚಲನಸೂತ್ರವನ್ನು ಶೋಧಿಸಲು ಪ್ರಯತ್ನಿಸತಕ್ಕದು. ಇತಿಹಾಸದ ಚಲನೆ ಒಂದು ಲೋಲಕದ ಚಲನೆಯಂತೆ–ನಿರಂಕುಶತೆಯಿಂದ ಪ್ರಜಾತಂತ್ರಕ್ಕೆ, ಪ್ರಜಾತಂತ್ರದಿಂದ ನಿರಂಕುಶ ಸರ್ವಾಧಿಕಾರಕ್ಕೆ.'

'ಜನ ತಾವುಗೆದ್ದು ತಮ್ಮ ಹತ್ತಿರ ಉಳಿಸಿಕೊಳ್ಳುವ ಸ್ವಾತಂತ್ರ್ಯದ ಪರಿಮಾಣವು ಅವರ ರಾಜಕೀಯ ಪ್ರಬುದ್ಧತೆಯ ಮೇಲೆ ಹೊಂದಿಕೊಂಡಿದೆ. ನಾವು ಹಿಂದೆ ಹೇಳಿದ ಲೋಲಕದ ಚಲನೆಯಿಂದ ನಮಗೆ ತಿಳಿಯುವ ವಿಷಯವೇನೆಂದರೆ: ಜನತೆಯ ರಾಜಕೀಯ ಪ್ರಬುದ್ಧತೆಯು– ವ್ಯಕ್ತಿಯ ಬೆಳವಣಿಗೆಯ ಹಾಗೆ–ನಿರಂತರವೂ ಮೇಲೆ ಮೇಲಕ್ಕೇರುತ್ತಿರುವ ರೇಖೆಯಾಗಿರದೆ ಅದಕ್ಕೂ ಜಟಿಲವಾದ ನಿಯಮಗಳಿಗಧೀನವಾಗಿದೆ.

'ತಮ್ಮ ಸ್ವಾರ್ಥವನ್ನು ಗುರುತಿಸುವ ಸಾಮರ್ಥ್ಯ ಉಂಟಾಗುವುದೇ ಜನತೆಯು ಪ್ರಬುದ್ಧವಾಗುವುದರ ಲಕ್ಷಣ. ಸರಕುಗಳ ಉತ್ಪಾದನೆ ಮತ್ತು ವಿತರಣೆಯ ಪ್ರಕ್ರಿಯೆಗಳ ಅರಿವಿಲ್ಲದೆ ಪ್ರಬುದ್ಧತೆ ಜನಿಸಲಾರದು. ಜನತೆ ಪ್ರಜಾತಂತ್ರಾತ್ಮಕ ಸ್ವಾಯತ್ತ ಸರಕಾರವನ್ನು ರಚಿಸಿ ಬಾಳುವ ಸಾಮರ್ಥ್ಯವು ಒಟ್ಟು ಸಮಾಜದ ರಚನೆ ಮತ್ತು ಕ್ರಿಯಾವಿಧಾನದ ತಿಳಿವಳಿಕೆಯ ಮಟ್ಟವನ್ನು ಹೊಂದಿಕೊಂಡಿರುವುದು.

'ತಂತ್ರ ಶಾಸ್ತ್ರದ ಪ್ರತಿಯೊಂದು ಪರಿಷ್ಕರಣವೂ ಆರ್ಥಿಕ ರಚನೆಯೊಳಗೆ ಜಟಿಲತೆಯನ್ನು ಹರಡುವುದು, ಹೊಸ ಕರಣಗಳನ್ನೂ, ಸಂಯೋಜನೆಗಳನ್ನೂ ಸೃಷ್ಟಿ ಮಾಡುವುದು. ಇದನ್ನು ಜನತೆ ಸ್ವಲ್ಪ ಕಾಲ ತಿಳಿದುಕೊಳ್ಳಲಾರದು. ಹೀಗೆ ತಾಂತ್ರಿಕ ಅಭಿವೃದ್ಧಿಯು ಪುಟನೆಗೆದಾಗಲೆಲ್ಲ ಜನತೆಯ ಬೌದ್ಧಿಕ ವಿಕಾಸವು ಒಂದು ಹೆಜ್ಜೆ ಹಿಂದುಳಿಯುವುದರಿಂದ ರಾಜಕೀಯ––ಪ್ರಬುದ್ಧತೆಯ ಉಷ್ಣಮಾಪಕದಲ್ಲಿ ಪಾದರಸವು ಕೆಳಗಡೆ ಇಳಿಯುತ್ತದೆ. ನಾಗರಿಕತೆಯ ಕೆಳಹಂತದಲ್ಲಿದ್ದಾಗಿನ ಸ್ವಾಯತ್ತ—ಆಡಳಿತೆಯ ಸಾಮರ್ಥ್ಯವು ಪುನರಪಿ ಕರಗತವಾಗಬೇಕಾದರೆ ಬದಲಾವಣೆ ಹೊಂದಿದ ಪರಿಸ್ಥಿತಿಗೆ ಜನರ ತಿಳಿವಳಿಕೆಯ ಮಟ್ಟವು ಹೊಂದಿಕೊಳ್ಳಬೇಕು. ಇದಕ್ಕೆ ಹತ್ತಾರು ವರ್ಷ, ಅನೇಕ ತಲೆಮಾರುಗಳ ಕಾಲಮಾನ ಹಿಡಿವರೂ ಹಿಡಿಯಿತೆ. ಆದುದರಿಂದ ಜನತೆಯ ರಾಜಕೀಯ ಪ್ರಬುದ್ಧತೆಯನ್ನು ನಿರಪೇಕ್ಷವಾದ ಸಂಖ್ಯೆಯಲ್ಲಿ ಅಳೆಯಲಾರೆವು; ಅವನ್ನು ಯಾವುದಾದರೊಂದು ಸಮಯದಲ್ಲಿ ನಾಗರಿಕತೆಯ

ಹಂತಕ್ಕೆ ಇಷ್ಟು ದಾವಮಾಶಯದಲ್ಲಿದೆ ಎಂಬುದಾಗಿ ಸಾಪೇಕ್ಷವಾಗಿ ಮಾತ್ರವೇ ಅಳೆಯುವುದು ಸಾಧ್ಯ.

•ಜನತಾ—ಜಾಗೃತಿಯು ವಸ್ತುನಿಷ್ಠ ಪರಿಸ್ಥಿತಿಯನ್ನು ಬೆಂಬತ್ತಿ ಬಂದು ಒಮ್ಮೆಗೆ ಅದನ್ನು ಮುಟ್ಟಿತೆಂದರೆ ಶಾಂತವಾಗಿಯೋ, ಬಲಾತ್ಕಾರ ಪೂರ್ವಕವಾಗಿಯೋ, ಹೇಗೇ ಆಗಲಿ, ಪ್ರಜಾತಂತ್ರವು ಸೋತು ಹೋಗುವುದು. ತಾಂತ್ರಿಕ ನಾಗರಿಕತೆಯ ಮುಂದಿನ ನೆಗೆತದವರೆಗೂ ಉದಾ: —ಯಾಂತ್ರಿಕ ಮಗ್ಗದ ಶೋಧನೆ—ಜನತೆಯು ಸಾಪೇಕ್ಷ ಅಪ್ರಬುದ್ಧಾವಸ್ಥೆಯಲ್ಲಿದ್ದು, ನಿರಂಕುಶ ಅಧಿಕಾರದ ಸ್ಥಾಪನೆಯು ಅನಿವಾರ್ಯವೆಂದೆನಿಸುವುದು.

•ಹಲವು ಅಂಕಣಗಳುಳ್ಳ ಒಂದು ಕಾಲುವೆಯಲ್ಲಿ ಹಡಗುಗಳನ್ನು ಎತ್ತುವ ಕೆಲಸಕ್ಕೆ ಇದನ್ನು ಹೋಲಿಸಬಹುದು. ಹಡಗು ಮೊತ್ತ ಮೊದಲು ಅಂಕಣವನ್ನು ಪ್ರವೇಶಿಸಿದಾಗ ಅಂಕಣದ ಸಾಮರ್ಥ್ಯಕ್ಕಿಂತ ಹಡಗಿನ ಮಟ್ಟವು ಕೆಳಗಿರುತ್ತದೆ. ಆ ಮೇಲೆ ಅದನ್ನು ನಿಧಾನವಾಗಿ ಎತ್ತಿ ನೀರಿನ ಅತ್ಯುಚ್ಚ ಮಟ್ಟದಲ್ಲಿ ಹಡಗು ಬಂದು ನಿಲುತ್ತದೆ. ಆದರೆ ಇಲ್ಲಿನ ಔನ್ನತ್ಯವು ನಿಜವಾಗಿ ನೋಡಿದರೆ ಬರಿಯ ಭ್ರಮೆ. ಏಕೆಂದರೆ, ಮುಂದಿನ ಅಂಕಣದ ಮಟ್ಟವು ಇದಕ್ಕೂ ಏರಿಕೆಯಲ್ಲಿರುವುದು. ಹಡಗಿನ ಮಟ್ಟವನ್ನೂ ನೀರಿನ ಮಟ್ಟವನ್ನೂ ಸಮನಾಗಿರಿಸುವ ಕೆಲಸ ಮರಳಿ ಆರಂಭವಾಗಬೇಕಾಗುವುದು. ಇಲ್ಲಿ ಅಂಕಣದ ಗೋಡೆಯು ತಾಂತ್ರಿಕ ಅಭಿವೃದ್ಧಿಯ ಸಂಕೇತ, ಹಾಗೆಯೇ ಅಂಕಣದೊಳಗಿನ ಜಲಮಟ್ಟವು ಜನತೆಯ ರಾಜಕೀಯ ಪ್ರಬುದ್ಧತೆಯ ಸಂಕೇತ. ಜಲಮಟ್ಟವನ್ನು ಸಮುದ್ರ ಮಟ್ಟಕ್ಕಿಂತ ಇಷ್ಟು ಹೆಚ್ಚಾಗಿದೆ ಎಂದು ನಿರಪೇಕ್ಷವಾಗಿ ಅಳೆದು ಪ್ರಯೋಜನವೇನು? ಅಂಕಣಗಳೊಳಗಿನ ಸಾಪೇಕ್ಷ ಮಟ್ಟ ತಾನೇ ಮುಖ್ಯವಾದ್ದು?

•ವಸ್ತುನಿಷ್ಠ ದೃಷ್ಟಿಯಿಂದ ನೋಡಿದರೆ ಉಗಿಯಂತ್ರದ ಸಂಶೋಧನೆಯು ಶೀಘ್ರ ಪ್ರಗತಿಯ ಅಧ್ಯಾಯವನ್ನು ತೆರೆಯಿತೆಂದು ಕಾಣುತ್ತದೆ; ಆದರೆ ವ್ಯಕ್ತಿನಿಷ್ಠ ದೃಷ್ಟಿಯಲ್ಲಿ ರಾಜಕೀಯ ಅವನತಿಯ ಅಧ್ಯಾಯವೊಂದು ತೆರೆಯಿತೆಂದೂ ಹೇಳಬೇಕಾಗುತ್ತದೆ. ಇತಿಹಾಸ

ದಲ್ಲಿ ಔದ್ಯಮಿಕ ಯುಗವು ಇನ್ನೂ ಎಳವೆಯಲ್ಲಿದೆ ಎನ್ನಬೇಕು. ಅದರ ಜಟಿಲ ಆರ್ಥಿಕ ರಚನೆಗೂ, ಜನತೆಯ ತಿಳಿವಳಿಕೆಗೂ ಇನ್ನೂ ಬಹಳ ತಾರತಮ್ಯ ಉಳಿದಿದೆ. ಆದುದರಿಂದ ೨೦ನೆಯ ಶತಮಾನದ ಪ್ರಥಮಾರ್ಧದಲ್ಲಿ ಜನತೆಯ ರಾಜಕೀಯ ಪ್ರಬುದ್ಧತೆಯು ಕ್ರಿಸ್ತಪೂರ್ವ ೨೦೦ನೆಯ ವರ್ಷಕ್ಕಿಂತಲೂ ಕೆಳಮಟ್ಟದಲ್ಲಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಸಮಾಜವಾದಿ ತತ್ವದಲ್ಲಿ ಕಾಣುವ ತಪ್ಪು ಎಂದರೆ: ಜನತಾಜಾಗೃತಿಯ ಮಟ್ಟವು ಸತತವಾಗಿ, ಅಡೆತಡೆ ಇಲ್ಲದೆ ಬೆಳೆಯುತ್ತಲೇ ಇರುವುದೆಂದು ನಂಬಿರುವುದು ಇದರಿಂದಲೇ ಇತ್ತೀಚೆಗೆ ಜನತೆಯು ವೈಚಾರಿಕವಾಗಿ ಸ್ವನಾಶತತ್ಪರವಾದುದನ್ನು ನೋಡಿ ಸಮಾಜವಾದಿ ತತ್ವವು ತತ್ತರಿಸಿಹೋಗಿದೆ, ಅಸಹಾಯವಾಗಿದೆ. ಪ್ರಪಂಚದ ಬಗ್ಗೆ ಜನರಿಗಿರುವ ವಿಚಾರಗಳನ್ನು ಪರಿವರ್ತಿತ ಪರಿಸ್ಥಿತಿಗೆ ಹೊಂದಿಸುವುದು ಸರಳವೆಂಬುದಾಗಿಯೂ, ಕೆಲವರ್ಷಗಳಲ್ಲೀ ಇದು ಸಿದ್ಧಿಸುವುದೆಂಬುದಾಗಿಯೂ, ತಿಳಿದದ್ದೇ ತಪ್ಪಾಯಿತು. ಇತಿಹಾಸದಿಂದ ಅನುಭವವನ್ನು ಪಡೆಯುತ್ತಿದ್ದರೆ ಇದಕ್ಕೆ ಶತಮಾನಗಳ ಕಾಲ ಹಿಡಿಯುವುದೆಂದು ಕೂಡಲೇ ಗೋಚರವಾಗುತಿತ್ತು. ಉಗಿಯಂತ್ರದ ಪರಿಣಾಮಗಳನ್ನು ಯುರೋಪಿನ ಜನ ಇನ್ನೂ ಮಾನಸಿಕವಾಗಿ ಜೀರ್ಣಿಸಿಕೊಳ್ಳುತ್ತಿದ್ದಾರಷ್ಟೆ. ಜನತೆಗೆ ಅರ್ಥವಾಗುವ ಮೊದಲೇ ಬಂಡವಾಳಶಾಹಿ ಪದ್ಧತಿಯು ನಾಶವಾಗಿ ಹೋಗುತ್ತದೆ.

'**ಕ್ರಾಂತಿಯ ಪಿತೃಭೂಮಿ**'ಯಲ್ಲಿ ಕೂಡ ಇದೇ ಅವಸ್ಥೆ. ಅಲ್ಲಿನ ಜನತೆಯ ವಿಚಾರದ ಮಟ್ಟವು ಮೇಲೆ ಹೇಳಿದ ಸಾಮಾನ್ಯ ಸೂತ್ರಗಳನ್ನೇ ಪಾಲಿಸುವುದು. ಅವರು ಕಾಲುವೆಯಲ್ಲಿ ಮುಂದಿನ ಅಂಕಣವನ್ನು ತಲಪಿರಬಹುದಾದರೂ ಆ ಅಂಕಣದ ಮಟ್ಟವು ಕಡಿಮೆಯಾಗಿಯೇ ಇದೆ. ಹಳೆಯದರ ಸ್ಥಾನದಲ್ಲಿ ಸ್ಥಾಪಿತವಾದ ನವೀನ ಆರ್ಥಿಕ ಪದ್ಧತಿಯು ಜನತೆಗೆ ಹಿಂದಿನದಕ್ಕಿಂತಲೂ ಹೆಚ್ಚು ದುರೂಹ್ಯವಾಗಿದೆ. ಮೇಲಕ್ಕೇರುವ ಕಷ್ಟಸಾಧ್ಯ ಪ್ರಯತ್ನವು ಆರಂಭವಾಗಬೇಕಷ್ಟೆ. ಕ್ರಾಂತಿಯ ಮೂಲಕ

ತಾವೇ ಸೃಷ್ಟಿಸಿದ ಹೊಸ ಪರಿಸ್ಥಿತಿಯನ್ನು ಜನತೆಯು ಅರ್ಥಮಾಡಿ ಕೊಳ್ಳಲು ಶತಮಾನಗಳ ಅವಧಿ ಬೇಕು.

ಅಲ್ಲಿಯ ತನಕ ಪ್ರಜಾತಂತ್ರಾತ್ಮಕ ಪದ್ಧತಿಯ ಸರಕಾರವು ಅಸಾಧ್ಯ; ವೈಯಕ್ತಿಕ ಸ್ವಾತಂತ್ರ್ಯದ ಮೊತ್ತ ಇತರ ದೇಶಗಳಲ್ಲಿರುವುದ ಕ್ಕಿಂತಲೂ ಕಡಿಮೆಯಾಗಿರುವುದು ನ್ಯಾಯ. ನಾಯಕರು ಆ ತನಕ ನಿರ್ವಾತ ಪ್ರದೇಶದಲ್ಲಿ ಆಳಿಕೊಂಡಿರಬೇಕು. ಉದಾರವಾದದ ಮಟ್ಟ ಗೋಲಿನಲ್ಲಿ ಅಳೆದರೆ ಇದು ಪ್ರೇಕ್ಷಣೀಯ ಪರಿಸ್ಥಿತಿ ಏನೂ ಅಲ್ಲವೆಂದು ಒಪ್ಪತಕ್ಕದು. ಆದರೆ ಎಲ್ಲ ಭೀಕರತೆ, ವಂಚನೆ ಮತ್ತು ಅವನತಿಯೂ ಮೇಲ್ಕಂಡ ಸೂತ್ರಗಳ ಅನಿವಾರ್ಯ ಅಭಿವ್ಯಂಜನೆಯೆಂಬುದನ್ನು ನಾವು ಮರೆಯಲಾಗದು. ಏತಕ್ಕೆ ಎನ್ನದೆ ಹೇಗೆ ಎಂದು ಕೇಳುವ ಮೂರ್ಖರಿಗೂ, ಸೌಂದರ್ಯವಾದಿಗಳಿಗೂ ಇದು ಸಮಯವಲ್ಲ. ಜನತೆಯು ಅಪ್ರಬುದ್ಧಾ ವಸ್ಥೆಯಲ್ಲಿರುವ ಈಗಿನಂಥ ಕಾಲದಲ್ಲಿ ವಿರೋಧಪಕ್ಷದ ಗತಿ ದುರ್ಗತಿಯೇ ಎನ್ನುವುದರಲ್ಲಿ ಸಂದೇಹವಿಲ್ಲ.

ಜನತೆ ಪ್ರಬುದ್ಧವಾಗಿರುವ ಕಾಲದಲ್ಲಿ ವಿರೋಧಿ ಪಕ್ಷವು ಜನತೆ ಯನ್ನು ಹುರಿದುಂಬಿಸುವ ಕೆಲಸದಲ್ಲಿ ಮಗ್ನವಾಗತಕ್ಕದು; ಆದರೆ ಅಪ್ರ ಬುದ್ಧಾವಸ್ಥೆಯಲ್ಲಿ ಜನತೆಯ ವಿವೇಕ ಮತ್ತು ನಿರ್ಣಯಕ್ಕೆ ಪ್ರಶ್ನೆಗ ಳನ್ನೊಪ್ಪಿಸುವುದು ಅಸಂಗತ. ಅಂಥ ಸಂದರ್ಭದಲ್ಲಿ ವಿರೋಧಿಗಳಿಗೆ ಇರುವುದು ಎರಡೇ ಎರಡು ದಾರಿ: ಜನತೆಯ ನೆರವಿದೆಯೋ ಇಲ್ಲವೋ ಎಂಬುದನ್ನು ಪರಿಶೀಲಿಸದೆ ಸರಕಾರವನ್ನು ಹಠಾತ್ ವಶಪಡಿಸಿಕೊಳ್ಳುವು ದೊಂದು; ಅಥವಾ ಅಸಹಾಯತೆಯ ಪರಮಾವಧಿಯಲ್ಲಿ ಉಯ್ಯಾಲೆ ಯಿಂದ ಕೆಳಗೆ ಹಾರಿ ಪ್ರಾಣ ಕಳೆದುಕೊಳ್ಳುವುದು—'ಮೌನವಾಗಿ ಸಾಯುವುದು'—ಎರಡನೆಯದು.

ಮೂರನೆಯ ದಾರಿಯೂ ಒಂದಿದೆ. ಅದನ್ನು ನಮ್ಮ ದೇಶದಲ್ಲಿ ಒಂದು ಪದ್ಧತಿಯಾಗಿ ನಾವು ಬೆಳೆಸಿದ್ದೇವೆ. ನಮ್ಮ ಅಭಿಪ್ರಾಯಗಳನ್ನು ಕಾರ್ಯರೂಪಕ್ಕೆ ತರುವ ಸಂದರ್ಭವು ಇಲ್ಲವೆಂದಾದಲ್ಲಿ ಅವನ್ನು ನಾವೇ ನಿರಾಕರಿಸುವುದು, ದಮನ ಮಾಡುವುದು. ಸಾಮಾಜಿಕ ಪ್ರಯೋಜನ ವೆಂಬುದೊಂದು ಮಾತ್ರ ನಮಗೆ ಅರ್ಥವಾಗುವ ನೈತಿಕ ಮಾನದಂಡ

ವಾದುದರಿಂದ ಹುಚ್ಚುತನದ ಹೋರಾಟಕ್ಕಿಂತ ಸ್ವಾಭಿಪ್ರಾಯಖಂಡನೆ ಯಿಂದ ಪಾರ್ಟಿಯಲ್ಲಿ ಸ್ಥಾನವನ್ನು ಭದ್ರಗೊಳಿಸುವುದು ಹೆಚ್ಚು ಶ್ರೇಯಸ್ಕರ.

'ವ್ಯಕ್ತಿ ಗೌರವದ ಪ್ರಶ್ನೆ; ಆಯಾಸ, ಜಿಗುಪ್ಸೆ, ನಾಚಿಕೆ ಮುಂತಾದ ವೈಯಕ್ತಿಕ ಭಾವಗಳು—ಇವನ್ನು ಆಮೂಲಾಗ್ರವಾಗಿ ನಾಶಗೊಳಿಸತಕ್ಕದು........'

## ೨

'ಉಯ್ಯಾಲೆ' ಸಿದ್ಧಾಂತದ ಕುರಿತು ತನ್ನ ಚಿಂತನೆಗಳನ್ನು ರುಬಷೊವ ಬರೆಯಲಾರಂಭಿಸಿದ್ದು ಬೊಗ್ರೊವನ ಕೊಲೆ ಅಥವಾ ಐವನೊವನ ಸಂದರ್ಶನದ ಮರುದಿನ.

ಮುಂಜಾನೆಯ ಫಲಾಹಾರವನ್ನು ಅವನಿಗೆ ತಂದುಕೊಟ್ಟರೆ ಅದರಲ್ಲಿ ಸ್ವಲ್ಪ ಕಾಫಿಯನ್ನು ಮಾತ್ರ ಕುಡಿದು ಉಳಿದುದನ್ನು ತಣಿಯಬಿಟ್ಟನು. ಅವನ ಕೈ ಬರೆಹದಲ್ಲಿ ಮರಳಿ ಶಕ್ತಿಯೂ ಶಿಸ್ತೂ ಚಿಗುರಿದಂತಿತ್ತು. ಓದಿ ನೋಡಿದರೆ ಬರವಣಿಗೆಯಲ್ಲಿಯೂ ಬದಲಾವಣೆ ತೋರುತಿತ್ತು.

ಪೂರ್ವಾಹ್ನ ಹನ್ನೊಂದಕ್ಕೆ ರುಬಷೊವನ ವ್ಯಾಯಾಮದ ಸಮಯವಾದುದರಿಂದ ಬರವಣಿಗೆಯನ್ನು ಅತ ನಿಲ್ಲಿಸಬೇಕಾಯಿತು. ಅಂಗಳಕ್ಕೆ ಹೋದರೆ ಅಂದು ರಿಪ್‌ವ್ಯಾನ್ ವಿಂಕಲನ ಬದಲು ಬೇರಾರನ್ನೊ, ಒಬ್ಬ ರೈತನನ್ನು, ಅವನಿಗೆ ಸಂಗಾತಿಯಾಗಿ ನಿಲ್ಲಿಸಿದ್ದರು. ರಿಪ್ ವ್ಯಾನ್ ವಿಂಕಲ್ ವ್ಯಾಯಾಮಕ್ಕೆ ಬಂದಿರಲೇ ಇಲ್ಲವೆಂಬುದನ್ನು ರುಬಷೊವ ಗುರುತಿಸುವಾಗಲೇ, ಅವನಿಗೆ ಫಲಾಹಾರದ ಹೊತ್ತು ಸದಾ ಕೇಳಿಸುತ್ತಿದ್ದ 'ಧರಣೀತಲದ ಪತಿತರೇ, ಜಾಗ್ರತರಾಗಿ' ಎಂಬ ಸೊಲ್ಲು ಕೇಳಿಸಲಿಲ್ಲವೆಂಬುದೂ ನೆನಪಾಯಿತು. ಮತ್ತೇನು, ಮುದುಕನನ್ನೊಯ್ದಿರಬೇಕು—ಎಲ್ಲಿಗೋ ದೇವರಿಗೇ ಗೊತ್ತು. ಜೀವಮಾನದ ನಿಶ್ಚಿತ

ಅವಧಿಯನ್ನು ಮೀರಿ, ಅದೆಂತೋ ಬದುಕಿ ಉಳಿದು, ಒಂದು ವರ್ಷದ ತರುವಾಯ ಋತು ಕಳೆದ ಮೇಲೆ ಒಂದೆರಡು ಸಲ ಹಾರಿ ಬೂದಿಯಾದ ಕುರುಡು ಪತಂಗ–ಅಂತೂ ಆಯುಷ್ಯ ತೀರಿರಬೇಕು.

ರುಬಷೊವನ ಇಂದಿನ ಸಂಗಡಿಗನಾದ ರೈತ ಮೊದಲ ಸುತ್ತಿನಲ್ಲಿ ಮೌನವಾಗಿದ್ದನು, ಎರಡನೆಯುದರಲ್ಲಿ ಗಂಟಲು ಕೆರೆದುಕೊಂಡನು, ಮೂರನೆಯ ಸುತ್ತಿನಲ್ಲಿ ಮಾತಿಗಾರಂಭಿಸಿದನು.

'ನಾನು 'ಡಿ' ಪ್ರಾಂತ್ಯದವನು. ನೀವು ಎಂದಾದರೂ ಈ ಪ್ರಾಂತ್ಯ ವನ್ನು ನೋಡಿದ್ದೀರಾ, ಒಡೆಯಾ?'

ರುಬಷೊವ ಇಲ್ಲವೆಂದನು. 'ಡಿ' ರಾಜಧಾನಿಯಿಂದ ಬಲು ದೂರದ ಪ್ರಾಂತ್ಯವಾದ್ದರಿಂದ ಆತನ ನೆನಪು ಅಸ್ಪಷ್ಟವಾಗಿತ್ತು.

'ನಮ್ಮ ಪ್ರಾಂತ್ಯ ಬಲುದೂರ, ಸ್ವಾಮಿ, ಒಂಟೆಗಳ ಮೇಲೆ ಪ್ರಯಾಣ ಮಾಡಬೇಕು. ಒಡೆಯರು ರಾಜಕೀಯಸ್ಥರು ಎಂತ ತೋರುತ್ತದೆ. ಅಲ್ಲವೆ?'

ರುಬಷೊವ ಹೌದೆಂದು ಗೋಣಲ್ಲಾಡಿಸಿದನು. ರೈತನ ಬೂಟುಗಳು ಹರಿದು ಅವನ ಕಾಲ್ಬೆರಳು ಹಿಮಗಡ್ಡೆಯನ್ನು ಮುಟ್ಟಿ ಕೊಂಡು ಹೋಗುತ್ತಿದ್ದುವು. ಅವನ ಕತ್ತು ನೀಳವಾಗಿತ್ತು. ಮಾತ ನಾಡುವಾಗ ಅವನ ತಲೆ ಅಲ್ಲಾಡುತ್ತಿತ್ತು.

'ನಾನೂ ರಾಜಕೀಯಸ್ಥನೇ, ಸ್ವಾಮಿ. ನಾನು ಪ್ರತಿಗಾಮಿ ಯಂತೆ. ಪ್ರತಿಗಾಮಿಗಳಿಗೆ ಹತ್ತು ವರ್ಷ ಕೊಡುತ್ತಾರಂತೆ, ಹೌದೆ? ನನ್ನನ್ನು ಹತ್ತು ವರ್ಷಕ್ಕೆ ಕಳಿಸಿಯಾರೆ, ಒಡೆಯಾ?'

'ನೀನು ಮಾಡಿದ್ದೇನು?' ಎಂದು ರುಬಷೊವ ಕೇಳಿದನು.

'ಮಕ್ಕಳಿಗೆ ಸೂಜಿ ಚುಚ್ಚಲು ಬಂದಾಗ ನನ್ನ ಪ್ರತಿಗಾಮಿತ್ವ ಬಯಲಾಯಿತು. ಪ್ರತಿ ವರ್ಷವೂ ಸರಕಾರದಿಂದ ನಮ್ಮಲ್ಲಿಗೆ ಒಂದು ಸಮಿತಿ ಬರುವುದು ವಾಡಿಕೆ. ಎರಡು ವರ್ಷಗಳ ಕೆಳಗೆ ಏನೇನೋ ಪತ್ರಿಕೆಗಳನ್ನೂ, ಸರಕಾರದ ಹಲವಾರು ಚಿತ್ರಗಳನ್ನೂ ಕಳಿಸಿಕೊಟ್ಟರು. ಹೋದ ವರ್ಷ ಪೈರು ಹೊಡೆಯುವುದಕ್ಕೊಂದು ಯಂತ್ರ ಮತ್ತು ಹಲ್ಲು ಜ್ಜುವ ಬ್ರಶ್ಶುಗಳನ್ನು ರವಾನೆ ಮಾಡಿದರು. ಈ ವರ್ಷ ಸಣ್ಣ ಸಣ್ಣ

ಗಾಜಿನ ನಳಿಗೆ ಮತ್ತು ಸೂಜಿಗಳನ್ನು ದಯಪಾಲಿಸಿದರು. ಗಂಡಸರಂತೆ ವೇಷ ಧರಿಸಿದ ಒಬ್ಬಳು ಹೆಂಗಸು ನಮ್ಮ ಮಕ್ಕಳನ್ನೆಲ್ಲ ಒಂದೊಂದಾಗಿ ಹಿಡಿದು ಸೂಜಿ ಚುಚ್ಚಲು ಆರಂಭಮಾಡಿದಳು. ನಮ್ಮ ಮನೆಗೆ ಬಂದಾಗ ಅವಳ ಮುಖದಿದಿರೇ ಕದವಿಕ್ಕಿದ್ದರಿಂದ ನಾನೂ ನನ್ನ ಹೆಂಡತಿಯೂ ಪ್ರತಿಗಾಮಿಗಳಾದೆವು. ಊರಿನವರೆಲ್ಲ ಸೇರಿ ಸರಕಾರ ಕಳಿಸಿದ ಪತ್ರಗಳನ್ನೂ ಪೈರು ಹೊಡೆವ ಯಂತ್ರವನ್ನೂ ಸುಟ್ಟು ಹಾಕಿದೆವು. ಅದಾದ ಒಂದು ತಿಂಗಳಲ್ಲಿ ನಮ್ಮನ್ನು ಹಿಡಿದುಕೊಂಡರು.'

ರುಬಷೊವ ಏನೋ ಗೊಣಗಿ ಮರಳಿ ತನ್ನ ಸ್ವಾಯತ್ತ ಸರಕಾರದ ಪ್ರಬಂಧವನ್ನು ಮುಂದುವರಿಸಿದನು. ನ್ಯೂಗಿನಿ ದ್ವೀಪದ ನಿವಾಸಿಗಳ ಕುರಿತು ಎಂದೋ ಓದಿದ ನೆನಪು: ಆ ದ್ವೀಪವಾಸಿಗಳ ಮತ್ತು ಈ ರೈತನ ಬೌದ್ಧಿಕ ಮಟ್ಟ ಒಂದೇ ಆಗಿದ್ದರೂ, ದ್ವೀಪ ಸಮಾಜದಲ್ಲಿ ಸಮರಸವಾಗಿ ಬಾಳುವೆ ಮಾಡಬಹುದಾಗಿತ್ತು, ಮಾತ್ರವಲ್ಲದೆ ಅವರ ಸಂಸ್ಥೆಗಳೂ ಆಶ್ಚರ್ಯಕರವಾದ ರೀತಿಯಲ್ಲಿ ಪ್ರಜಾತಂತ್ರದ ತತ್ವಗಳನ್ನೊಳಗೊಂಡಿದ್ದುವು. ಅಂಕಣವು ಕೆಳಗಿನಮಟ್ಟದಲ್ಲಿದ್ದರೂ ಅವರ ಹಡಗು ಆ ಅಂಕಣದ ಅತ್ಯುನ್ನತ ಮಟ್ಟಕ್ಕೇರಿತ್ತು........

ರುಬಷೊವನ ಸಂಗಡಿಗನು ಆತನ ಮೌನವನ್ನು ನೋಡಿ ತಾನಾಡಿದ್ದು ತಪ್ಪಾಯಿತೆಂದು ಭಾವಿಸಿ ಸಂಕೋಚಪಟ್ಟನು. ಆಗಿಂದಾಗ ನಿಟ್ಟುಸಿರುಬಿಡುತ್ತ ರುಬಷೊವನ ಪಕ್ಕದಲ್ಲಿ ಸುತ್ತುಬರುತ್ತಿದ್ದನು.

ರುಬಷೊವ ತನ್ನ ಕೊಠಡಿಗೆ ಮರಳಿದವನೇ ದ್ರುತಗತಿಯಿಂದ ಬರವಣಿಗೆಯನ್ನು ಮುಂದುವರಿಸಿದನು. 'ಸಾಪೇಕ್ಷ ಪ್ರಬುದ್ಧತೆಯ ಸೂತ್ರ'ದ ಮಹಾ ಸಂಶೋಧನೆಯೊಂದನ್ನು ಮಾಡಿರುವವನಂತೆ ಮನಸ್ಸನ್ನು ಬಿಗಿ ಹಿಡಿದು ಮಧ್ಯಾಹ್ನದ ಭೋಜನವು ಬರುವ ತನಕವೂ ಬರೆಯುತ್ತಲೇ ಇದ್ದನು. ಊಟಮಾಡಿ ಸಮಾಧಾನ ಚಿತ್ತದಿಂದ ಮಂಚದ ಮೇಲೆ ಹೊರಳಿದನು.

ಒಂದು ತಾಸು ನಿರ್ವಿಕಾರತೆಯಿಂದ ನಿದ್ದೆಮಾಡಿದ ಬಳಿಕ ರುಬಷೊವಗೆ ಶರೀರದ ಆಯಾಸವು ಹಾರಿಹೋದಂತೆ ಅನಿಸಿತು. ೬೦೨

ಈಗ ಸ್ವಲ್ಪ ಹೊತ್ತಿನಿಂದ ಗೋಡೆ ಬಡೆಯುತ್ತಿದ್ದನು. ರುಬಷೊವನ ವ್ಯಾಯಾಮದ ಸಂಗಡಿಗ ಯಾರೆಂಬುದು ಅವನಿಗೆ ತಿಳಿಯಬೇಕಾಗಿತ್ತು. ಕಿಟಕಿಯಿಂದಲೇ ಅವನು ಹೊಸಬನನ್ನು ಹೊಸಬನೆಂದು ಗುರುತಿಸಿದ್ದನು. ರುಬಷೊವ ನಡುವೆ ಬಾಯಿಹಾಕಿ, ಒಳಗೊಳಗೆ ನಗುತ್ತ, ಕನ್ನಡಕದಿಂದ ತಟ್ಟಿದನು:

**'ನಾನು ಶರಣುಹೋಗುತ್ತೇನೆ'**

ಕುತೂಹಲದಿಂದ ೪೦೨ರವನ ಮೇಲೆ ಯಾವ ಪ್ರಭಾವ ಆದೀತೆಂದು ಕಾಯುತ್ತ ನಿಂತನು.

ಒಂದು ಮಿನಿಟು ಆಚೆಯಿಂದ ಉತ್ತರವಿಲ್ಲ. ಆ ಮೇಲೆ: **'ನಾನಾದರೆ ಸಾಯುವುದೇ ಲೇಸೆನ್ನುತಿದ್ದೆ'.**

ರುಬಷೊವ ನಸುನಕ್ಕು **'ಅವರವರ ಯೋಗ್ಯತಾನುಸಾರ'**

೪೦೨ರವನು ಸಿಟ್ಟಿನಿಂದ ಹಾರಬಹುದೆಂಬ ರುಬಷೊವನ ಊಹೆ ತಪ್ಪಾಯಿತು. ಅವನು ಮಿದುವಾಗಿ, ಪರಿಸ್ಥಿತಿಯನ್ನು ಒಪ್ಪಿಕೊಂಡಂತೆ **'ನೀನೊಬ್ಬ ಸಾಮಾನ್ಯ ನಿಯಮಕ್ಕೆ ಅಪವಾದವಾದೀಯಾ ಎಂದೆಣಿಸಿದ್ದೆ. ನಿನ್ನಲ್ಲಿ ಒಂದಿಷ್ಟು ಮರ್ಯಾದೆ' ಉಳಿದಿಲ್ಲವೆ?'**

ರುಬಷೊವ ಕನ್ನಡಕವನ್ನು ಕೈಯಲ್ಲಿ ಹಿಡಿದುಕೊಂಡು ಅಂಗಾತ ಮಲಗಿ, ಸುಪ್ರೀತನಾಗಿ.

**'ಮರ್ಯಾದೆಯ ಅರ್ಥ ನನ್ನದು ಬೇರೆ ನಿನ್ನದು ಬೇರೆ'**

೪೦೨ ಶೀಘ್ರವಾಗಿ, ನಿಸ್ಸ್ಪೃಷ್ಟವಾಗಿ ಬಡಿದನು:

**'ನಮ್ಮ ಅಭಿಪ್ರಾಯಕ್ಕಾಗಿ ಬದುಕುವುದು ಮತ್ತು ಸಾಯುವುದೇ ಮರ್ಯಾದೆ.'**

ರುಬಷೊವ ಅಷ್ಟೇ ಶೀಘ್ರದಲ್ಲಿ, 'ಸುಳ್ಳು ಅಭಿಮಾನಕ್ಕಿಂತ ಪ್ರಯೋಜನವಾಗುವಂತೆ ಬಾಳುವುದೇ ಮರ್ಯಾದೆ' ಎಂದನು.

೪೦೨ ಗಟ್ಟಿಯಾಗಿ—**'ನಿರ್ಮಲವಾದ ಶೀಲ ಮರ್ಯಾದೆ ಎಂದರೆ ಪ್ರಯೋಜನವಲ್ಲ.'**

**'ನಿರ್ಮಲವಾದ ಶೀಲ—ಎಂದರೆ?'**

**'ಅದು ನಿನ್ನಂಥವರಿಗೆ ಅರ್ಥವಾಗುವ ಸಂಗತಿಯಲ್ಲ'**

**‘ನಿರ್ಮಲನಾದ ಶೀಲದ ಸ್ಥಾನದಲ್ಲಿ ನಿರ್ಮಲನಾದ ತರ್ಕವನ್ನಿಟ್ಟವರು ನಾವು.’**

೪೦೨ ಕೊನೆಯ ಮಾತಿಗೆ ಉತ್ತರವಿಲ್ಲ.

ರಾತ್ರಿಯ ಭೋಜನವು ಬರುವುದಕ್ಕೆ ಮುನ್ನ ರುಬಷೊವ ತನ್ನ ಪ್ರಬಂಧವನ್ನೊಮ್ಮೆ ಓದಿ ನೋಡಿದನು. ಒಂದೆರಡು ಕಡೆ ತಿದ್ದಿ ಪತ್ರದ ರೂಪದಲ್ಲಿ ಮತ್ತೊಂದು ಹೊಸ ನಕಲನ್ನು ಸಿದ್ಧಗೊಳಿಸಿದನು. ಪತ್ರವು ಪ್ರಜಾರಾಜ್ಯದ ಪಬ್ಲಿಕ್ ಪ್ರೊಸಿಕ್ಯೂಟರಿನ ಹೆಸರಿನಲ್ಲಿತ್ತು. ವಿರೋಧ ಪಕ್ಷ ಇದಿರಿನ ಬೇರೆ ಬೇರೆ ಮಾರ್ಗಗಳ ಅಡಿಗೆ ಗೆರೆಯನ್ನೆಳೆದು ಚರಮ ವಾಕ್ಯವನ್ನು ಈ ರೀತಿ ಬರೆದನು:

‘ಈ ಕೆಳಗೆ ಸಹಿ ಮಾಡಿದ ಪಾರ್ಟಿಯ ಕೇಂದ್ರ ಸಮಿತಿಯ ಸದಸ್ಯ, ಮಾಜಿ ಜನತಾಕಮಿಸ್ಸಾರ, ಕ್ರಾಂತಿಕಾರಿ ಸೇನೆಯ ದ್ವಿತೀಯ ದಳದ ಸೇನಾನಿ, ಜನತಾ ಶತ್ರುಗಳೊಡನೆ ನಿರ್ಭೀತಿಯಿಂದ ಹೋರಾಡಿದ ಪರಮ ವೀರ ಬಿರುದಾಂಕಿತನಾದ ನಿ. ಸ. ರುಬಷೊವ ಈ ಮೇಲೆ ಹೇಳಿದ ಕಾರಣಗಳಿಗಾಗಿ ತನ್ನ ವಿರೋಧಿ ಮನೋವೃತ್ತಿಯನ್ನು ಸಂಪೂರ್ಣವಾಗಿ ವಿಸರ್ಜಿಸುವುದಲ್ಲದೆ ಸಾರ್ವಜನಿಕವಾಗಿ ತನ್ನ ಈ ವರೆಗಿನ ತಪ್ಪುಗಳನ್ನು ಒಪ್ಪಿಕೊಳ್ಳಲು ನಿರ್ಣಯಿಸಿರುತ್ತಾನೆ.’

## ೩

ಐವನೊವನ ಹತ್ತಿರ ಇನ್ನೇನು ತನ್ನನ್ನು ಕರೆಯುಕೊಂಡು ಹೋದಾರೆಂದು ರುಬಷೊವ ಎರಡು ದಿನಗಳ ಕಾಲ ಎಣಿಸಬೇಕಾಯಿತು. ತನ್ನ ಶರಣಾಗತಿಯ ಪತ್ರವನ್ನು ಮುದಿ ಕಾವಲುಗಾರನ ಕೈಯಲ್ಲಿ ಕಳಿಸಿದ ದಿನವೇ—ಐವನೊವ ಕೊಟ್ಟ ಹದಿನೈದನೆಯ ದಿನವೇ—ಕರೆ ಬಂದೀತೆಂದು ರುಬಷೊವ ಭಾವಿಸಿದ್ದನು. ಆದರೆ ಹಾಗೇನೂ ಅವರು ರುಬಷೊವನ ವಿಷಯದಲ್ಲಿ ಅವಸರಪಡುವಂತೆ ಕಾಣಲಿಲ್ಲ. ಪ್ರಾಯಶಃ ಐವನೊವ ‘ಸಾಪೇಕ್ಷ ಪ್ರಬುದ್ಧತೆಯ ಸೂತ್ರ’ವನ್ನು ಅಧ್ಯಯನ ಮಾಡು

ತ್ತಿರಬಹುದು; ಅಥವಾ ಪತ್ರವನ್ನು ಮೇಲಿನ ವರ್ಗಗಳಿಗೆ ಕಳಿಸಿರಲೂ ಬಹುದು.

ಕೇಂದ್ರ ಸಮಿತಿಯ ಸಿದ್ಧಾಂತಿಕರ ನಡುವೆ ತನ್ನ ವಾದವು ಉಂಟುಮಾಡಬಹುದಾದ ಗೊಂದಲವನ್ನು ಊಹಿಸಿ ರುಬಷೊವಗೆ ನಗು ಬಂದಿತು. ಕ್ರಾಂತಿ ಪೂರ್ವದಲ್ಲಿಯೂ, ತದನಂತರ ಕೆಲ ವರ್ಷಗಳಲ್ಲಿಯೂ, ಅಂದರೆ ಹಳೆಯ ನಾಯಕನು ಜೀವಂತನಾಗಿರುವಷ್ಟು ಕಾಲ 'ಸಿದ್ಧಾಂತಿಕ'ರಿಗೂ 'ರಾಜಕೀಯಸ್ಥ'ರಿಗೂ ವ್ಯತ್ಯಾಸವಿರಲಿಲ್ಲ. ಕ್ರಾಂತಿಯ ತತ್ವಗಳ ಬಹಿರಂಗ ಚರ್ಚೆಯಿಂದ ಪ್ರತಿಯೊಂದು ರಾಜಕೀಯ ಕಾರ್ಯಕ್ರಮವೂ ನಿರ್ಧರಿಸಲ್ಪಡುತ್ತಿತ್ತು. ಯಾದವೀ ಯುದ್ಧದ ಸೈನಿಕ ಚಲನವಲನ, ರೈತರ ಪೈರಿನ ಎತ್ತುವಳಿ, ಭೂಮಿಯ ವಿಭಜನೆ–ವಿತರಣೆ, ಹೊಸ ನಾಣ್ಯದ ಚಲಾವಣೆ, ಕಾರ್ಖಾನೆಗಳ ಪುನಸ್ಸಂಘಟನೆ ಮುಂತಾದ ಎಲ್ಲ ಆಡಳಿತೆಯ ಕಾರ್ಯಭಾರಗಳನ್ನೂ ಕ್ರಾಂತಿಯ ಸೂತ್ರಗಳ ಅನ್ವಯದಿಂದಲೇ ನಿರ್ಣಯಿಸಲಾಗಿತ್ತು. ಐವನೊವನ ಕೊಠಡಿಯಲ್ಲಿ ಕುರ್ಚಿಯ ಮೇಲ್ಗಡೆ ತೂಗುತ್ತಿದ್ದ ಪಠದಲ್ಲಿನ ಪ್ರತಿಯೊಂದು ತಲೆಯೊಳಗೂ ಯುರೋಪಿನ ವಿಶ್ವವಿದ್ಯಾಲಯಗಳ ಮಹಾಮಹಾ ಪ್ರಾಚಾರ್ಯರಲ್ಲಿರವಷ್ಟು ನ್ಯಾಯಶಾಸ್ತ್ರ, ಅರ್ಥಶಾಸ್ತ್ರ ಮತ್ತು ರಾಜನೀತಿಶಾಸ್ತ್ರದ ತತ್ತ್ವಗಳು ತುಂಬಿಕೊಂಡಿದ್ದುವು. ಯಾದವೀಯುದ್ಧದ ಸಂದರ್ಭದಲ್ಲಿ ನಡೆದ ಪಾರ್ಟಿಸಮ್ಮೇಳನದ ಚರ್ಚೆಯನ್ನು ನೋಡಿದರೆ ಸಾಧಾರಣವಾಗಿ ವೈಜ್ಞಾನಿಕ ತ್ರೈಮಾಸಿಕಗಳಲ್ಲಿ ಕಾಣುವಂಥ ವರದಿಗಳಿಗೆ ಹೋಲಿಸಬಹುದಾಗಿತ್ತು. ಆದರೆ ಒಂದೇ ಒಂದು ವ್ಯತ್ಯಾಸ: ಪಾರ್ಟಿಸಮ್ಮೇಳನದ ಗಂಭೀರ ವರದಿಯ ಪರಿಣಾಮವೂ ಗಂಭೀರವೇ. ಲಕ್ಷಾಂತರ ಜನರ ಹುಟ್ಟು ಸಾವಿನ ಪ್ರಶ್ನೆಯೂ, ಕ್ರಾಂತಿಯ ಭವಿಷ್ಯವೂ ಈ ವರದಿಯನ್ನವಲಂಬಿಸಿದ್ದುವು.

ಈಗಂತೂ ಹಳೆಯ ಹುದ್ದರಿಗಳ ಕಾಲ ಮುಗಿಯಿತು; ಇತಿಹಾಸದ, ತರ್ಕದ ಆದೇಶದಂತೆ ಕ್ರಾಂತಿಯು ಉತ್ಪನ್ನಗೊಳಿಸಿದ ಅದ್ಭುತ ಚಲನಶಕ್ತಿಯು ಒಳಗಿಂದೊಳಗೆ ಕ್ರಾಂತಿಯನ್ನೇ ವಿಸ್ಫೋಟಗೊಳಿಸಬಾರದೆಂದು ಅಧಿಸತ್ತೆ ಭದ್ರವಾಗುತ್ತ ಬಂದಿತು, ಜತೆಯಲ್ಲಿ ಕಠಿನತೆಯನ್ನೂ

ವೈಗೂಡಿಸಿಕೊಂಡಿತು. ತಾತ್ವಿಕ ಚರ್ಚೆಗಳ ಸಮ್ಮೇಳನದ ಕಾಲ ಮುಗಿದಿದೆ; ಹಳೆಯ ಚಿತ್ರದ ಸ್ಥಾನದಲ್ಲಿ ಅದನ್ನಿಟ್ಟ ಕಲೆಯೊಂದೇ ಉಳಿದಿದೆ; ತಾತ್ವಿಕ ಅಗ್ನಿಸ್ಫೋಟನದ ಯುಗವು ಹೊರಳಿ, ಆರೋಗ್ಯಕರವಾದ ನಿರ್ವೀರ್ಯತೆಯ ಯುಗವು ಆರಂಭವಾಗಿದೆ. ಒಂದನೆಯ ನಂಬರಿನವನ ಪೌರೋಹಿತ್ಯದಲ್ಲಿ ಕ್ರಾಂತಿಸೂತ್ರಗಳು ಹೆಪ್ಪುಗಟ್ಟಿ ಕುರುಡು ಸಂಪ್ರದಾಯದಲ್ಲಿ ಪರಿಣತವಾಗಿವೆ. ಅವನ ಉಪನ್ಯಾಸಗಳಾಗಲಿ ಲೇಖನಗಳಾಗಲಿ ಅವುಗಳ ಶೈಲಿಯಲ್ಲೇ ನಿರ್ದೋಷವಾದ ಧರ್ಮಸೂತ್ರಗಳನ್ನು ಹೋಲುತ್ತಿವೆ; ನಿಮ್ಮ ಪ್ರಶ್ನೆಗೆ ನಮ್ಮ ಉತ್ತರದಷ್ಟು ಸುಲಭದರ್ಜೆಗೆ ಕ್ರಾಂತಿಯ ತತ್ವಗಳನ್ನು ಅವನು ಇಳಿಸಿಬಿಟ್ಟಿದ್ದಾನೆ. 'ಸಾಪೇಕ್ಷ ಪ್ರಬುದ್ಧತೆಯ ಸೂತ್ರ'ವನ್ನು ಜನತೆಗನ್ವಯಿಸುವುದರಲ್ಲಿ ಒಂದನೇ ನಂಬರಿನವನು ಬಲು ಜಾಣನೆಂದು ಕಾಣುತ್ತದೆ. ಹಿಂದಿನ ಕಾಲದ ನಿರಂಕುಶ ಪ್ರಭುಗಳು ಜನರು ಅಪ್ಪಣೆ ಪ್ರಕಾರ ಆಚರಿಸುವಂತೆ ಮಾಡಿದರೆ ಒಂದನೆಯ ನಂಬರಿನವನು ಜನರು ಅಪ್ಪಣೆಪ್ರಕಾರ ಯೋಚಿಸುವಂತೆಯೂ ಮಾಡಬಲ್ಲ.

ಪಾರ್ಟಿಯ ಪ್ರಸ್ತುತ ಸಿದ್ಧಾಂತಿಕರು ತನ್ನ ಸಾಪೇಕ್ಷ ಸೂತ್ರವನ್ನು ಹೇಗೆ ಸ್ವಾಗತಿಸುವರೆಂಬುದನ್ನು ಯೋಚಿಸಿ ರುಬಷೊವ ಮತ್ತೊಮ್ಮೆ ನಕ್ಕನು. ಸದ್ಯದ ವಾಸ್ತವ ಪರಿಸ್ಥಿತಿಯಲ್ಲಿ ತನ್ನ ಬರವಣಿಗೆಯಷ್ಟು ದೊಡ್ಡ ಅಚಾತುರ್ಯ, ನಾಸ್ತಿಕ ವಸ್ತು ಬೇರೇನೂ ಇರಲಾರದು; ಸಂಪ್ರದಾಯದ ಆಚಾರ್ಯರನ್ನು ನಿರ್ದಾಕ್ಷಿಣ್ಯವಾಗಿ ಅವರಲ್ಲಿ ವಿಮರ್ಶಿಸಲಾಗಿತ್ತು; ಒಂದನೆಯ ನಂಬರಿನವನಿಗೂ ಬಿಟ್ಟಿರಲಿಲ್ಲ—ಅವನನ್ನು ಐತಿಹಾಸಿಕ ಹಿನ್ನೆಲೆಯಲ್ಲಿಟ್ಟು ಅವನ ಸರಿಯಾದ ಪ್ರಮಾಣಕ್ಕೆ ಇಳಿಸಲಾಗಿತ್ತು. ಒಂದನೆಯ ನಂಬರಿನವನು ಕುಪ್ಪಳಿಸಿದ ಕೂಡಲೇ ಇದೊಂದು ತತ್ವದರ್ಶನವೆಂದು ವ್ಯಾಖ್ಯಾನ ಮಾಡುವ ಸೂತ್ರಕಾರರು ರುಬಷೊವನ ಸಾಪೇಕ್ಷ ಸೂತ್ರವನ್ನೋದಿದೊಡನೆ ಹೌಹಾರಿ ಹೋಗುವುದು ಮಾತ್ರವಲ್ಲದೆ ಹೊಟ್ಟೆ ನೋವಿನಿಂದ ನರಳಬೇಕೆಂದೂ ರುಬಷೊವನ ಊಹೆಯಾಗಿತ್ತು.

ಒಂದನೆಯ ನಂಬರಿನವನು ಪಾರ್ಟಿಯ ಸೂತ್ರಧಾರರನ್ನು ಒಮ್ಮೊಮ್ಮೆ ವಿಚಿತ್ರವಾಗಿ ಪೀಡಿಸುವುದಿತ್ತು. ಒಮ್ಮೆ ಆತ ಅಮೇರಿಕದ ಔದ್ಯಮಿಕ ಉತ್ಕಟ ಕಾಲದ ಕುರಿತು ಪಾರ್ಟಿಯ ಆರ್ಥಿಕ ಮುಖಪತ್ರದ ಸಂಪಾದಕ ಮಂಡಳಿಯವರು ಒಂದು ವಿಶ್ಲೇಷಣೆಯನ್ನು ತಯಾರಿಸಬೇಕೆಂದು ಆಜ್ಞೆ ಇತ್ತನು. ಸಂಪಾದಕ ಮಂಡಳಿಯ ಆರ್ಥಿಕ ತಜ್ಞರು ತಿಂಗಳುಗಟ್ಟಲೆ ಪರಿಶ್ರಮಿಸಿದರು; ಒಂದನೆಯ ನಂಬರಿನವನು ಕಳೆದ ಪಾರ್ಟಿ ಕಾಂಗ್ರೆಸ್ಸಿಗೆ ದಯಪಾಲಿಸಿದ ಸಿದ್ಧಾಂತಗಳ ಆಧಾರದ ಮೇಲೆ ಅಮೇರಿಕದ ಔದ್ಯೋಗಿಕ ಅಭಿವೃದ್ಧಿಯು ಕೇವಲ ತೋರಿಕೆಯ ಅಭಿವೃದ್ಧಿ ಎಂದೂ, ವಸ್ತುತಃ ಅಮೇರಿಕವು ಮಂದಿಯ ಅತಿನಿಮ್ನ ಹಂತದಲ್ಲಿ ನವೆಯುತ್ತ ಕ್ರಾಂತಿಯ ಆಗಮನವನ್ನು ಹಾರೈಸುತ್ತಿದೆಯೆಂದೂ ತಜ್ಞರು ಪ್ರಯಾಸಪಟ್ಟು ತೀರ್ಮಾನಿಸಿ ಮುಖಪತ್ರದ ವಿಶೇಷ ಸಂಚಿಕೆಯೊಂದನ್ನು ಹೊರಡಿಸಿದರು. ಈ ವಿಶೇಷ ಸಂಚಿಕೆಯು ಹೊರಟ ದಿನವೇ ಒಂದನೆಯ ನಂಬರಿನವನು ಅಮೇರಿಕನ್ ಪತ್ರಿಕೋದ್ಯಮಿಯೊಬ್ಬನಿಗೆ ಇತ್ತ ಸಂದರ್ಶನದಲ್ಲಿ 'ಅಮೇರಿಕದಲ್ಲಿ ಆರ್ಥಿಕ ಮುಗ್ಗಟ್ಟು ಕೊನೆಯಾಗಿ ವ್ಯಾಪಾರ ವಹಿವಾಟು ಸುಧಾರಿಸಿಕೊಂಡಿದೆ' ಎಂದು ನಿರುದ್ವೇಗದಿಂದ ಹೇಳಿದನಂತೆ.

ಅಚ್ಚ ಹೊಸದಾದ ಈ ಹೇಳಿಕೆಯಿಂದ ಆರ್ಥಿಕ ತಜ್ಞರ ಎದೆಹಾರಿಹೋಯಿತು. ಇನ್ನೇನು ತಮ್ಮನ್ನು ಕೆಲಸದಿಂದ ತೆಗೆದು ಹಾಕುವನೋ ಅಥವಾ ಕಾರಾಗೃಹಕ್ಕೆ ಸೇರಿಸುವನೋ ಎಂಬುದನ್ನು ನಿರ್ಣಯಿಸಲಾರದೆ ಅದೇ ರಾತ್ರಿ 'ಕ್ರಾಂತಿ ವಿರುದ್ಧವಾದ ಮತ್ತು ಜನತೆಯನ್ನು ದುರ್ಮಾರ್ಗಕ್ಕೆಳೆಯುವ ಆರ್ಥಿಕ ವಿಶ್ಲೇಷಣೆಯ ದೆಸೆಯಿಂದಾಗಿ ತಮ್ಮಿಂದ ಮಹಾಪರಾಧವಾಗಿರುವುದು ನಿಜವೆಂದೂ, ಅದಕ್ಕೋಸ್ಕರ ತಾವು ಪಶ್ಚಾತ್ತಾಪಪಟ್ಟು, ಬೇಕಿದ್ದರೆ ಬಹಿರಂಗವಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಸಿದ್ಧರಾಗಿರುವುದಾಗಿಯೂ ವಾಗ್ದಾನ ಮಾಡುವ ಪತ್ರಗಳನ್ನು ಅವರು ಬರೆದು ಕಳಿಸಿದರು. ರುಬಷೋವನ ಸಮಕಾಲೀನನೂ, ಹಳೆ ಹುದ್ದರಿಗಳ ಪೈಕಿ ಒಬ್ಬನೂ ಆದ ಇಸಕೋವಿಚ್ ಮಾತ್ರ ಗುಂಡಿಕ್ಕಿಕೊಂಡು ಸತ್ತನು.

ಪಾರ್ಟಿಯ ಒಳವರ್ಗಗಳು ಆ ಮೇಲೆ ಇಡಿ ನಾಟಕವೇ ಇಸಕೊವಿಚ್‌ನ ವಿನಾಶಕ್ಕಾಗಿ ಏರ್ಪಡಿಸಲಾಗಿತ್ತೆಂದು ಹೇಳುತ್ತಿದ್ದರು.

ಒಂದನೆಯ ನಂಬರಿನವನ ದಿಗ್ದರ್ಶನದಲ್ಲಿ ನಡೆಯುವ ಸರ್ವಾಧಿಕಾರಿ ಆಧಿಪತ್ಯವು ಭಾರೀ ಭೀಕರವಾದ ಒಂದು ಪ್ರಹಸನವೆಂದು ರುಬಷೊವನ ಮತ. ಪ್ರಹಸನವನ್ನು ನಿಜವೆಂದು ಬಗೆದು, ರಂಗಭೂಮಿಯ ಮೇಲೆ ನಡೆಯುವುದಷ್ಟೇ ಸತ್ಯವೆಂದು ತಿಳಿಯುವ ಮೂರ್ಖನಿಗೆ ಕೇಡು ಕಟ್ಟಿಟ್ಟದ್ದು. ಕ್ರಾಂತಿಕಾರಿ ಧೋರಣೆಗಳು ಈಗ ಬಹಿರಂಗ ಅಧಿವೇಶನಗಳಲ್ಲಲ್ಲ, ಅಂತರಂಗದಲ್ಲಿ, ನೇಪಥ್ಯದಲ್ಲಿ ನಿರ್ಣೀತವಾಗುವುವು ಎಂಬುದನ್ನೂ, ಹೀಗಾಗಬೇಕಾದ್ದು ಜನತೆಯ ಸಾಪೇಕ್ಷ ಪ್ರಬುದ್ಧತೆಯ ಅನಿವಾರ್ಯ ಪರಿಣಾಮವೆಂಬುದನ್ನೂ, ತಿಳಿಯದವರು ಮಂಕರೇ ಸರಿ.

ಸಮಯ ಸಿಕ್ಕಿದರೆ ತನ್ನ ಹೊಸ ಸಾಪೇಕ್ಷ ಸಿದ್ಧಾಂತವನ್ನೂ ಪುಸ್ತಕ ಭಂಡಾರದ ಹಸುರು ದೀಪದ ಕೆಳಗೆ ಹಲಗಾಲ ಪರಿಶ್ರಮಿಸಿ ಐತಿಹಾಸಿಕ ಪುರಾವೆಗಳನ್ನೊದಗಿಸಿ ವಿಸ್ತರಿಸಬೇಕೆಂದು ರುಬಷೊವಗೆ ಅದೇಕೋ ಆಸೆಯಾಗುತ್ತಿತ್ತು. ಕ್ರಾಂತಿ ಸೂತ್ರಗಳಿಗೆ ವಿದೇಶಕ್ಕೆ ಗಡಿಪಾರು ಮಾಡಿದ ಕಾಲವೇ ಪ್ರಶಸ್ತವಾದುದೆಂದು ರುಬಷೊವನ ಅಭಿಪ್ರಾಯವಾಗಿತ್ತು. ತನ್ನ ಬಹಿರಂಗ ಪ್ರಾಯಶ್ಚಿತ್ತದ ದೆಸೆಯಿಂದ ತನಗೆ ಈ ಬರವಣಿಗೆಯ ಸಮಯಾವಕಾಶ ಸಿಕ್ಕಿದರೆ ಚೆನ್ನಾಗಿತ್ತಲ್ಲವೆ ಎಂದು ರುಬಷೊವ ಕೋಣೆಯೊಳಗೆ ಶತಪಥ ತುಳಿಯುತ್ತ ಯೋಚಿಸಿದನು. ಶರಣಾಗತಿಯ ಬಾಹ್ಯರೂಪವು ಅಷ್ಟೊಂದು ಮಹತ್ವದ್ದಲ್ಲ. ಅದೊಂದು ಶಾಸ್ತ್ರವಿಧಿ; ಒಂದನೆಯ ನಂಬರಿನವನ ಉನ್ನತಿಗೆ ಇಂಥವು ಅನಿವಾರ್ಯ; ಅದೊಂದು ಮರಳಿಮರಳಿ ಪತ್ರಿಕೆಗಳ ಜಾಗ ತುಂಬುವ ಶಿಷ್ಟಾಚಾರ; ಸರಿಯಾದ ದಾರಿ ಭಂಗಾರದ ವರ್ಣದಲ್ಲಿ ಥಳಥಳಿಸಬೇಕು, ಕಪ್ಪಾದ್ದು ಇದ್ದಲಿನಷ್ಟು ಕಪ್ಪಗಿದ್ದು ಹೇಸಿಕೆ ಎನಿಸಬೇಕು; ಸಂತೆಯ ತಿಂಡಿಯಂತೆ ರಾಜಕೀಯ ಹೇಳಿಕೆಗಳಿಗೂ ಕಡುಬಣ್ಣಗಳನ್ನೇ ಬಳಿಯಬೇಕು.

ಇದೆಲ್ಲ ೪೦೨ನೆಯ ನಂಬರಿನ ಕೈದಿಗೆ ಹೇಗೆ ಗೊತ್ತಾದೀತು? ಅವನ ಮರ್ಯಾದೆಯ ಸಂಕುಚಿತ ಅರ್ಥವು ಹಿಂದಿನ ಯುಗದ ಕಲ್ಪನೆ.

ಶೀಲವೆಂದರೇನು? ನಿಯಮಬದ್ಧವಾದ, ಸೀಮಿತವಾದ ವ್ಯವಹಾರ, ಏನೋ ಒಂದು ಸಂಪ್ರದಾಯ. ಮರ್ಯಾದೆಯು ಹೊಸ ಅರ್ಥದಲ್ಲಿ ಗರ್ವ ರಹಿತ ಸೇವೆಗೂ, ಪ್ರಭಾವಶಾಲಿ ಪ್ರಯೋಜನಕ್ಕೂ ಆಸ್ಪದವಿರತಕ್ಕದು.

'ಮರ್ಯಾದೆ ಕಳೆದುಕೊಳ್ಳುವುದಕ್ಕಿಂತ ಸಾಯುವುದು ಲೇಸು' ಎಂದು ಹೇಳಿ ೪೦೨ ಮೀಸೆ ಹುರಿಮಾಡಿಕೊಂಡಿರಬಹುದು. ವೈಯ ಕ್ತಿಕ ಅಹಂಕಾರದ ನಿಷ್ಕೃಷ್ಟ ಉದಾಹರಣೆ ಎಂದರೆ ಇದೇ. ತನಗಿ ನ್ನೇನೂ ಬೇಡ–ಪುಸ್ತಕ ಭಂಡಾರ, ಹಸುರು ದೀಪ ಇಷ್ಟೇ ಸಾಕೆಂದು ರುಬಷೊವ ನಿರ್ಣಯಿಸಿದನು. ತನ್ನ ವಿಚಾರಗಳನ್ನು ವಿಸ್ತರಿಸಿದರೆ ಅದು ಬಹುದೊಡ್ಡ ಉದ್ಗ್ರಂಥವಾಗುವುದೆಂದೂ, ಅದರಲ್ಲಿ ಪ್ರಜಾತಂತ್ರಾ ತ್ಮಕ ಸಂಸ್ಥೆಗಳನ್ನು ಅರ್ಥವಿಸಿಕೊಳ್ಳುವ ರಹಸ್ಯವು ಪ್ರಕಟವಾಗುವು ದೆಂದೂ, ಜನತೆಯ ಮನೋವಿಜ್ಞಾನದ ಲೋಲಕಗತಿಯ ಮೇಲೆ ವಿಶೇಷ ಪ್ರಕಾಶ ಬೀಳುವುದೆಂದೂ, ಅಲ್ಲದೆ ವರ್ಗಕಲಹದ ಸಿದ್ಧಾಂತವು ವಿವರಿಸದೆ ಬಿಟ್ಟ ಅಂಶಗಳನ್ನು ತನ್ನ ಸೂತ್ರಗಳು ವಿವರಿಸಬಲ್ಲುವೆಂದೂ ರುಬಷೊವನ ಮನಸ್ಸಿಗೆ ದೃಢವಾದ ನಂಬಿಕೆಯುಂಟಾಯಿತು.

ರುಬಷೊವ ನಗುತ್ತಿದ್ದನು. ಸಿದ್ಧಾಂತದ ವಿಸ್ತಾರಕ್ಕೆ ತಕ್ಕಷ್ಟು ಸಮಯ ಸಿಕ್ಕಿದರೆ ಅವನಿಗೆ ಬೇರಾವ ಚಿಂತೆಯೂ ಇರಲಿಲ್ಲ. ಹಲ್ಲು ನೋವು ಮಾಯವಾಗಿತ್ತು. ಅವನ ವ್ಯಕ್ತಿತ್ವವು ಸಂಪೂರ್ಣವಾಗಿ ಜಾಗೃತವಾಗಿತ್ತು. ಒಂದು ವಿಧವಾದ ಅಸಹನೆ, ಏನನ್ನಾದರೂ ಮಾಡ ಬೇಕೆಂಬ ಕಾತರ ಅವನಲ್ಲಿ ತುಂಬಿತ್ತು. ಎರಡು ದಿನಗಳಾದರೂ ಐವ ನೊವನ ಕಡೆಯಿಂದ ಸುದ್ದಿ ಇಲ್ಲ. ಸಮಯ ಕಳೆಯುವುದೇ ಕಷ್ಟವಾ ಗಿತ್ತು. ಗಂಟೆಯು ಮಿನಿಟಾಗಿ, ಮಿನಿಟು ಸೆಕೆಂಡಾಗಿ ಕಾಡಿಸುತ್ತಿತ್ತು. ಚಾರಿತ್ರಿಕ ಗ್ರಂಥಗಳ ಆಧಾರವಿಲ್ಲದೆ ಅವನ ಸೂತ್ರಗಳ ವಿಸ್ತಾರ ಮುಂದುವರಿಯದು. ಬಾಗಿಲ ತೂತಿನ ಬಳಿ ಕಾಲುತಾಸು ನಿಂತು ಇಣಿಕಿದರೂ ಐವನೊವನ ಹತ್ತಿರ ಕರೆದುಕೊಂಡು ಹೋಗುವ ಕಾವ ಲುಗಾರನು ಬರುವ ಚಿಹ್ನೆ ಇರಲಿಲ್ಲ. ನಡವೆಯು ನಿರ್ಜನವಾಗಿತ್ತು, ಹಳದಿ ದೀಪವು ಎಂದಿನಂತೆ ಕುರುಡು ಕುರುಡಾಗಿ ಉರಿಯುತಿತ್ತು.

ಐವನೊವನೇ ಸ್ವತಃ ಬಂದು ತನ್ನ ಕೋಣೆಯಲ್ಲೇ ಎಲ್ಲವೂ ತೀರ್ಮಾನವಾಗಬಹುದೇನೋ ಎಂದು ರುಬಷೊವಗೆ ಒಮ್ಮೊಮ್ಮೆ ಅನಿಸುವುದು. ಹಾಗಾದರೆ ಚೆನ್ನಾಗಿರುತ್ತಿತ್ತಲ್ಲವೆ? ಈ ಸಾರಿ ಬ್ರಾಂಡಿ ಕೊಟ್ಟರೆ ಬಿಡಬಾರದು ಎಂದುಕೊಂಡ ರುಬಷೊವ. ತಮ್ಮಿಬ್ಬರೊಳಗೆ ನಡೆಯಬಹುದಾದ ಸಂಭಾಷಣೆ, ಬಹಿರಂಗ ಹೇಳಿಕೆಯನ್ನು ಜತೆಯಾಗಿ ಬರೆಯುವಾಗ ಐವನೊವನ ವಿನೋದಪೂರ್ಣ ಟೀಕೆಗಳು, ಎಲ್ಲವನ್ನೂ ರುಬಷೊವ ವಿವರ ವಿವರವಾಗಿ ತನ್ನ ಕಣ್ಣಮುಂದೆ ಚಿತ್ರಿಸಿಕೊಂಡನು. ನಗುನಗುತ್ತ ರುಬಷೊವ ಕೋಣೆಯಲ್ಲಿ ಶತಪಥ ತುಳಿಯುತ್ತಿದ್ದನು; ಹತ್ತು ಮಿನಿಟಗೊಮ್ಮೆ ವಾಚನ್ನು ನೋಡಿಕೊಳ್ಳುವನು. ಮರುದಿನವೇ ಕರೆಸಿಕೊಳ್ಳುತ್ತೇನೆ ಎಂದ ಐವನೊವ ಇನ್ನೂ ಏಕೆ ಬರಲಿಲ್ಲ?

ರುಬಷೊವಗೆ ತಾಳ್ಮೆ ಕೆಡಲಾರಂಭವಾಯಿತು. ಐವನೊವ ನೊಡನೆ ಸಂಭಾಷಿಸಿದ ಮೇಲಿನ ಮೂರನೆಯ ರಾತ್ರಿ ಆತನ ಕಣ್ಣಿಗೆ ನಿದ್ದೆ ಹತ್ತಲೊಲ್ಲದು. ಮಗ್ಗುಲಿಂದ ಮಗ್ಗುಲಿಗೆ ಎಷ್ಟು ಹೊರಳಿದರೂ, ಹೊರಗಿನ ನೀರವತೆ ಭಂಗವಾಗುತ್ತಿರಲಿಲ್ಲ. ಸೆರೆಮನೆಗೆ ಬಂದ ಮೇಲೆ ಮೊದಲ ಬಾರಿಗೆ ರುಬಷೊವಗೆ ಹತ್ತಿರದಲ್ಲಿ ಯಾರಾದರೂ ಹೆಂಗಸಿದ್ದರೆ ಚೆನ್ನಾಗಿತ್ತೆಂದು ಅನಿಸಿತು. ಕ್ರಮಪ್ರಕಾರ ಉಸಿರಾಡಿದರೆ ನಿದ್ದೆ ಬಂದೀ ತೇನೋ ಎಂದು ಆ ವ್ಯಾಯಾಮವನ್ನು ಮಾಡಿ ನೋಡಿದನು. ಇಲ್ಲ. ೪೦೨ರವನ ಹತ್ತಿರ ಶೀಲದ ಪ್ರಶ್ನೆ ಬಂದ ಮೇಲೆ ಮಾತಾಡಿರಲಿಲ್ಲ. ಮಾತಾಡಲೇ ಎಂದು ಹೊಯ್ದಾಡಿದನು.

ನಿದ್ದೆ ಬರದೆ ಮೂರು ತಾಸುಗಳು ಕಳೆದ ತರುವಾಯ ಅಂದರೆ ಮಧ್ಯ ರಾತ್ರಿಯ ಸಮಯ ರುಬಷೊವ ಮೊಣಗಂಟಿನಿಂದ ೪೦೨ರ ಗೋಡೆಗೆ ಬಡೆದನು, ಉತ್ತರವಿಲ್ಲ. ತುಸು ತಡೆದು ಮತ್ತೊಮ್ಮೆ ಬಡೆ ದಾಗಲೂ ಉತ್ತರ ಬರಲಿಲ್ಲ. ೪೦೨ರವನು ತನಗೆ ನಿದ್ದೆಯೇ ಬೇಕುವು ದಿಲ್ಲವೆಂದೂ ಚಿಕ್ಕಂದಿನ ಹವ್ಯಾಸಗಳಲ್ಲಿ ತಾನು ಮುಂಜಾವಿನ ವರೆಗೆ ಕಾಲ ಕಳೆಯುತ್ತಿರುವುದಾಗಿಯೂ ಹೇಳಿದ್ದನಲ್ಲವೆ? ಆದರೂ ಏಕೆ ಉತ್ತ ರಿಸುವುದಿಲ್ಲ?

ರುಬಷೊವ ಬೆನ್ನ ಮೇಲೆ ಮಲಗಿ ಕತ್ತಲನ್ನೇ ದಿಟ್ಟಿಸಿದನು. ಅವನ ದೇಹವಡಿಯಲ್ಲಿ ಹಾಸಿಗೆ ಕೆಳಗೆ ತಗ್ಗಿತ್ತು. ಕಂಬಳಿಯನ್ನು ತೆಗೆದು ಎಸೆದರೆ ಚಳಿಯಾಗುತಿತ್ತು. ಏಳೆಂಟು ಸಿಗರೇಟಿನ ತುಣುಕು ಸುತ್ತು ಮುತ್ತಲೂ ಬಿದ್ದಿದ್ದುವು; ಕೈಯಲ್ಲಿರುವುದು ಎಂಟನೆಯ ಸಿಗ ರೇಟಿರಬೇಕು. ಎಲ್ಲ ಶಬ್ದವೂ ಅಡಗಿತ್ತು, ಸಮಯವು ಒಂಟಿಕಾಲ ಮೇಲೆ ನಿಂತು ಧ್ಯಾನಿಸುತ್ತಿತ್ತು; ಅದು ರೂಪಿಲ್ಲದ ಅಂಧಕಾರದಲ್ಲಿ ವಿಲೀನ ವಾಗಿತ್ತು. ರುಬಷೊವ ಕಣ್ಣು ಮುಚ್ಚಿ ತನ್ನ ಬಳಿ ಅರ್ಲೋವಾ ಮಲ ಗಿರುವಳೆಂದೂ ಅವಳ ಸ್ತನಗಳ ಆಕಾರ ಅಂಧಕಾರದಲ್ಲಿಯೂ ತೋರು ತ್ತಿತ್ತೆಂದೂ ಊಹಿಸತೊಡಗಿದನು. ಬೊಗ್ರೊವನ ಹಾಗೆ ಆಕೆಯನ್ನು ನಡವೆಯಲ್ಲಿ ಎಳೆದುಕೊಂಡು ಒಯ್ದಿರಬೇಕೆನ್ನುವ ಪ್ರಸಂಗ ಅವನಿಗೀಗ ಮರೆತು ಹೋಗಿತ್ತು. ಮೌನವು ಅಸಹನೀಯವಾಗಿ ಭಾರದಿಂದ ಅತ್ತಿತ್ತ ಜೋಕಾಲಿಯಾಡುವಂತೆ ಅನಿಸಿತು. ಸೆರೆಮನೆಯ ಕೋಣೆಗಳಲ್ಲಿ ಜೀವಿ ಸುವ ಎರಡು ಸಾವಿರ ಮನುಷ್ಯ ಜೀವಿಗಳು ಏನು ಮಾಡುತ್ತಿದ್ದಾರೋ? ಕೇಳಿಸದ ಅವರ ಶ್ವಾಸೋಚ್ಛ್ವಾಸದಿಂದಲೂ, ಕಾಣದ ಅವರ ಕನಸು ಗಳಿಂದಲೂ, ಅನುಭವಿಸಲಾಗದ ಉತ್ಕಟ ಭೀತಿ ಮತ್ತು ತೃಷ್ಣೆಗಳಿಂದಲೂ ಹೊರಗಿನ ಮೌನಾಂಧಕಾರವು ಮೋಹರಿಸುವಂತೆ ಅನಿಸುತಿತ್ತು. ಇತಿ ಹಾಸದ ಗುಣಾಕಾರದಲ್ಲಿ ಎರಡು ಸಾವಿರ ಭ್ರಮೆಗಳ ಅಥವಾ ಎರಡು ಸಾವಿರ ಆಕಾಂಕ್ಷೆಗಳ ಒತ್ತಡ ಅಥವಾ ಗುಣಲಬ್ಧ ವೆಷ್ಟಾಗಬಹುದೋ? ಅರ್ಲೋವಳ ದೇಹಗಂಧವು ರುಬಷೊವನ ಮೂಗಿಗೆ ಬಡಿದಾಗ ಆತ ಇನ್ನೂ ಗುಣಲಬ್ಧವನ್ನು ಕಂಡುಹಿಡಿದಿರಲಿಲ್ಲ. ಕಂಬಳಿಯು ಬೆವರಿಂದ ಒದ್ದೆಯಾಗಿತ್ತು. ಕೋಣೆಯ ಬಾಗಿಲು ಒಮ್ಮೆಲೆ ತೆರೆದು ಹೊರಗಿನ ಬೆಳಕು ಕೋರೈಸುವಂತೆ ಆತನ ಕಣ್ಣುಗಳ ಮೇಲೆ ಬಿದ್ದಿತು.

ಇಬ್ಬರು ಸಮವಸ್ತ್ರಧಾರಿಗಳಾದ ಅಧಿಕಾರಿಗಳು ಒಳಗೆ ಪ್ರವೇಶಿಸಿ ದರು. ಅವರಲ್ಲಿ ಒಬ್ಬನು ಕರ್ಕಶಸ್ವರದಲ್ಲಿ 'ನಮ್ಮ ಜತೆ ಹೊರಡು' ಎಂದನು. ಎಲ್ಲಿಗೆಂದು ತಿಳಿಸಲಿಲ್ಲ.

ರುಬಷೊವ ಮಾತನಾಡದೆ ತನ್ನ ಕನ್ನಡಕವನ್ನು ಹುಡುಕಿ ಹಾಕಿಕೊಂಡು ಅವರ ಹಿಂದೆ ನಡೆದನು. ರಿವಾಲ್ವರ್ ಸಹಿತರಾದ ಆ

ಸಿಪಾಯಿಗಳ ಆಜಾನುಬಾಹು ಶರೀರದ ನಡುವೆ ರುಬಷೊವ ಚಿಕ್ಕವನಾಗಿ ಕಾಣಿಸುತ್ತಿದ್ದನು.

ವಾಚು ನೋಡಿದರೆ ರಾತ್ರಿ ಎರಡು ತಾಸಾಗಿತ್ತು. ಕ್ಷೌರಿಕನ ಅಂಗಡಿಯ ದಾರಿಯಾಗಿಯೇ ಬೊಗ್ರೊವನನ್ನೊಯ್ದ ದಾರಿಯಲ್ಲಿ ಅವರು ಹೋಗುತ್ತಿದ್ದರು. ಎರಡನೆಯ ಸಮವಸ್ತ್ರಧಾರಿ ರುಬಷೊವಗೆ ಮೂರು ಹೆಜ್ಜೆ ಹಿಂದಿನಿಂದ ಬರುತ್ತಿದ್ದನು. ರುಬಷೊವಗೆ ತಲೆ ತಿರುಗಿಸಿ ಅವನನ್ನೊಮ್ಮೆ ನೋಡಬೇಕೆಂದು ಆಸೆಯಾಯಿತು. ಕತ್ತಿನ ಹಿಂಭಾಗದಲ್ಲಿ ತುರಿಕೆ ಏಳುತ್ತಿತ್ತು. ಏನು, ಇಷ್ಟು ಬೇಗನೆ ಕಥೆ ಮುಗಿಸುತ್ತಾರೋ? ಇಲ್ಲ, ನನ್ನ ಮಟ್ಟಿಗೆ ಮುಗಿಸಲಿಕ್ಕಿಲ್ಲ, ಎಂದು ತನ್ನನ್ನು ತಾನೇ ಸಂತವಿಸಿಕೊಂಡನು. ಆದರೆ ಪೂರ್ಣ ಸಮಾಧಾನ ಉಂಟಾಗಲೊಲ್ಲದು. ತಾನು ಅಂಜಿದೆನೇ ಎಂದು ಅವನಿಗೆ ತಿಳಿಯಬೇಕಾಗಿತ್ತು; ಅಂಜಲಿಲ್ಲ, ಆದರೆ ಕತ್ತು ತಿರುಗಿಸಿ ಒಮ್ಮೆ ಹಿಂದೆ ನೋಡುವ ಕುತೂಹಲದಿಂದಾಗಿ ಏನೋ ವೇದನೆಯ ಅನುಭವವಾಗುತಿತ್ತು.

ಕ್ಷೌರಿಕನ ಕೊಠಡಿಯನ್ನು ದಾಟಿದ ಕೂಡಲೇ ಕೆಳಗಿಳಿಯುವ ಮೆಟ್ಟಲೊಂದು ನಡವೆಯ ಪಕ್ಕದಲ್ಲಿ ಕಾಣಸಿಕ್ಕಿತು. ಮುಂದಿನ ಆಜಾನುಬಾಹು ಹೆಜ್ಜೆಯ ವೇಗವನ್ನು ಕಮ್ಮಿಮಾಡದೆ ಮುಂದುವರಿದನು. ಆದರೂ ಮೆಟ್ಟಲುಗಳ ಸಂದಿ ದಾಟಿದ ಮೇಲೆ ರುಬಷೊವನ ಕಾಲು ನಡುಗುತ್ತಿತ್ತು. ಅದೇ ಸಮಯ ಕನ್ನಡಕವನ್ನು ತಾನು ತೋಳಿಗೆ ಉಜ್ಜುತ್ತಿರುವುದನ್ನು ರುಬಷೊವ ಗಮನಿಸಿದನು. ಅದನ್ನು ತಾನು ಯಾವಾಗ ಕೈಯಲ್ಲಿ ಹಿಡಿದೆನೆಂದು ಅವನಿಗೆ ನಿರ್ಣಯಿಸಲಾಗಲಿಲ್ಲ, ಕ್ಷೌರಿಕನ ಕೊಠಡಿ ಬರುವ ಮೊದಲೇ ಇರಬೇಕು. ಹೊರಗಿನ ತೋರಿಕೆಗೆ ನಮ್ಮನ್ನು ನಾವೇ ಮೋಸಮಾಡಿಕೊಳ್ಳಬಹುದು; ಆದರೆ ಒಳಗಿನ ಭೀತಿ ಇದ್ದೇ ಇರುತ್ತದೆ. ಈಗ ಇವರು ನನ್ನನ್ನು ಹೊಡೆದು ಬಡಿಯುವುದಾದರೆ !ನಾನು ಯಾವ ಹೇಳಿಕೆಗೂ ಸಹಿ ಕೊಟ್ಟೇನು, ಆ ಮೇಲೆ ಹಿಂದೆ ತೆಗೆದುಕೊಂಡರಾಯಿತು........

ಸ್ವಲ್ಪ ದೂರ ಹೋದ ಮೇಲೆ ರುಬಷೊವಗೆ 'ಸಾಪೇಕ್ಷ ಪ್ರಬುದ್ಧತೆ'ಯ ನೆನಪಾಯಿತು. ಹೌದು ಹೇಗೂ ಶರಣುಬರುವ

ನಿರ್ಧಾರ ತಾನು ಮಾಡಿ ಆಗಿರುವುದಲ್ಲ? ಇನ್ನೇನಂಜಿಕೆ? ಎಂದು ಕೊಂಡನು. ಅಲ್ಲದೆ ಈ ನಿರ್ಣಯವು ಇಷ್ಟುಹೊತ್ತು ಹೇಗೆ ಮರೆತು ಹೋಯಿತೆಂದು ಅವನಿಗೆ ಆಶ್ಚರ್ಯವಾಯಿತು. ಆಜಾನುಬಾಹು ಒಂದು ಬಾಗಿಲನ್ನು ತೆರೆದು ಪಕ್ಕಕ್ಕೆ ಸರಿದುನಿಂತನು. ರುಬಷೊವನ ಕಣ್ಣೆದಿರು ಐವನೊವನ ಕೋಣೆಯಂಥವೇ ಒಂದು ಕೋಣೆ ಕಂಡುಬಂದಿತು. ಆದರೆ ಅವರೊಳಗಿನ ಪ್ರಕಾಶದಲ್ಲಿ ಕಣ್ಣು ತೆರೆಯುವುದು ಕಷ್ಟವಾಗಿತ್ತು: ಬಾಗಿಲಿಗಿದಿರಾಗಿ, ಡೆಸ್ಕಿನ ಹಿಂದೆ, ಗ್ಲೆಟ್‌ಕಿನ್ ಕೂತಿದ್ದನು.

ಇದಿರಿನ ಫೈಲುಗಳ ರಾಶಿಯಿಂದ ಕಣ್ಣೆತ್ತಿ ಗ್ಲೆಟ್‌ಕಿನ್ 'ದಯ ಮಾಡಿ ಕೂತುಕೊಳ್ಳಿ' ಎಂದನು. ರುಬಷೊವ ಅವನ ತಲೆಯಮೇಲಿನ ಕಲೆಯನ್ನು ಗುರುತಿಸಿದನು. ರುಬಷೊವನ ಮೋರೆ ನೆರಳಲ್ಲಿತ್ತು. ಗ್ಲೆಟ್‌ಕಿನನ ಕುರ್ಚಿಯ ಹಿಂದಿನ ಲೋಹದ ಉದ್ದವಾದೊಂದು ನಿಲುವಿನಿಂದ ಪ್ರಕಾಶಮಾನವಾಗಿ ಕಣ್ಣು ಕೋರಯಿಸುವ ದೀಪ ಬೆಳಗುತ್ತಿತ್ತು. ಗ್ಲೆಟ್‌ಕಿನಗೆ ಸ್ವಲ್ಪ ಹಿಂದೆ ಬಾಗಿಲಿಗೆ ಬೆನ್ನುಹಾಕಿ ಒಬ್ಬಳು ಕಾರ್ಯದರ್ಶಿ ಕೂತಿದ್ದಳೆಂಬುದನ್ನು ಗುರುತಿಸಬೇಕಾದರೆ ರುಬಷೊವಗೆ ಒಮ್ಮೆಲೆ ಸಾಧ್ಯವಾಗಲಿಲ್ಲ.

ಗ್ಲೆಟ್‌ಕಿನನ ಎದುರಿನ ಒಂದೇ ಒಂದು ಕುರ್ಚಿಯ ಮೇಲೆ ರುಬಷೊವ ಕೂತನು. ಆ ಕುರ್ಚಿಗೆ ಕೈಗಳಿರಲಿಲ್ಲ, ಕುಳಿತುಕೊಳ್ಳಲು ಅನುಕೂಲವಾಗಿರಲಿಲ್ಲ. 'ಕಮಿಸ್ಸಾರ ಐವನೊವರ ಗೈರುಹಾಜರಿಯಲ್ಲಿ ನಿನ್ನನ್ನು ಪರೀಕ್ಷಿಸುವ ಹೊಣೆ ನನ್ನ ಮೇಲೆ ಬಿದ್ದಿದೆ.' ಎಂದನು ಗ್ಲೆಟ್‌ಕಿನ್. ದೀಪದ ಪ್ರಕಾಶದಿಂದ ರುಬಷೊವನ ಕಣ್ಣು ನೋಯುತ್ತಿತ್ತು. ಆದರೆ ತಲೆ ತಿರುಗಿಸಿ ಹಿಡಿದು ಗ್ಲೆಟ್‌ಕಿನ ಹತ್ತಿರ ಮಾತಾಡುವುದಾದರೂ ಎಂತು?

'ನನ್ನನ್ನು ಐವನೊವ ಪರೀಕ್ಷಿಸಲಿ', ಎಂದು ರುಬಷೊವ ಹೇಳಿದನು.

'ಪರೀಕ್ಷಿಸುವ ಮ್ಯಾಜಿಸ್ಟ್ರೇಟ ಯಾರಾಗಬೇಕೆಂದು ನಿಯೋಜಿಸುವವರು ಬೇರೆ ಇದ್ದಾರೆ. ನೀನು ಹೇಳಿಕೆ ಕೊಡಬಹುದು, ಬಿಡಬಹುದು. ಆದರೆ ನಿನ್ನ ಮಟ್ಟಿಗೆ ಹೇಳುವುದಾದರೆ ನೀನು ಎರಡು ದಿನಗಳ ಹಿಂದೆ

ಬರೆದ ಪತ್ರದಲ್ಲಿ ತಿಳಿಸಿದ ಮಾತನ್ನು ಹಿಂತೆಗೆದುಕೊಂಡಲ್ಲಿ ಇಲ್ಲಿಗೇ ವಿಚಾರಣೆ ಅಂತ್ಯವಾಗಬಹುದು. ಅಂಥ ಸಂದರ್ಭದಲ್ಲಿ ನಿನ್ನ ತಕ್ಸೀರನ್ನು ಸಂಬಂಧಪಟ್ಟ ಅಧಿಕಾರಿಗಳಿಗೆ ಕಳಿಸಬೇಕೆಂದು ನನಗೆ ಆಜ್ಞೆಯುಂಟು. ಅವರು ಆಡಳಿತದ ರೀತಿಯಾಗಿ ನಿನಗೆ ತೀರ್ಪು ಕೊಡುವರು.'

ರುಬಷೊವ ಬೇಗ ಬೇಗನೆ ಯೋಚಿಸ ತೊಡಗಿದನು. ಐವನೊವಗೆ ಫಕ್ಕನೆ ಏನೋ ಆಗಿದೆ—ರಜೆಯೋ, ವಿಸರ್ಜನೆಯೋ, ಸೆರೆಮನೆಯೋ-ಯಾವುದೋ ಒಂದು. ಐವನೊವ ತನ್ನ ಹಿಂದಿನ ಮಿತ್ರನೆಂದೋ ಅಥವಾ ಅವನು ಒಂದನೆಯ ನಂಬರಿನವನನ್ನು ತಾರ್ಕಿಕವಾಗಿ ಅಲ್ಲದೆ ಕುರುಡು ನಂಬಿಕೆಯಿಂದ ಅನುಸರಣೆ ಮಾಡುತ್ತಿಲ್ಲವೆಂದೋ? ಐವನೊವ ಬುದ್ಧಿವಂತ, ಹಳೆ ಹುದ್ದರಿಗಳ ಸಾಲಿನವನೆಂಬುದು ನಿಜ; ಆದರೆ ಈಗಿನ ಸಂಪ್ರದಾಯ ಬೇರೆ, ಅದಕ್ಕೆ ಗ್ಲೆಟ್‌ಕಿನನಂಥ ಅಧಿಕಾರಿಗಳು ಬೇಕು........ಐವನೊವ! ಶಾಂತಿ ಇರಲಿ ನಿನಗೆ! ಮಿತ್ರನ ಮೇಲೆ ಕರುಣೆ ಪಡಲೂ ರುಬಷೊವಗೆ ಪುರಸೊತ್ತಿರಲಿಲ್ಲ; ಬೇಗ ಬೇಗನೆ ಯೋಚಿಸಬೇಕು, ಆದರೆ ದೀಪದ ಕುಕ್ಕುವ ಬೆಳಕು ಬಿಡಲೊಲ್ಲದು. ಕನ್ನಡಕವನ್ನು ತೆಗೆದು ಪಿಳಿಪಿಳಿ ನೋಡಿದರೆ ಗ್ಲೆಟ್‌ಕಿನನ ಮುಖವು ಸದಾಗಾಂಭೀರ್ಯವನ್ನು ತಳೆದಿತ್ತು. ಮೌನವಾಗಿದ್ದರೂ ಕೆಲಸ ಸಾಗದು. ಗ್ಲೆಟ್‌ಕಿನ್ ಅಸಹ್ಯ ಮನುಷ್ಯನೇ ಸರಿ. ಆದರೆ ಅವನೀಗ ನೂತನ ಜನಾಂಗದ ಪ್ರತಿನಿಧಿ; ಅವನೊಡನೆ ಒಂದೋ ಸಮಾಲೋಚನೆ ನಡೆಸಬೇಕು ಇಲ್ಲವೇ ಸಾಯಬೇಕು—ಬೇರೆ ಮಾರ್ಗವೇ ಇಲ್ಲ. ರುಬಷೊವಗೆ ಒಮ್ಮೆಲೆ ತಾನು ಮುದುಕನಾದೆನೆಂದು ಅನಿಸಿತು; ಇದುವರೆಗೂ ಅವನಿಗಿಂಥ ಅನುಭವವಾದುದಿಲ್ಲ. ವಯಸ್ಸು ಐವತ್ತರ ಮೇಲಾಯಿತೆಂಬ ಕಲ್ಪನೆಯೇ ಅವನ ಮನಸ್ಸಿಗೆ ಹೊಳೆದುದಿಲ್ಲ. ಕನ್ನಡಕವನ್ನು ಮರಳಿ ಮೂಗಿಗೇರಿಸಿ ಗ್ಲೆಟ್‌ಕಿನನ ದೃಷ್ಟಿಗೆ ಕಣ್ಣು ತಾಕಿಸಬೇಕೆಂದು ನಿರ್ಧರಿಸಿದರೂ ರುಬಷೊವನ ಕಣ್ಣಿನಲ್ಲಿ ದೀಪದ ತೀವ್ರತೆಯಿಂದ ನೀರು ಸುರಿಯುತ್ತಿತ್ತು. ಅವನು ಕನ್ನಡಕವನ್ನು ತೆಗೆದು ·ಹೇಳಿಕೆ ಕೊಡಲು ನಾನು ಸಿದ್ಧನಾಗಿರುವೆ. ಆದರೆ ಒಂದೇ ಒಂದು ಶರತ್ತಿನ ಮೇಲೆ: ನೀನು ಈ ನಿನ್ನ ಹೊಲಸು ಉಪಾಯಗಳನ್ನೆಲ್ಲ ಬಿಟ್ಟು

ಬಿಡು. ಮೊದಲು ಈ ಕುಕ್ಕುವ ದೀಪವನ್ನು ತೆಗೆ–ಇದು ಕಳ್ಳರಿಗೆ, ಕ್ರಾಂತಿ ವಿರೋಧಿಗಳಿಗಾಗಿ ಇಟ್ಟುಕೊಳ್ಳ" ಎಂದನು.

ಗ್ಲೆಟ್‌ಕಿನ್ ಅವಿಚಲಲವಾದ ಧ್ವನಿಯಲ್ಲಿ 'ನೀನೀಗ ಶರತ್ತು ಹಾಕುವ ಸ್ಥಿತಿಯಲ್ಲಿಲ್ಲವೆಂದು ನಿನಗೆ ತಿಳಿದಿರಬೇಕು. ನಿನಗೋಸ್ಕರ ನನ್ನ ಕೋಣೆಯ ದೀಪದ ಏರ್ಪಾಟನ್ನು ಬದಲಾಯಿಸಲು ನಾನು ಸಿದ್ಧನಿಲ್ಲ. ನಿನಗಿನ್ನೂ ಸ್ವಸ್ಥಾನಪರಿಜ್ಞಾನ ಪ್ರಾಪ್ತಿಯಾದಂತಿಲ್ಲ. ನಿನ್ನ ಮೇಲೂ ಕ್ರಾಂತಿ ವಿರೋಧಿ ಎಂಬ ಆರೋಪಗಳಿವೆ ಎಂದೂ, ನೀನೇ ಬಹಿರಂಗವಾಗಿ ಎರಡು ಸಲ ಅವನ್ನೊಪ್ಪಿಕೊಂಡಿರುವಿ ಎಂದೂ ನಮಗೆ ಗೊತ್ತಿದೆ. ಆದರೆ ಈ ಸಲ ಮಾತ್ರ ನೀನು ಸುಲಭದಲ್ಲಿ ತಪ್ಪಿಸಿಕೊಳ್ಳಲಾರೆ' ಎಂದನು.

'ಹಂದಿ.' ಎಂದು ರುಬಶೊವ ಆತನನ್ನು ಮನಸ್ಸಿನಲ್ಲೆ ಶಪಿಸಿದನು. ಬರೇ ಹಂದಿಯಲ್ಲ, ಸಮವಸ್ತ್ರಧಾರಣೆ ಮಾಡಿದ ಹಂದಿ. ರುಬಶೊವನ ಮುಖ ಕೆಂಪಿಟ್ಟಿತು. ಗ್ಲೆಟ್‌ಕಿನನಿಗೂ ತನ್ನ ತಾಳ್ಮೆ ಕೆಟ್ಟುದರ ಅರಿವಾಯಿತೆಂದು ರುಬಶೊವಗೆ ಅನಿಸಿತು. ಈ ಗ್ಲೆಟ್‌ಕಿನ್ ಪೋರನ ವಯಸ್ಸೆಷ್ಟಿರಬಹುದು? ಮೂವತ್ತಾರೊ, ಹೆಚ್ಚೆಂದರೆ ಮೂವತ್ತೇಳು. ತರುಣನಾಗಿರುವಾಗ ಯಾದವೀಯುದ್ಧದಲ್ಲಿ ಭಾಗವಹಿಸಿರಬಹುದೇನೋ, ಕ್ರಾಂತಿ ನಡೆದಾಗಲಂತೂ ಈತ ಬಾಲಕ. ಅಂದರೆ, ಈತ ಮಹಾಪೂರದ ಅನಂತರದ ಜನಾಂಗಕ್ಕೆ ಸೇರಿದವನು. ಈ ಜನಾಂಗಕ್ಕೆ ಸಂಪ್ರದಾಯವಿಲ್ಲ, ಹಳೆಯದರೊಡನೆ ಜೋಡಿಸುವ ಸಂಬಂಧ ಸೂತ್ರವಿಲ್ಲ; ನಾಭಿಸೂತ್ರವಿಲ್ಲದೆಯೆ ಹುಟ್ಟಿದ ತಲೆಮಾರಿದು. ಆದರೂ ಸತ್ಯವು ಇವರ ಕಡೆಗೇ ಇದೆಯಂತೆ. ನಾಭಿಸೂತ್ರವನ್ನು ಹರಿದೊಗೆಯಬೇಕು. ಪ್ರಾಚೀನ ಪ್ರಪಂಚದ ಶೀಲ ಮತ್ತು ಗೌರವ ಎಂಬ ವಂಚಕ ತತ್ವಗಳನ್ನು ಮುರಿಯಬೇಕು. ಅಹಂಕಾರರಹಿತವಾಗಿ ಸೇವೆ ಮಾಡುವುದೂ, ಪರಿಣಾಮ ಬರುವವರೆಗೂ ದುಡಿಯುವುದೂ, ಮರ್ಯಾದೆಯ ನೂತನ ವ್ಯಾಖ್ಯೆಯಲ್ಲವೆ?

ರುಬಶೊವನ ಸಿಟ್ಟು ನಿಧಾನವಾಗಿ ಇಳಿಯಿತು. ಕೈಯಲ್ಲಿ ಕನ್ನಡಕವನ್ನು ಹಿಡಿದುಕೊಂಡು ಕಣ್ಣು ಮುಚ್ಚಿ ಗ್ಲೆಟ್‌ಕಿನ್ ಕಡೆ ತಿರುಗುವಾಗ ಆತನಿಗೆ ತಾನು ಈ ಹುಡುಗನಿದಿರು ಬತ್ತಲೆ ಕೂತಿದ್ದೇ

ನೆಂದು ಅನಿಸುತಿತ್ತು. ಆದರೆ ದೀಪದ ಕಾಟ ಕಡಮೆಯಾಯಿತು; ಮುಚ್ಚಿದ ಕಣ್ಣಿಗೆ ಕೆಂಪಾಗಿ ಕಾಣಿಸುವ ಪರಿಸರದಲ್ಲಿ ರುಬಷೊವನಿಗೆ ಅತ್ಯಂತ ಏಕಾಂತಾನುಭವವು ಆಗುತಿತ್ತು.

'ಪಾರ್ಟಿಯ ಸೇವೆಗಾಗಿ ನಾನು ಏನು ಬೇಕಾದರೂ ಮಾಡುವೆ. ದಯವಿಟ್ಟು ನನ್ನ ಮೇಲಿನ ಆರೋಪದ ವಿವರಗಳನ್ನು ನನಗೆ ತಿಳಿಸು. ಅದನ್ನೀವರೆಗೂ ನನಗೆ ತಿಳಿಸಿಲ್ಲ' ಎಂದು ರುಬಷೊವ ನಿರುದ್ವಿಗ್ನ ಸ್ವರದಲ್ಲಿ ಹೇಳಿದನು. ಸ್ವರದಲ್ಲಿ ಕರ್ಕಶತೆಯೂ ಇರಲಿಲ್ಲ.

ಗ್ಲೆಟ್‌ಕಿನನ ಸಂಯಮಿತ, ನಿಯಂತ್ರಿತ ಭಂಗಿಯಲ್ಲಿಯೂ ಒಮ್ಮೆ ಕೋಮಲತೆ ಸುಳಿಯಿತೆಂದು ರುಬಷೊವ ಕಣ್ಣಿನಿಂದ ನೋಡುವುದಕ್ಕಿಂತ ಹೆಚ್ಚಾಗಿ ಕಿವಿಯಿಂದ ಕೇಳಿದನೆನ್ನಬಹುದು. ಗ್ಲೆಟ್‌ಕಿನನಿಗೆ ಇದು ಅವನ ಜೀವನದ ಒಂದು ವಿಜಯಮುಹೂರ್ತವೆಂದು ರುಬಷೊವಗೆ ಗೊತ್ತು. ರುಬಷೊವನಷ್ಟು ಹಿರಿಯನನ್ನು ಬಗ್ಗುಬಡಿಯುವುದೆಂದರೆ ಗ್ಲೆಟ್‌ಕಿನನು ಅಧಿಕಾರದ ಸೋಪಾನದಲ್ಲಿ ಮುಂದಿನ ಹೆಜ್ಜೆ ಇಟ್ಟಂತ ಲ್ಲವೆ? ಒಂದು ಕ್ಷಣ ಪೂರ್ವದಲ್ಲಿ ಎಲ್ಲವೂ ಎಷ್ಟು ಅನಿಶ್ಚಿತವಾಗಿತ್ತು; ಎಚ್ಚರಿಕೆ ಕೊಡಲು ಐವನೊವನ ಗತಿ ಹೇಗೂ ಇದೆಯಲ್ಲವೆ?

ಈ ಗ್ಲೆಟ್‌ಕಿನನಿಗೆ ತನ್ನ ಮೇಲೆಷ್ಟು ಪ್ರಭಾವವಿದೆಯೋ ಅಷ್ಟೇ ಪ್ರಭಾವವು ತನಗೂ ಗ್ಲೆಟ್‌ಕಿನನ ಮೇಲಿರುವುದೆಂಬ ವಿಷಯವು ಆಗ ರುಬಷೊವಗೆ ಹಠಾತ್ ಅರಿವಾಯಿತು. ಬಚ್ಚಾ, ನಿನ್ನ ಕೊರಳು ನನ್ನ ಕೈಯಲ್ಲಿದೆ. ನನ್ನ ಕೊರಳು ನಿನ್ನ ಕೈಯಲ್ಲಿರಬಹುದು ಆದರೆ ಉಯ್ಯಾಲೆ ಯಿಂದ ನಾನು ಬೀಳುವಾಗ ನಿನ್ನನ್ನು ಎಳೆದುಕೊಂಡೇ ಬೀಳಬಲ್ಲೆ ಎಂದು ರುಬಷೊವ ಯೋಚಿಸಿದನು. ಒಂದು ಕ್ಷಣಕಾಲ ರುಬಷೊವ ಇದೇ ವಿಚಾರವನ್ನು ಮಥಿಸಿದನು; ಗ್ಲೆಟ್‌ಕಿನ್ ಫೈಲುಗಳನ್ನು ಹುಡು ಕುತ್ತಿದ್ದನು; ರುಬಷೊವ ಪ್ರಲೋಭನವನ್ನು ಹತ್ತಿಕ್ಕಿ ಕಣ್ಣೆವೆಗಳನ್ನು ನಿಧಾನವಾಗಿ ಮುಚ್ಚಿದನು. ಅಹಂಕಾರದ ಅಳಿದುಳಿದ ಚೂರೂ ನಾಶ ವಾಗಬೇಕು—ಹೌದು ಆತ್ಮಹತ್ಯೆಯು ತಲೆಕೆಳಗಾದ ಅಹಂಕಾರವಲ್ಲದೆ ಬೇರೇನು? ರುಬಷೊವನನ್ನು ತನ್ನ ತಂತ್ರವು ಬಗ್ಗುಬಡಿಯಿತೆಂದು ಈ ಗ್ಲೆಟ್‌ಕಿನ್ ಭಾವಿಸಿರುವನಲ್ಲವೇ; ಈತನಿಗೇನು ಗೊತ್ತು ಐವನೊವನ

ವಾದಕ್ಕೆ ತಾನು ಶರಣು ಬಂದ ಕಥೆ? ರುಬಷೊವ ಅಪರಾಧ ಸ್ವೀಕಾರ ಮಾಡಲು ತಾನೇ ಕಾರಣನೆಂದು ಹೇಳಿ ಐವನೊವನನ್ನು ಅಟ್ಟಿದವನೂ ಗ್ಲೆಟ್‌ಕಿನನೇ ಆಗಿರಬಹುದು. ಹಂದಿ, ಎಂದು ರುಬಷೊವ ಯೋಚಿಸಿದನು, ಆದರೆ ಈ ಸಾರಿ ಅವರಲ್ಲಿ ಸಿಟ್ಟಿರಲಿಲ್ಲ. ನಾವೇ ಸೃಷ್ಟಿ ಮಾಡಿದ ಹಿಂಸ್ರ ಮೃಗ ನೀನಾಗಿರುವೆ—ಇದೀಗ ಆರಂಭವಾಗುವ ನವಯುಗದ ಕಾಡು ಮನುಷ್ಯನು ನೀನಾಗಿರುವೆ. ಪ್ರಶ್ನೆ ಏನೆಂಬುದರ ಗೊಡವೆ ನಿನಗೇಕೆ? ಅಥವಾ ನಿನಗೆ ಪ್ರಶ್ನೆಯು ಅರ್ಥವಾದರೂ ನಿನ್ನಿಂದೇನು ಪ್ರಯೋಜನವಾದೀತು?........ದೀಪದ ಬೆಳಕು ಇನ್ನಷ್ಟು ಬಲವಾಯಿತು. ವಿಚಾರಣೆಯ ಸಮಯ ಬೆಳಕನ್ನು ಏರಿಸುವ ಇಳಿಸುವ ಯಾಂತ್ರಿಕ ಏರ್ಪಾಡಿತ್ತೆಂದು ರುಬಷೊವ ಬಲ್ಲನು. ಮೋರೆಯನ್ನು ಸಂಪೂರ್ಣವಾಗಿ ತಿರುಗಿಸಿ ಆತ ಕಣ್ಣೀರನ್ನು ಒರಸಿಕೊಂಡನು. ನೀನೊಂದು ಮೃಗ, ಹೌದು, ಮೃಗ, ನಾವು ಮುದ್ದಾಮ್ ಸೃಷ್ಟಿಸಿದ ವನ್ಯಮೃಗ...........

ಗ್ಲೆಟ್‌ಕಿನ್ ಆರೋಪವನ್ನು ಓದಲಾರಂಭಿಸಿದನು. ಏರಿಳಿತವಿಲ್ಲದೆ ಸಾಗುತ್ತಿದ್ದ ಅವನ ಓದನ್ನು ರುಬಷೊವ ಮುಚ್ಚಿದ ಕಣ್ಣುಗಳಿಂದಲೂ, ತಿರುಗಿದ ಮುಖದಿಂದಲೂ ಕೇಳುತ್ತಿದ್ದನು. ತನ್ನ ಹೇಳಿಕೆಯು ಕೇವಲ ಮಾಮೂಲಿನಂತಿದ್ದೀತು, ಅರ್ಥಹೀನವಾದ ಪ್ರಹಸನದಂತಿದ್ದೀತು, ಅನಿವಾರ್ಯವಾದ ಒಂದು ಶಿಕ್ಷೆಯಂತೆ ಅದನ್ನನುಭವಿಸಿದರಾಯಿತು ಎಂದು ರುಬಷೊವ ಭಾವಿಸಿದ್ದನು. ಆದರೆ ಗ್ಲೆಟ್‌ಕಿನ್ ಓದುತ್ತಿದ್ದ ಆರೋಪ ಪತ್ರವು ರುಬಷೊವನ ಕಲ್ಪನೆ ಎಲ್ಲವನ್ನೂ ಮೀರಿಸುವಂತಿತ್ತು. ಹುಡುಗಾಟಿಕೆಯ ಅಷ್ಟೆಲ್ಲ ಒಳಸಂಚನ್ನು ರುಬಷೊವ ಏರ್ಪಡಿಸಿದನೆಂದು ಈ ಗ್ಲೆಟ್‌ಕಿನ್ ನಿಜವಾಗಿ ನಂಬಿರುವನೆ? ಹಲವರ್ಷಗಳಿಂದ ಹಳೆ ಹುದ್ದರಿಗಳ ಸಹಕಾರದಿಂದ ತಾನು ಕಟ್ಟಿದ ಕಟ್ಟಡವನ್ನು ಕೆಡೆಯುವುದು ಹೇಗೆನ್ನುವುದರ ಹೊರತು ಬೇರೇನನ್ನೂ ರುಬಷೊವ ಯೋಚಿಸುತ್ತಿರಲಿಲ್ಲವೆ? ಗ್ಲೆಟ್‌ಕಿನನ ಬಾಲ್ಯಕಾಲದಲ್ಲಿ ರಾಷ್ಟ್ರವೀರರೆಂದು ಪ್ರಖ್ಯಾತರಾದ ಅವರೆಲ್ಲರಿಗೂ ಈ ಸಾಂಕ್ರಾಮಿಕ ಜಾಡ್ಯವು ಅಂಟಿ, ಅವರೆಲ್ಲರೂ ಕ್ರಾಂತಿಯ ವಿನಾಶಕ್ಕೆ ತಾವೇ ಹೇತುಗಳಾಗಬೇಕೆಂದು ಪಣತೊಟ್ಟು ಪ್ರವರ್ತಿಸಿದರೆಂಬುದನ್ನೂ ಗ್ಲೆಟ್‌ಕಿನ

ನಂಬಬೇಕೆ? ಕ್ರಾಂತಿನಾಶದ ಮಾರ್ಗವಾದರೂ ಯಾವುದಂತೆ?–ಅಗ್ಗದ ಪತ್ತೇದಾರಿ ಕಾದಂಬರಿಯಿಂದ ಎರವಲು ಪಡೆದ ಮಾರ್ಗ! ಕ್ರಾಂತಿಯನ್ನು ಸೃಷ್ಟಿಸಿದ ಪರಮತಂತ್ರಜ್ಞರು ಪತ್ತೇದಾರಿ ಕಾದಂಬರಿಗೆ ಶರಣು ಹೋಗಬೇಕಾಯಿತೆ?

ಇದೇ ಹೊಸದಾಗಿ ಅಕ್ಷರಮಾಲೆಯನ್ನು ಗುರುತಿಸಲು ಕಲಿತವರು ಓದುವಂತೆ ಏರಿಳಿತವಿಲ್ಲದ ಏಕತಾನದಲ್ಲಿ ಗ್ಲೆಟ್‌ಕಿನ್ ಆರೋಪದ ವರದಿಯನ್ನು ಓದುತ್ತಿದ್ದನು. ರುಬಷೊವ 'ಬಿ' ದೇಶದಲ್ಲಿದ್ದಾಗ ವಿದೇಶೀಯ ಸರಕಾರದ ಪ್ರತಿನಿಧಿಯೊಬ್ಬನೊಡನೆ ಒಳಸಂಚು ನಡೆಸಿದ ಪ್ರಸ್ತಾಪ ಬಂದಾಗ ರುಬಷೊವ ಕಿವಿ ನಿಗುರಿಕೊಂಡು ಇದೇನು ದಂತ ಕಥೆ ಎಂದುಕೊಂಡು ಆಲಿಸತೊಡಗಿದನು. ವಿದೇಶೀಯ ಪ್ರತಿನಿಧಿಯ ಹೆಸರು, ಅವನನ್ನು ರುಬಷೊವ ಭೆಟ್ಟಿಯಾದ ಸಮಯ ಮತ್ತು ಸ್ಥಳದ ವಿಷಯವನ್ನು ಕೂಡ ಅದರಲ್ಲಿ ನಮೂದಿಸಲಾಗಿತ್ತು. ಬಹಳ ಯೋಚಿಸಿದ ಮೇಲೆ ಎಲ್ಲೋ ನಡೆದ ಒಂದು ಕ್ಷುದ್ರ ಘಟನೆಯ ನೆನಪಾಯಿತು ರುಬಷೊವಗೆ. ಓಹೋ, ನನ್ನ ಕುತ್ತಿಗೆಗೆ ಬಿಗಿಯುವ ಉರುಳು ಇದುವೆಯೋ ಎಂದುಕೊಂಡು ನಸುನಕ್ಕು ಕಣ್ಣೀರನ್ನು ಕರವಸ್ತ್ರದಿಂದ ಒರಸಿಕೊಂಡನು.

ಗ್ಲೆಟ್‌ಕಿನ್ ನಿರ್ವಿಕಾರ ಸ್ವರದಲ್ಲಿ ಓದನ್ನು ಮುಂದುವರಿಸಿದನು. ಇಷ್ಟು ಅತಿರಂಜಿತ ಘಟನೆಗಳನ್ನು ಆತ ನಂಬಲು ಶಕ್ಯವೆ? ಆರೋಪದ ಅತಿಶಯೋಕ್ತಿ ಮತ್ತು ಅಸತ್ಯವು ಗ್ಲೆಟ್‌ಕಿನನಿಗೆ ತಿಳಿಯದಿದ್ದೀತೆ? ರುಬಷೊವ ಅಲ್ಯುಮಿನಿಯಮ್ ಟ್ರಸ್ಟಿನ ಅಧ್ಯಕ್ಷನಾಗುವಲ್ಲಿಯ ವರೆಗೆ ಕಥೆ ಮುಂದುವರಿಯಿತು. ಅವಸರದಿಂದ ಸ್ಥಾಪಿತವಾದ ಅಲ್ಯುಮಿನಿಯಮ್ ಉದ್ಯಮದ ಸಂಘಟನೆಯ ಲೋಪದೋಷಗಳನ್ನು ಅಂಕೆ ಸಂಖ್ಯೆಗಳಿಂದ ಎತ್ತಿ ತೋರಿಸಲಾಗಿತ್ತು; ಎಷ್ಟು ಕೆಲಸಗಾರರು ಅವಘಡಗಳಿಗೆ ತುತ್ತಾಗಿ ಸತ್ತರೋ, ಎಷ್ಟು ವಿಮಾನಗಳು ಕೆಟ್ಟ ಅಲ್ಯುಮಿನಿಯಮಿನ ಕಾರಣವಾಗಿ ಕೆಳಗುರುಳಿದುವೋ, ಅವೆಲ್ಲದರ ಲೆಕ್ಕವನ್ನೂ ತಪಶೀಲಾಗಿ ಅವರಲ್ಲಿ ಕೊಟ್ಟಿದ್ದರು. ರುಬಷೊವನ ವಿಧ್ವಂಸಕ ಮತ್ತು ಸೈತಾನಿ ಚಟುವಟಿಕೆಗೆ ಇವೆಲ್ಲ ಸಾಕ್ಷಿ. 'ಸೈತಾನ' ಎಂಬ ಪದವನ್ನು ಆರೋಪದಲ್ಲಿ

ಬಹಳ ಕಡೆ ಉಪಯೋಗಿಸಿರುವುದನ್ನು ರುಬಷೊವ ಗಮನಿಸಿದನು. ಕೆಲವು ಕ್ಷಣ ಗ್ಲೆಟ್‌ಕಿನನಿಗೆ ಹುಚ್ಚು ಹಿಡಿದಿರಬಹುದೇ ಎಂಬ ಸಂದೇಹ ಬಂತು ರುಬಷೊವಗೆ; ತರ್ಕ ಮತ್ತು ಅಸತ್ಯದ ಇಂಥ ಕಲಸುಮೇಲೋಗರವು ಹುಚ್ಚರ ತಲೆಗಲ್ಲವೆ ಬೇರೆ ಯಾರಿಗೆ ಹೊಳೆದೀತು? ಆದರೆ ಆರೋಪವನ್ನು ಬರೆದವನು ಗ್ಲೆಟ್‌ಕಿನ್ ಅಲ್ಲ ತಾನೇ? ಅವನಿಗಿದರಲ್ಲಿ ನಂಬಿಕೆ ಇದ್ದರೂ ಇರಬಹುದು ಅಥವಾ ನಂಬಲರ್ಹವಾದ್ದೆಂದು ಆತ ತಿಳಿದರೆ ಸಾಕಲ್ಲವೆ?

ರುಬಷೊವ ತಲೆಯನ್ನು ತಗ್ಗಿಸಿ ಕಾರ್ಯದರ್ಶಿಯ ಕಡೆಗೆ ನೋಡಿದನು. ಆಕೆ ಪೆನ್ಸಿಲ್ ಮೊನೆ ಮಾಡುತ್ತಿದ್ದಳು. ಆಕೆಗೂ ಗ್ಲೆಟ್‌ಕಿನ್ ಓದುತ್ತಿದ್ದ ಆರೋಪಗಳಲ್ಲಿ ನಂಬಿಕೆ ಇರಬಹುದಲ್ಲವೆ? ಇರಬಹುದು. ಆಕೆಯೂ ಮಹಾಪೂರದ ಅನಂತರದ ಜನಾಂಗದವಳೇ, ಆಧುನಿಕ ನಿಯೆಂಡರ್ಥಾಲರ ಈ ಬಳಗಕ್ಕೆ ರುಬಷೊವನ ಹೆಸರಿನಲ್ಲೇನಿದೆ ಸ್ವಾರಸ್ಯ? ಕಣ್ಣು ಕುಕ್ಕುವ ದೀಪದಿದಿರು ಕಣ್ಣೀರು ಸುರಿಸುತ್ತ ಹೇಳಿದ ಆರೋಪಗಳನ್ನು ಪಿಟ್ಟೆನ್ನದೆ ಆಲಿಸುತ್ತ ಕೂತ ರುಬಷೊವ ಅವರ ದೃಷ್ಟಿಯಲ್ಲಿ ಒಬ್ಬ ಕಾಪುರುಷ, ವಧಸ್ಥಾನದಲ್ಲಿ ಕಟ್ಟಿದ ಪಶು.

ಗ್ಲೆಟ್‌ಕಿನ್ ಆರೋಪದ ಕೊನೆಯ ಪರಿಚ್ಛೇದವನ್ನು ಓದುತ್ತಿದ್ದನು. ಅದರಲ್ಲಿ ಇಡಿ ಆರೋಪಕ್ಕೆ ಕಳಸ ಕಟ್ಟುವ ವಿಷಯವು ಅಡಕವಾಗಿತ್ತು: ಒಂದನೆಯ ನಂಬರಿನವನ ಕೊಲೆಗೆ ರುಬಷೊವ ಮಾಡಿದ ಪ್ರಯತ್ನ. ಒಂದನೆಯ ನಂಬರಿನವನು ಮಧ್ಯಾಹ್ನದ ಹೊತ್ತು ಊಟವನ್ನು ತರಿಸುತ್ತಿದ್ದ ಫಲಾಹಾರಮಂದಿರದ ಅಸಿಸ್ಟಂಟ್ ಮೆನೇಜರನನ್ನು ಒಡೆದುಕೊಂಡು ರುಬಷೊವ ವಿಷ ಬೆರಸಿ ಒಂದನೆಯ ನಂಬರಿನವನ ಕೊಲೆಯ ಒಳಸಂಚು ನಡೆಸಿದುದಂತೆ. ರುಬಷೊವಗೆ ಕಣ್ಣು ಮುಚ್ಚಿದ್ದರೂ ನಗು ಬಂತು. ಅವನು ಕಣ್ಣು ತೆರೆದಾಗ ಗ್ಲೆಟ್‌ಕಿನ್ ಓದಿ ಮುಗಿಸಿದ್ದನು. ಕೆಲವು ಕ್ಷಣದ ಮೌನದ ತರುವಾಯ ಗ್ಲೆಟ್‌ಕಿನ್ 'ನೀನೀಗ ನಿನ್ನ ಮೇಲಿರುವ ಆರೋಪಗಳನ್ನು ಕೇಳಿದಿ. ಒಪ್ಪಿಕೊಂಡೆಯಲ್ಲವೆ?' ಎಂದನು.

ರುಬಷೊವಗೆ ಆತನ ಮುಖವನ್ನು ನೋಡುವ ಮನಸ್ಸಾಯಿತು, ಆದರೆ ಕಣ್ಣನ್ನು ತೆರೆದು ಹಿಡಿಯಲಾಗುತ್ತಿರಲಿಲ್ಲ. ಕಟುವಾದ ಮಾತಿನಲ್ಲಿ ಉತ್ತರವನ್ನು ನುಡಿಯಬೇಕೆಂಬ ಮನಸ್ಸಾಯಿತು; ಆದರ ಬದಲು ಕಾರ್ಯದರ್ಶಿಯು ಕೊರಳು ಚಾಚಿ ಕೇಳಬೇಕಾದಷ್ಟು ಕುಗ್ಗಿದ ದನಿಯಲ್ಲಿ ಅವನ ನಾಲಗೆಯಿಂದ ಮಾತು ಹೊರಟಿತು:

"ಸರಕಾರದ ಧೋರಣೆಯಲ್ಲಿ ದುರ್ದಮನೀಯವಾದ ಕಡ್ಡಾಯವೇನಿತ್ತೋ ಅದನ್ನು ಅರ್ಥಮಾಡಿಕೊಳ್ಳಲಾರದೆ ಅದಕ್ಕೆ ವಿರುದ್ಧವಾದ ಅಭಿಪ್ರಾಯಗಳನ್ನು ನಾನು ಕಟ್ಟಿಕೊಂಡದ್ದು ಹೌದೆಂಬುದನ್ನು ನಾನು ಒಪ್ಪಿಕೊಳ್ಳುತ್ತೇನೆ. ಭಾವನಾತ್ಮಕ ಪ್ರೇರಣೆಗಳಿಗೆ ಮನಸೋತು ಐತಿಹಾಸಿಕ ಅನಿವಾರ್ಯತೆಯೊಡನೆ ಸೆಣಸಿದುದು ನಿಜವೆಂದು ಒಪ್ಪಿಕೊಳ್ಳುತ್ತೇನೆ. ಬಲಿಯಾದ ಜನರ ಆಕ್ರಂದನಕ್ಕೆ ಕಿವಿಗೊಟ್ಟುದರಿಂದಾಗಿ ಕಿವುಡಾದ ನನ್ನ ಕಿವಿಗೆ ಅವರನ್ನು ಬಲಿಕೊಡುವುದವಶ್ಯವೆಂಬ ವಾದವು ಅರ್ಥವಾಗದೆ ಹೋಯಿತೆಂಬ ಅಪರಾಧವನ್ನು ನಾನು ಒಪ್ಪಿಕೊಳ್ಳುತ್ತೇನೆ. ಪಾಪ ಮತ್ತು ನಿರಪರಾಧಿತ್ವವು ಪ್ರಯೋಜನ ಮತ್ತು ಉಪದ್ರವದ ಪ್ರಶ್ನೆಗಳಿಗಿಂತ ಮಹತ್ವದವೆಂದು ಭಾವಿಸಿದ ಅಪರಾಧವನ್ನು ನಾನು ಒಪ್ಪಿಕೊಳ್ಳುತ್ತೇನೆ. ಕೊನೆಯದಾಗಿ, ಮನುಷ್ಯ ವ್ಯಕ್ತಿಯನ್ನು ಮನುಷ್ಯಜಾತಿ ಎಂಬ ಸಮೂಹಕ್ಕಿಂತ ಶ್ರೇಷ್ಠವೆಂದು ಭಾವಿಸಿದ ಮಹಾಪರಾಧವನ್ನು ನಾನು ಒಪ್ಪಿಕೊಳ್ಳುತ್ತೇನೆ........

ರುಬಷೊವ ತುಸು ತಡೆದು ಕಣ್ಣನ್ನು ತೆರೆಯಲು ಯತ್ನಿಸಿದನು. ಓರೆನೋಟದಿಂದ ಕಾರ್ಯದರ್ಶಿಯ ಕಡೆ ನೋಡಿದರೆ ಆಕೆ ವ್ಯಂಗ್ಯವಾಗಿ ನಸುನಗುವಂತೆ ತೋರಿತು.

'ನನ್ನ ಮಾನಸಿಕ ರೋಗವನ್ನು ಕಾರ್ಯಾಚರಣೆಗೆ ತಂದಿದ್ದರೆ ಕ್ರಾಂತಿಯ ಭವಿಷ್ಯ ಅಲ್ಲಿಗೆ ಅಣಗುತ್ತಿತ್ತೆಂಬ ವಿಷಯ ನನಗೆ ಗೊತ್ತಿತ್ತು: ಇತಿಹಾಸದ ಸಂಧಿಕಾಲದಲ್ಲಿ ಪ್ರತಿಯೊಂದು ವಿರೋಧಪಕ್ಷವೂ ಮುಂದಿನ ಯಾದವೀ ಯುದ್ಧದ ಬೀಜವನ್ನು ಹೊತ್ತಿರುವುದು ಸಹಜ. ಮಾನವ-ಸಹಜ ದೌರ್ಬಲ್ಯವೂ, ಉದಾರ ಪ್ರಜಾತಂತ್ರವೂ, ಜನತೆಯ ಅಪ್ರಬುದ್ಧಾವಸ್ಥೆಯಲ್ಲಿ ಕ್ರಾಂತಿಗೆ ಘಾತಕವೆಂದು ನಾನು ಬಲ್ಲೆ. ನೋಟಕ್ಕೆ

ಇಷ್ಟವಾದ, ವಸ್ತುತಃ ಕ್ರಾಂತಿಗೆ ಅನಿಷ್ಟಕರವಾದ ಈ ಮಾರ್ಗಗಳನ್ನು ನಾನು ಪುರಸ್ಕರಿಸುವವನಾಗಿದ್ದೆನೆಂಬುದೂ ನಿಜ. ಸರ್ವಾಧಿಕಾರವನ್ನು ಪ್ರಜಾಸರ್ಕಾರವನ್ನಾಗಿ ಮಾರ್ಪಡಿಸಿದರೂ, ಹಿಂಸಾಮಾರ್ಗಗಳನ್ನು ವಿಸರ್ಜಿಸಿದರೂ, ಪಾರ್ಟಿಯ ಬಂಧವನ್ನು ಶಿಥಿಲಗೊಳಿಸಿದರೂ, ಸದ್ಯದ ಪರಿಸ್ಥಿತಿಯಲ್ಲಿ ಕ್ರಾಂತಿಗೆ ಹಾನಿಯುಂಟೆಂಬುದನ್ನು ನಾನು ತಿಳಿಯದವ ನಲ್ಲ. ಇಷ್ಟರ ಮೇಲಿಂದ ನಾನು ಕ್ರಾಂತಿವಿರೋಧಿ ಎಂದು ಹೇಳ ಬೇಕೇನೋ........

ಕಾರ್ಯದರ್ಶಿ ವೇಗವಾಗಿ ಗೀಚುವ ಸದ್ದು ಕೇಳಿಸುತ್ತಿತ್ತು. ರುಬಷೊವನ ಗಂಟಲು ಒಣಗಿ ಹೋದುದರಿಂದ ಸ್ವರವು ತೋರವಾಗಿತ್ತು. ಸ್ವರವನ್ನು ಸ್ವಲ್ಪ ಮೇಲಕ್ಕೆತ್ತಿ ರುಬಷೊವ ಮುಂದುವರಿಸಿದನು.

'ಈ ಅರ್ಥದಲ್ಲಿ ಮತ್ತು ಈ ಅರ್ಥದಲ್ಲಿ ಮಾತ್ರವೇ ನೀವು ನನ್ನನ್ನು ಕ್ರಾಂತಿವಿರೋಧಿ ಎನ್ನಬಹುದು. ಆದರೆ ನಿಮ್ಮ ಆರೋಪಪತ್ರದಲ್ಲಿರುವ ಕ್ರಿಮಿನಲ್ ಅಪರಾಧಗಳಲ್ಲಿ ಯಾವುದನ್ನೂ ನಾನು ಮಾಡಿದವನಲ್ಲ, ಮಾಡಿದೆನೆಂದು ಒಪ್ಪಿಕೊಳ್ಳುವವನೂ ಅಲ್ಲ.'

'ಹೇಳುವುದೆಲ್ಲ ಮುಗಿಯಿತೆ?' ಎಂದು ಗ್ಲೆಟ್‌ಕಿನ್ ಕೇಳಿದನು.

ಅವನ ಸ್ವರದಲ್ಲಿ ಪ್ರಕಟವಾದ ರಾಕ್ಷಸತೆಯನ್ನು ಕೇಳಿ ರುಬಷೊವಗೆ ಆಶ್ಚರ್ಯವಾಯಿತು. ಗ್ಲೆಟ್‌ಕಿನ್ ಎಂದಿನಂತೆ ನೀಟವಾಗಿಯೇ ಕೂತಿದ್ದನು. ರುಬಷೊವಗೆ ಗ್ಲೆಟ್‌ಕಿನನ ಚರಿತ್ರಚಿತ್ರಣಕ್ಕೆ ಬೇಕಾದ ಶಬ್ದ ಈಗ ಸಿಕ್ಕಿತು: 'ಪರಿಷ್ಕೃತ ಪಶುತ್ವ'–ಹೌದು, ಅದೇ.

'ನಿನ್ನ ಹೇಳಿಕೆಯಲ್ಲಿ ಹೊಸದೇನೂ ಇರುವುದಿಲ್ಲ. ಎರಡು ವರ್ಷ ಗಳ ಹಿಂದೊಮ್ಮೆ, ಒಂದು ವರ್ಷದ ಕೆಳಗೆ ಇನ್ನೊಮ್ಮೆ, ನೀನು ಕೊಟ್ಟ ಎರಡು ಹೇಳಿಕೆಗಳಲ್ಲಿಯೂ ನೀನು ಬಹಿರಂಗವಾಗಿ, 'ನಾನು ನಿರಪೇಕ್ಷ ಕ್ರಾಂತಿ ವಿರೋಧಿಯಾಗಿ ಜನತೆಯ ಕಲ್ಯಾಣಕ್ಕೆ ವಿರುದ್ಧ ಕೆಲಸಮಾಡಿ ರುವುದು ನಿಜವೆಂದು ಒಪ್ಪಿಕೊಂಡಿದ್ದೀ. ಎರಡು ಸಲವೂ ಪಾರ್ಟಿಯ ಕೈಯಲ್ಲಿ ಕ್ಷಮೆಯನ್ನು ಯಾಚಿಸಿ ಇನ್ನು ಮುಂದೆ ನಾಯಕರ ಧೋರಣೆ ಯನ್ನು ಪಾಲಿಸುವೆನೆಂದು ಆಶ್ವಾಸನೆ ಕೊಟ್ಟಿರುವಿ. ಈಗಲೂ ಅದೇ ಆಟ

ಆಡುತ್ತಿರುವಿ. ನೀನು ಇದೀಗ ಹೇಳಿದ ಮಾತೆಲ್ಲ ಸುಳ್ಳು. ವಿರೋಧಿ ಮನೋವೃತ್ತಿಯನ್ನು ಅಂಗೀಕರಿಸಿ ಅದರಿಂದ ಸಹಜವಾಗಿ ಉಂಟಾಗುವ ಪರಿಣಾಮಗಳನ್ನು ನೀನು ಅಲ್ಲಗಳೆಯುತಿದ್ದಿ: ಆದರೆ ನಾನು ಮೊದಲೇ ಹೇಳಿದಂತೆ ಈ ಸಲ ನೀನು ಸುಲಭದಲ್ಲಿ ಜಾರಿಕೊಳ್ಳಲಾರೆ.'

ಹೇಗೆ ಆರಂಭಿಸಿದನೋ ಹಾಗೆ ಥಟಕ್ಕನೆ ಗ್ಲೆಟ್‌ಕಿನ್ ಮಾತು ನಿಲ್ಲಿಸಿದನು. ದೀಪದಲ್ಲಿ ವಿದ್ಯುತ್ತು ಇನ್ನಷ್ಟು ಅಧಿಕ ಒತ್ತಡದಲ್ಲಿ ಹರಿಯುವ ಝೇಂಕಾರವು ರುಬಷೊವಗೆ ಕೇಳಿಸಿತು. ದೀಪದ ಪ್ರಕಾಶ ಮತ್ತಷ್ಟು ಅತಿಶಯವಾಯಿತು.

'ನಾನು ಅಂದು ಮಾಡಿದ ಘೋಷಣೆಗಳಿಗೆ ಕಾರಣವಿತ್ತು. ವಿರೋಧಿ ಗುಂಪಿನ ರಾಜಕೀಯಸ್ಥರೆಲ್ಲ ಪಾರ್ಟಿಯಲ್ಲುಳಿಯಬೇಕಾದರೆ ಹೀಗೆ ಮಾಡದೆ ಉಪಾಯವಿರಲಿಲ್ಲ. ಆದರೆ ಈ ಸಲ ನನ್ನ ಉದ್ದೇಶ ಬೇರೆಯೇ ಇದೆ........' ಎಂದು ರುಬಷೊವ ನುಡಿದನು.

'ಅಂದರೆ ಈ ಸಾರಿ ನೀನು ಪ್ರಾಮಾಣಿಕನಾಗಿ ಇರುತ್ತೀ ಎಂದರ್ಥವೆ?' ಎಂದು ಗ್ಲೆಟ್‌ಕಿನ್ ಕೇಳಿದನು. ಪ್ರಶ್ನೆಯನ್ನು ಕೇಳಿದ ರೀತಿಯಲ್ಲಿ ಯಾವ ಅಣಕವೂ ಇದ್ದಂತೆ ತೋರಲಿಲ್ಲ.

'ಹೌದು' ಎಂದು ರುಬಷೊವ ಅಂದನು.

'ಈ ಮೊದಲು ನೀನಂದುದೆಲ್ಲ ಸುಳ್ಳು, ಹಾಗಾದರೆ'

'ಬೇಕಾದರೆ ಹಾಗೆನ್ನು'

'ಕೊರಳು ಉಳಿಸಿಕೊಳ್ಳಲು ನೀನು ಏನನ್ನೂ ಹೇಳಬಲ್ಲೆ'

'ಹೌದು, ಕೆಲಸ ನಡೆಯಬೇಕಲ್ಲವೆ?'

'ಕೊರಳಿಲ್ಲದಿದ್ದರೆ ಕೆಲಸ ನಡೆಯುವಲ್ಲ, ಆದ್ದರಿಂದ ಕೊರಳನ್ನುಳಿಸಿಕೊಳ್ಳಲು ಇಷ್ಟೆಲ್ಲ ಹಂಚಿಕೆಯೊ?'

'ಹಾಗೇ ಎನ್ನು'

ಈ ಶೀಘ್ರ ಪ್ರಶ್ನೋತ್ತರದ ಸಮಯ ಕಾರ್ಯದರ್ಶಿ ಪೆನ್ಸಿಲಿಂದ ಗೀಚುವ ಸದ್ದೊಂದೇ ರುಬಷೊವಗೆ ಕೇಳುತ್ತಿದ್ದುದು. ದೀಪದ ಶುಭ್ರವಾದ ಬೆಳಕು ಜಲಪಾತದಿಂದ ನೀರು ಸುರಿಯುವಂತೆ ಸುರಿಯುತ್ತಿತ್ತು. ಅದರ ಉಷ್ಣವೂ ಅತಿರೇಕವಾಗಿದ್ದುದರಿಂದ ರುಬಷೊವ

ಹಣೆಯ ಬೆವರನ್ನೊರಸಿಕೊಳ್ಳಬೇಕಾಗಿತ್ತು. ಕಣ್ಣನ್ನು ತೆರೆಯಲು ಎಷ್ಟು ಪ್ರಯತ್ನಿಸಿದರೂ ಆಗುತ್ತಿರಲಿಲ್ಲ. ತೆರೆಯುವುದಕ್ಕಿಂತ ಮುಚ್ಚಿಕೊಂಡಿರುವ ಅವಧಿಯೇ ದೀರ್ಘವಾಗಹತ್ತಿತು. ಪ್ರಶ್ನೋತ್ತರಗಳ ಅನಂತರದ ನಡುವಣ ಮೌನವಾದ ಅವಧಿಯಲ್ಲಿ ಪ್ರಾಯಃ ತಾನು ನಿದ್ದೆ ಹೋಗಿರಬೇಕೆಂದೆನಿಸಿತು ರುಬಷೊವಗೆ–ಗ್ಲೆಟ್‌ಕಿನನ ಮುಂದಿನ ಮಾತು ಅವನನ್ನು ಹೊಡೆದೆಬ್ಬಿಸಿತು.

ಗ್ಲೆಟ್‌ಕಿನ್, 'ನಿನ್ನ ಹಿಂದಿನ ಹೇಳಿಕೆಗಳು ನಿನ್ನ ಸ್ವಂತ ಅಭಿಪ್ರಾಯಗಳನ್ನು ಬಚ್ಚಿಟ್ಟು ಪಾರ್ಟಿಯನ್ನು ಮೋಸಗೊಳಿಸುವ ಮತ್ತು ನಿನ್ನ ಕೊರಳನ್ನುಳಿಸಿಕೊಳ್ಳುವ ಹಂಚಿಕೆಗಳಾಗಿದ್ದುವು ಅಲ್ಲವೆ?'

'ನಾನದನ್ನು ಒಪ್ಪಿಕೊಂಡಾಯಿತಲ್ಲಾ?'

'ಅರ್ಲೋವಳನ್ನು ನೀನು ಬಹಿರಂಗವಾಗಿ ನಿರಾಕರಿಸಿದ್ದಕ್ಕೂ ಇದೇ ಕಾರಣ ತಾನೇ?'

ರುಬಷೊವ ಮೂಕನಂತೆ ಗೋಣಲ್ಲಾಡಿಸಿದನು. ಕಣ್ಣುಗುಡ್ಡೆಯ ಒತ್ತಡವು ಬಲ ಕೆನ್ನೆಯ ನರಮಂಡಲವನ್ನು ಅಮುಕುತ್ತಿರುವಂತೆ ಭಾಸವಾಯಿತು. ಹಲ್ಲುನೋವೂ ಮತ್ತೆ ಆರಂಭವಾಗಿತ್ತು.

'ಅರ್ಲೋವಾ ನಿನ್ನನ್ನು ತನ್ನ ರಕ್ಷಣೆಯ ಮುಖ್ಯ ಸಾಕ್ಷಿಯಾಗಿ ಎಷ್ಟೋ ಸಲ ಕರೆದಿದ್ದಳೆಂದು ನಿನಗೆ ಗೊತ್ತಿಲ್ಲವೆ?'

'ಹಾಗೆಂದು ಯಾರೋ ಹೇಳಿದರು' ಎಂದ ರುಬಷೊವ. ಹಲ್ಲುನೋವಿನ ಸೆಡೆತ ಬಲವಾಯಿತು.

'ನೀನು ಇದೇ ಈಗ ಯಾವುದನ್ನು ಸುಳ್ಳೆಂದು ಕರೆದೆಯೋ ಆ ಘೋಷಣೆಯ ಆಧಾರದ ಮೇಲಿಂದ ಅರ್ಲೋವಳಿಗೆ ಮರಣದಂಡನೆ ಕೊಡಲ್ಪಟ್ಟಿತೆಂಬುದೂ ನಿನಗೆ ನಿಸ್ಸಂದೇಹವಾಗಿ ತಿಳಿದಿರಬೇಕಲ್ಲವೆ?'

'ಇರಬಹುದು.'

ರುಬಷೊವಗೆ ಮೋರೆಯ ಬಲಭಾಗವನ್ನು ಯಾರೋ ಗುದ್ದುತ್ತಿರುವಂತೆ ಅನಿಸಿತು. ತಲೆ ಭಾರವಾಗಿ ಕೆಳಗೆ ಕುಸಿಯುತ್ತಿತ್ತು. ಬಹಳ ಕಷ್ಟದಿಂದ ಅದನ್ನು ಎತ್ತಿ ಹಿಡಿಯಬೇಕಾಗಿತ್ತು. ಗ್ಲೆಟ್‌ಕಿನನ ಸ್ವರ ಅವನ ಕಿವಿಯನ್ನು ಛೇದಿಸುತ್ತ ಹೊರಟಿತು.

'ಅಂದರೆ ಅರ್ಲೋವಾ ನಿರಪರಾಧಿಯಾಗಿದ್ದಿರಲೂ ಬಹುದು.'

'ಇರಬಹುದು.' ನೆತ್ತರಿನ ರುಚಿಯಂತೆ ನಾಲಗೆಯ ತುದಿಯಲ್ಲಿ ನಿಂತಿದ್ದ ಅಣಕದ ಅವಶೇಷವನ್ನು ರುಬಷೊವ ಹೊರಗೆಡವಿದನು.

'. . . ಕೊರಳನ್ನು ಕಾಯುವ ಉದ್ದೇಶದಿಂದ ನೀನು ಕೊಟ್ಟ ಸುಳ್ಳು ಹೇಳಿಕೆಯಿಂದಾಗಿ ಆಕೆಯನ್ನು ಗಲ್ಲಿಗೇರಿಸಲಾಯಿತಲ್ಲವೆ?'

'ತಕ್ಕಮಟ್ಟಿಗೆ ನೀನಂದುದೆಲ್ಲ ಸರಿ' ಎಂದು ರುಬಷೊವ ಬಹಿರಂಗ ವಾಗಿ ಹೇಳಿದರೂ ಒಳಗಿಂದೊಳಗೆ ಆತ್ಮಗತವಾಗಿ ಹತವೀರ್ಯವಾದ ಕ್ರೋಧದಲ್ಲಿ 'ನೀಚಾ, ಸರಿ, ಸರಿ ನೀನಂದುದೆಲ್ಲವೂ ನಗ್ನಸತ್ಯವೇನೋ ನಿಜ. ನಮ್ಮಿಬ್ಬರಲ್ಲಿ ಯಾರು ಹೆಚ್ಚು ನೀಚರೆಂದು ಇನ್ನೂ ತಿಳಿಯಬೇಕಾ ಗಿದೆಯಷ್ಟೆ. ಆದರೇನುಮಾಡಲಿ, ನೀನು ನನ್ನ ಕೊರಳನ್ನೇ ಅಮುಕಿ ಹಿಡಿದಿದ್ದೀಯಾ, ನನ್ನ ರಕ್ಷಣೆಯನ್ನು ನಾನು ಹೇಗೆ ಮಾಡಿಕೊಳ್ಳಲಿ? ಉಯ್ಯಾಲೆಯಿಂದ ಕೆಳಗೆ ಹಾರಲು ಬಿಡದಿದ್ದರೋ? ನನಗೆ ಸ್ವಲ್ಪ ನಿದ್ದೆ ಮಾಡಲು ಬಿಟ್ಟದ್ದರೆ ಸಾಕಿತ್ತು. ಇದೇ ರೀತಿ ಚಿತ್ರಹಿಂಸೆಯನ್ನು ಮುಂದು ವರಿಸಿದರೆ ಇವನಿಗೆ ಪಾಠ ಕಲಿಸುತ್ತೇನೆ–ಹೇಳಿದ್ದನ್ನೆಲ್ಲ ಹಿಂದೆ ತೆಗೆದು ಕೊಳ್ಳುತ್ತೇನೆ. ನಾನು ಹೇಗೂ ಆಯುಷ್ಯ ಸಂದವನು, ಇವನನ್ನೂ ಮುಗಿಸಿಬಿಡುತ್ತೇನೆ' ಎಂದುಕೊಂಡನು.

'ಇಷ್ಟಾಗಿಯೂ ನಿನ್ನನ್ನು ನಾವು ಮರ್ಯಾದೆಯಾಗಿ ಕಾಣಬೇಕೆ? ಕ್ರಿಮಿನಲ್ ಚಟುವಟಿಕೆಗಳಿಗೆ ನಾನು ಹೊಣೆಯಲ್ಲ ಎನ್ನುತ್ತೀಯಾ. ಅದನ್ನು ನಾವು ನಂಬುತ್ತೇವೆಂದು ಭಾವಿಸಿದಿಯಾ?' ಗ್ಲೆಟ್‌ಕಿನ್ ಅದೇ ನೀರಸ ಸ್ವರದಲ್ಲಿ ಗದರಿಸಿದನು.

ರುಬಷೊವ ತಲೆಯನ್ನೆತ್ತಿ ಹಿಡಿಯುವ ಪ್ರಯತ್ನವನ್ನು ನಿಲ್ಲಿಸಿ ದನು. ಗ್ಲೆಟ್‌ಕಿನ್ ಹಾಗೆ ನಂಬದಿರಲು ಕಾರಣವಿಲ್ಲದಿಲ್ಲ. ಉದ್ದೇಶ ಪೂರ್ವಕವಾದ ಅಸತ್ಯ ಯಾವುದು, ದ್ವಂದ್ವಾತ್ಮಕ ಭೌತಿಕ ಪ್ರಕ್ರಿಯೆಗೆ ಸಂಬಂಧಿಸಿದ ಅಸತ್ಯ ಯಾವುದು ಎಂಬುದರ ಚಕ್ರವ್ಯೂಹದಿಂದ ತಾನೇ ಇನ್ನು ಮುಕ್ತನಾಗಲಿಲ್ಲ, ಸತ್ಯ ಯಾವುದು ಭ್ರಾಂತಿ ಯಾವುದೆಂಬುದರ ನಿರ್ಣಯ ಮಾಡಿಕೊಳ್ಳಲಿಲ್ಲ ಎನ್ನುವಾಗ ಗ್ಲೆಟ್‌ಕಿನ್‌ನನ್ನು ದೂರಿ ಫಲ ವೇನು? ಅಂತಿಮಸತ್ಯವು ನಮಗಿಂತ ಯಾವಾಗಲೂ ಒಂದು ಹೆಜ್ಜೆ

ಮುಂದೆಯೇ ಸಾಗುತ್ತದೆ. ನಮ್ಮ ಕೈಗೆ ಸಿಗುವುದು ಅದಕ್ಕೆ ಸ್ವಲ್ಪ ಹಿಂದಿನ ಸುಳ್ಳು—! ಅಂತಿಮ ಸತ್ಯಸಾಧನೆಗಾಗಿ ನಾವು ಉಪಯೋಗಿಸುವ ಸುಳ್ಳು. ಆದರೆ ಈ ಸಲ ತಾನು ಹೇಳುವಂಥದೆಲ್ಲ ಪ್ರಾಮಾಣಿಕವಾಗಿರುತ್ತದೆಂದೂ, ಕೊನೆಯ ನಿಲ್ದಾಣವನ್ನು ಮುಟ್ಟಿಯಾಯಿತೆಂದೂ ಹೇಳಿದರೆ ಗ್ಲೆಟ್‌ಕಿನ್ ನಂಬುವನೆ? ನಿದ್ದೆ ಹೋಗೋಣ, ಕಣ್ಣಿಗೆ ಕಾಣಿಸದಂತೆ ನುಸುಳಿ ಹೋಗೋಣ ಎಂದು ನಾವು ಬಯಸುತ್ತಿರುವಾಗಲೇ ಯಾರಾದರೊಬ್ಬನೊಡನೆ ವಾದಿಸಬೇಕಾದ್ದು, ಮಾತಿನಿಂದ ಅವನನ್ನು ನಂಬಿಸಲೇಬೇಕಾದ್ದು ನಮ್ಮ ಕರ್ಮವೆಂದು ಕಾಣುತ್ತದೆ........'

'ಪಾರ್ಟಿಗೆ ನಾನು ವಿಧೇಯನೆಂಬುದನ್ನು ಇನ್ನೊಮ್ಮೆ ತೋರಿಸಬೇಕೆಂಬ ಇಚ್ಛೆಯೊಂದಲ್ಲದೆ ನನಗೆ ಬೇರಿನ್ನೇನೂ ಬೇಡ. ನಾನು ಹೇಳಿದ್ದನ್ನು ನಂಬಿ ಎನ್ನುವುದೂ ನಾನು ಇಷ್ಟಕ್ಕಾಗಿಯೆ' ಎಂದನು ರುಬಷೊವ.

'ಸಂಪೂರ್ಣವಾಗಿ ಅಪರಾಧ ಸ್ವೀಕಾರ ಮಾಡುವುದಷ್ಟೇ ಇನ್ನು ನಿನಗೆ ಸಾಕ್ಷಿ. ನಿನ್ನ ವಿರೋಧ ಪ್ರವೃತ್ತಿ ಮತ್ತು ಉನ್ನತ ಆದರ್ಶಗಳ ಕುರಿತು ನಮಗೆ ಬೇಕಾದಷ್ಟು ಅನುಭವವಿದೆ. ನಿನ್ನ ಕ್ರಿಮಿನಲ್ ಆಚರಣೆಗಳನ್ನು ಸಂಪೂರ್ಣವಾಗಿ ಬಹಿರಂಗದಲ್ಲಿ ನೀನು ಸ್ವೀಕರಿಸುವುದಷ್ಟೇ ನಮಗೀಗ ಬೇಕಾಗಿರುವುದು. ಪಾರ್ಟಿಯ ಸೇವೆ ಮಾಡುವ ಇಚ್ಛೆ ನಿನಗಿದ್ದರೆ ನಿನಗಿರುವ ದಾರಿ ಒಂದೇ ಒಂದು: ವಿರೋಧ ಪ್ರವೃತ್ತಿಯು ಎಂತೆಂತಹ ದುಷ್ಪರಿಣಾಮಗಳಿಗೆ ಮೂಲವಾಗುವುದೆಂಬುದನ್ನು ಜನತೆಗೆ ತಿಳಿಸಲು ನೀನೇ ಒಂದು ಎಚ್ಚರಿಕೆ, ಉದಾಹರಣೆ.

ರುಬಷೊವ ಒಂದನೆ ನಂಬರಿನವನ ರೆಸ್ಟೊರೆಂಟ್ ಊಟವನ್ನು ಜ್ಞಾಪಿಸಿಕೊಂಡನು. ಮುಖದ ನರಗಳ ಒತ್ತಡ ಅಧಿಕವಾದರೂ, ನೋವು ತೀವ್ರವಾಗಿರಲಿಲ್ಲ, ಸುಡುತ್ತಿರಲಿಲ್ಲ. ಮತ್ತೊಮ್ಮೆ ರೆಸ್ಟೊರೆಂಟ್ ಊಟದ ನೆನಪು ಸುಳಿಯುವಾಗ ರುಬಷೊವನ ಮುಖವು ವಿಕಾರವಾಯಿತು.

'ನಾನು ಮಾಡದಿರುವ ಅಪರಾಧಗಳನ್ನು ಒಪ್ಪಿಕೊಳ್ಳಲು ನಾನು ಸಿದ್ಧನಾಗಿಲ್ಲ' ಎಂದನು.

'ಅದು ಹೇಗಾದೀತು, ಖಂಡಿತವಾಗಿ ಸಾಧ್ಯವಿಲ್ಲ' ಎಂದು ಹೇಳುವ ಗ್ಲೆಟ್‌ಕಿನನ ಸ್ವರದಲ್ಲಿ ಮೊದಲ ಬಾರಿ ವಿಡಂಬನೆ ಬೆರೆತಂತೆ ಕಾಣುತಿತ್ತು.

'ಖಂಡಿತವಾಗಿ ಸಾಧ್ಯವಿಲ್ಲ' ಎಂಬ ಮಾತು ರುಬಷೊವನ ಕಿವಿಗೆ ಬಿದ್ದ ಮೇಲಿನದೆಲ್ಲ ಆತನಿಗೆ ಅಸ್ಪಷ್ಟವಾಗಿ ಕೇಳಿಸುತಿತ್ತು, ಆ ಮೇಲೆ ಅವನಿಗೆ ತಾನು ನಿದ್ದೆಹೋಗಿರುವೆನೆಂದೂ, ನಿದ್ದೆಯಲ್ಲಿ ಒಂದು ಸವಿಗನಸನ್ನು ಕಂಡೆನೆಂದೂ ಜ್ಞಾಪಕವಾಯಿತು. ಸ್ವಪ್ನದಲ್ಲಿ ತನ್ನ ಹಳ್ಳಿಯ ಬಂಗಲೆಯ ಉದ್ದವಾದ ವೃಕ್ಷರಾಶಿಯೂ, ಅದರ ಮೇಲ್ಗಡೆ ತಾನು ಬಾಲ್ಯದಲ್ಲಿ ಕಂಡ ಮೇಘರಾಶಿಯೂ, ಅವನಿಗೆ ಗೋಚರವಾಯಿತು. ಎಚ್ಚರವಾದಾಗ ಕೋಣೆಯಲ್ಲಿ ಮೂರನೆಯ ವ್ಯಕ್ತಿಯೊಬ್ಬ ಬಂದ ಹಾಗಿತ್ತು. ಗ್ಲೆಟ್‌ಕಿನ್ ನಿಂತುಕೊಂಡು ಗಟ್ಟಿಯಾಗಿ ಒದರುತ್ತಿದ್ದನು: 'ನಮ್ಮ ಕಾರ್ಯದ ಕಡೆಗೆ ಸ್ವಲ್ಪ ಲಕ್ಷ್ಯ ಕೊಡು........ನಿನಗೆ ಈ ವ್ಯಕ್ತಿಯ ಪರಿಚಯವಿದೆಯೋ?'

ರುಬಷೊವ ಗೋಣಲ್ಲಾಡಿಸಿದನು. ಸೀಳ್ಬಾಯಿಯವನು ಅಂಗಳದಲ್ಲಿ ತಿರುಗಾಡುವಾಗ ಹಾಕಿಕೊಳ್ಳುತ್ತಿದ್ದ ದಪ್ಪ ಕಂಬಳಿಯನ್ನು ಈಗ ಹೊದ್ದಿರಲಿಲ್ಲವಾದರೂ ಅವನನ್ನು ಗುರುತಿಸುವುದು ಕಷ್ಟವಾಗಲಿಲ್ಲ: ರುಬಷೊವನ ಕಣ್ಣೆದಿರು ಅತ್ಯಂತ ಪರಿಚಯದ ಕೆಲವು ಸಂಖ್ಯೆಗಳು ಅನುಕ್ರಮವಾಗಿ ಹಾದುವು: 2—3; 1—1; 4—3; 1—5; 3—2; 2—4 ........... 'ಸೀಳ್ಬಾಯಿಯವನು ನಿನಗೆ ಶುಭಾಶಯ ಕಳಿಸಿದ್ದಾನೆ'– ೪೦೨ ಯಾವ ಸಂದರ್ಭದಲ್ಲಿ ಈ ಸಂದೇಶವನ್ನು ತನಗೆ–ಹೇಳಿದನೋ? ನೆನಪಾಗುವುದಿಲ್ಲ.

'ನಿನಗೆ ಈತನ ಪರಿಚಯ ಎಲ್ಲಿ, ಯಾವಾಗ?'

ರುಬಷೊವ ಪ್ರಯತ್ನಪೂರ್ವಕವಾಗಿ 'ಕೆಳಗಿನ ಅಂಗಳದಲ್ಲಿ ನನ್ನ ಕಿಟಕಿಯಿಂದ ಇವನನ್ನು ನೋಡಿದೆ.' ಎಂದನು.

'ಅದಕ್ಕೆ ಮೊದಲು ನಿನಗೆ ಈತನ ಪರಿಚಯವಿಲ್ಲವೆ?'

ಸೀಳ್ಬಾಯಿಯವನು ಬಾಗಿಲ ಬಳಿ ನಿಂತಿದ್ದನು. ಅವನ ಮೇಲೆ ದೀಪದ ಪ್ರಕಾಶ ಜೋರಾಗಿ ಬೀಳುತಿತ್ತು. ಸಾಮಾನ್ಯ ಹಳದಿಯಾಗಿ

ಕಾಣುತ್ತಿದ್ದ ಅವನು ಈಗ ಬೆಳ್ಳಗಾಗಿ ತೋರುತ್ತಿದ್ದನು. ಸೀಳಾದ ತುಟಿಯು ನಡುಗುತ್ತಿತ್ತು. ನಾಟಕದಲ್ಲಿ ಬರುವ ಭೂತದ ಛಾಯೆಯಂತೆ ಆತ ಕಾಣುತಿದ್ದನು. ಹೊಸ ಸಂಖ್ಯೆಗಳ ಸಾಲು ರುಬಷೊವನ ಸ್ಮೃತಿ ಪಟಲದಲ್ಲಿ ಹಾಯ್ದಿತು. 4-5; 3-5; 4-5; —'ನಿನ್ನೆ ಚಿತ್ರಹಿಂಸೆಗೆ ಗುರಿಪಡಿಸಿದರು.' ಅದೇ ಹೊತ್ತಿಗೆ ಸರಿಯಾಗಿ ಈ ಮಾನವಭಗ್ನಾವಶೇಷದ ಮೂಲಪ್ರತಿಯನ್ನು ತಾನೆಂದೋ ಕಂಡ ನೆನಪು ಹಠಾತ್ ಮರುಕಳಿಸಿತು.

'ಸರಿಯಾಗಿ ನೆನಪಾಗದು. ಹತ್ತಿರದಲ್ಲಿ ನೋಡುವಾಗ ಹಿಂದೊಮ್ಮೆ ಎಲ್ಲೋ ನೋಡಿರಬೇಕೆಂದು ಅನಿಸುತ್ತದೆ' ಎಂದು ಗ್ಲೆಟ್‌ಕಿನನ ಪ್ರಶ್ನೆಗೆ ರುಬಷೊವ ಉತ್ತರಿಸಿದನು.

ಈ ಉತ್ತರ ತಾನು ಕೊಡದಿದ್ದರೆ ಚೆನ್ನಾಗಿತ್ತೆಂದು ಅವನಿಗೆ ಆ ಮೇಲೆ ಅನಿಸಿತು. ಗ್ಲೆಟ್‌ಕಿನ್ ಉಸಿರುಬಿಡಲೂ ಸಮಯಕೊಡುವಂತೆ ತೋರಲಿಲ್ಲ. ಹಕ್ಕಿ ತನ್ನ ಕೊಳ್ಳೆಯನ್ನು ಕೊಕ್ಕಿನಿಂದ ಕುಕ್ಕುವಂತೆ ಗ್ಲೆಟ್‌ಕಿನ್ ಮೇಲಿಂದ ಮೇಲೆ ಪ್ರಶ್ನೆಗಳಿಂದ ಕುಕ್ಕುತಿದ್ದನು.

'ನೀನೀತನನ್ನು ಕೊನೆಯ ಸಲ ಭೇಟಿಯಾದ್ದೆಲ್ಲಿ? ಪಾರ್ಟಿಯಲ್ಲಿ ನಿನ್ನ ಸ್ಮರಣಶಕ್ತಿಯು ಗಾದೆ ಮಾತಾಗಿರಲಿಲ್ಲವೆ?

ರುಬಷೊವ ಮೌನವಾಗಿ ಎಲ್ಲಿ, ಎಲ್ಲಿ ಎಂದು ನೆನಪಿನ ಕಂತೆಯಲ್ಲಿ ಕೈಯಾಡಿಸಿದನು. ಸೀಳ್ಬಾಯಿಯವನು ನಿಂತಲ್ಲಿಂದ ಕದಲಲಿಲ್ಲ. ಅವನು ಸೀಳಾದ ತುಟಿಯನ್ನು ನಾಲಗೆಯಿಂದ ನೆಕ್ಕುತ್ತಿದ್ದನು. ಅವನ ದೃಷ್ಟಿ ರುಬಷೊವನಿಂದ ಗ್ಲೆಟ್‌ಕಿನ್ ಕಡೆಗೆ, ಗ್ಲೆಟ್‌ಕಿನನಿಂದ ರುಬಷೊವನ ಕಡೆಗೆ ಹೊಯ್ದಾಡುತಿತ್ತು.

ಕಾರ್ಯದರ್ಶಿ ಬರೆಯುವುದನ್ನು ನಿಲ್ಲಿಸಿದ್ದಳು. ದೀಪದ ಝೇಂಕಾರ, ಮತ್ತು ಗ್ಲೆಟ್‌ಕಿನನ ಅಂಗಿಯ ಕೈ ಗುಬ್ಬಿಗಳ ಶಬ್ದ ಮಾತ್ರ ಮೌನವನ್ನು ಭೇದಿಸುತಿತ್ತು. ಮುಂದಿನ ಪ್ರಶ್ನೆಗೆ ಸಿದ್ಧನಾಗಿ ಗ್ಲೆಟ್‌ಕಿನ್ ಮೊಣಕೈಯನ್ನು ಡೆಸ್ಕಿನ ಮೇಲೆ ಊರಿಕೊಂಡನು:

'ನೀನು ಉತ್ತರ ಕೊಡುವುದಿಲ್ಲ, ಅಲ್ಲವೆ?'

'ನನಗೆ ನೆನಪಾಗುವುದಿಲ್ಲ.'

'ಸರಿ' ಎಂದು ಹೇಳಿ ಗ್ಲೆಟ್‌ಕಿನ್ ಸೀಳ್ಬಾಯಿಯುವನ ಕಡೆಗೆ ತಿರುಗಿ, 'ರುಬಷೊವರ ನೆನಪಿಗೆ ಸ್ವಲ್ಪ ನೆರವಾಗುತ್ತೀಯಾ? ನೀನಿವರನ್ನು ಕೊನೆಯ ಸಲ ಕಂಡದ್ದೆಲ್ಲಿ'

ಸೀಳ್ಬಾಯಿಯುವನ ಮುಖವು ಮತ್ತಷ್ಟು ಬಿಳಿಚಿಕೊಂಡಿತು. ಅವನ ದೃಷ್ಟಿ ವಿಶ್ರಾಂತಿಯ ಯಾವುದೋ ಸ್ಥಳವನ್ನು ಹುಡುಕುವಂತೆ ಸ್ವಲ್ಪ ಹೊತ್ತು ಕಾರ್ಯದರ್ಶಿಯ ಮೇಲೂ ಆ ಮೇಲೆ ಎತ್ತೆತ್ತಲೂ ಹರಿಯಿತು. ನಾಲಗೆಯಿಂದ ತುಟಿಯನ್ನು ನೆಕ್ಕಿಕೊಂಡು ಒಂದೇ ವಾಕ್ಯದಲ್ಲಿ, 'ಪಾರ್ಟಿಯ ನಾಯಕರನ್ನು ವಿಷವಿಕ್ಕಿ ಕೊಲ್ಲಬೇಕೆಂದು ರುಬಷೊವ ನನಗೆ ಆಜ್ಞಾಪಿಸಿದ್ದರು' ಎಂದು ಉತ್ತರಿಸಿದನು.

ಭಗ್ನಜೀವಿಯ ಕೋಮಲ ಕಂಠವನ್ನು ಕೇಳಿ ರುಬಷೊವಗೆ ಅಚ್ಚರಿ ಎನಿಸಿತು—ಅವನ ನೋಟಕ್ಕೂ, ಅವನ ಸರಸವಾದ ಕಂಠಕ್ಕೂ ಯಾವ ಮೇಳವೂ ಇರಲಿಲ್ಲ. ರುಬಷೊವಗೆ ಅವನ ಮಾತಿನ ಅರ್ಥವಾಗಲು ಕೆಲಕ್ಷಣಗಳ ಕಾಲವೇ ತಗಲಿತೆನ್ನಬಹುದು. ಅವನ ದರ್ಶನವಾದ ಕೂಡಲೆ ರುಬಷೊವ ಇಂಥದೇನೋ ಕಾದಿದೆ ಎಂದು ಭಾವಿಸಿದ್ದರೂ ಆರೋಪವು ಅಸಹ್ಯವಾಗಿತ್ತು. ಗ್ಲೆಟ್‌ಕಿನನ ಸ್ವರವು ಕರ್ಕಶವಾಗಿ ಕೇಳಿಸುತ್ತಿತ್ತು:

'ನಾನು ಕೇಳಿದ್ದು ಅದನ್ನಲ್ಲ. ರುಬಷೊವರನ್ನು ನೀನು ನೋಡಿದ್ದೆಲ್ಲಿ ಎಂಬುದನ್ನು ಹೇಳು.'

ಇದು ತಪ್ಪು ಎಂದುಕೊಂಡನು ರುಬಷೊವ. ಉತ್ತರ ಸರಿಯಾಗಲಿಲ್ಲವೆಂದೇತಕ್ಕೆ ಒತ್ತಿ ಹೇಳಬೇಕಾಗಿತ್ತೋ ಎಂದೆನಿಸಿತು. ಹೇಗೂ ಆತನಿಗೇನೂ ಗೊತ್ತಾಗುತ್ತಿರಲಿಲ್ಲ. ಸೀಳ್ಬಾಯಿಯುವನ ಎರಡನೆಯ ಉತ್ತರ ಇನ್ನಷ್ಟು ಸುಶ್ರಾವ್ಯವಾಗಿ ಹೊರಟಿತು: 'ಬಿ'ಯಲ್ಲಿನ ವ್ಯಾಪಾರಿ ನಿಯೋಗದ ಸಂತೋಷ ಕೂಟದಲ್ಲಿ ರುಬಷೊವರನ್ನು ನಾನು ಭೆಟ್ಟಿಯಾದೆ. ಈ ಭಯಂಕರ ಸೂಚನೆಯನ್ನು ಅವರು ನನಗೆ ಕೊಟ್ಟದ್ದು ಅಲ್ಲೇ.'

ಮಾತನಾಡುತ್ತಿದ್ದಂತೆ ಆತನ ದೃಷ್ಟಿ ರುಬಷೊವನ ಮೇಲೆರಗಿ ಅಲ್ಲೆ ಸ್ಥಿರವಾಯಿತು. ರುಬಷೊವ ಕನ್ನಡಕವನ್ನು ಹಾಕಿಕೊಂಡು

ತರುಣನನ್ನು ದಿಟ್ಟಿಸಿದನು. ಆ ಬಡಪಾಯಿಯ ದೃಷ್ಟಿಯಲ್ಲಿ ಕ್ಷಮಾ ಯಾಚನೆಯ ಚಿಹ್ನೆ ಯಾವುದೂ ಕಾಣಲಿಲ್ಲ, ಬದಲು ಚಿತ್ರಹಿಂಸೆಗೆ ಗುರಿಯಾದ ಮನುಷ್ಯನ ನೋಟವಿತ್ತು. ಕಣ್ಣನ್ನು ಮೊದಲು ಹಿಂದೆಗೆದವನು ರುಬಷೊವೇ.

ಬೆನ್ನಹಿಂದಿಂದ ಗ್ಲೆಟ್‌ಕಿನನ ಸ್ವರವು ವಿಶ್ವಾಸಪೂರ್ವಕವಾಗಿ ಕೇಳಿಸುತ್ತಿತ್ತು: 'ಭೇಟಿಯ ತಾರೀಕನ್ನು ಹೇಳಬಲ್ಲೆಯಾ?'

ಸೀಳ್ತಾಯಿಯವನು ಅದೇ ಸುಶ್ರಾವ್ಯ ಧ್ವನಿಯಲ್ಲಿ 'ಚೆನ್ನಾಗಿ ನೆನಪಿದೆ. ಕ್ರಾಂತಿಯ ಇಪ್ಪತ್ತನೆಯ ವರ್ಧಂತಿಯ ದಿನ' ಎಂದನು.

ರುಬಷೊವನ ಕಣ್ಣಲ್ಲೇ ಭಗ್ನಜೀವಿಯ ಹೊಳೆಗಣ್ಣು ನೆಡುತಿತ್ತು. ರುಬಷೊವಗೆ ಏನೋ ನೆನಪು ಬರುವಹಾಗಿತ್ತು ಆ ನೋಟದಲ್ಲಿ. ಸರಿ, ಈತನಾರೆಂಬುದು ಈಗ ಹೊಳೆಯಿತು: ಆದರೂ ಅದರಲ್ಲಿ ಅತ್ಯಾಶ್ಚರ್ಯ ಕರವಾದ್ದೇನೂ ಅವನಿಗನಿಸಲಿಲ್ಲ. ಗ್ಲೆಟ್‌ಕಿನ್ ಕಡೆಗೆ ತಿರುಗಿ ರುಬಷೊವ 'ದಿನ, ತಾರೀಕು ಸರಿಯಾಗಿದೆ. ಪ್ರೊಫೆಸರ್ ಕೀಫರರ ಮಗನ ಗುರುತು ನನಗೆ ಆಗಲಿಲ್ಲ. ಕಾರಣವಿಷ್ಟೇ ನಾನು ಇವನನ್ನು ನೋಡಿದ್ದು ಒಂದೇ ಬಾರಿ, ಅದೂ ನಿಮ್ಮ ಮುಷ್ಟಿಗೆ ಈತ ಸಿಗುವುದಕ್ಕೆ ಪೂರ್ವದಲ್ಲಿ. ಇವನ ಮೇಲೆ ಚೆನ್ನಾಗಿ ಕೆತ್ತನೆ ಕೆಲಸ ಮಾಡಿದ್ದೀರೆಂದು ನಿಮಗೆ ನೋಡಿದವರು ಧನ್ಯವಾದ ಕೊಟ್ಟಾರು' ಎಂದ.

'ಹಾಗಾದರೆ ನೀನು ಆ ದಿವಸ, ಆ ಸಂದರ್ಭದಲ್ಲಿ ಈತನನ್ನು ಭೆಟ್ಟಿಯಾದ್ದು ನಿಜವೆಂದು ಒಪ್ಪುವಿಯಲ್ಲವೆ?'

'ಮೊದಲೇ ಒಪ್ಪಿರುವೆನಲ್ಲಾ? ನನ್ನ ನತದೃಷ್ಟ ಸ್ನೇಹಿತ ಕೀಫರನ ಮಗನೆಂದು ನೀನು ಸೂಚಿಸಿದ್ದರೆ ಇವನನ್ನು ಮೊದಲೇ ಗುರುತು ಹಿಡಿಯುತ್ತಿದ್ದೆ.' ಎಂದು ರುಬಷೊವ ಆಯಾಸಿತನಾಗಿ ನುಡಿದನು.

'ಆರೋಪ ಪತ್ರದಲ್ಲಿ ಅವನ ಪೂರ್ಣ ಹೆಸರನ್ನು ಕೊಟ್ಟಿದ್ದೇವೆ.' ಎಂದು ಗ್ಲೆಟ್‌ಕಿನ್ ಹೇಳಿದನು.

'ಎಲ್ಲರಂತೆ ನನಗೂ ಪ್ರೊಫೆಸರ್ ಕೀಫರರ ಗುಪ್ತನಾಮ ಮಾತ್ರ ಗೊತ್ತು' ಎಂದನು ರುಬಷೊವ.

'ಸರಿ, ಒಳ್ಳೆಯದು, ಮುಖ್ಯವಾದ ಒಂದು ವಿಷಯವನ್ನು ನೀನು ಹೇಳಿದ ಹಾಗಾಯಿತು' ಎಂದು ಹೇಳಿ ಗ್ಲೆಟ್‌ಕಿನ್ ಸೀಳ್ಬಾಯಿಯವನಿಗೆ, 'ವರದಿ ಮುಂದುವರಿಸು. ಆ ಭೇಟಿಯಲ್ಲಿ ಏನೆಲ್ಲಾ ನಡೆಯಿತೆಂದು ಹೇಳು' ಎಂದು ಆಜ್ಞಾಪಿಸಿದನು.

ರುಬಷೊವ ಅರ್ಧ ನಿದ್ರೆಯಲ್ಲಾದರೂ ಇದು ಬೇಡವಾದ ಕೆಲಸ ಅಂದುಕೊಂಡನು. ಅಂಥ ಮೂರ್ಖತನದ ಕೆಲಸಕ್ಕೆ ಈ ಮನುಷ್ಯ ನನ್ನು ತಾನು ಎಂದಾದರೂ ನೇಮಿಸಿದ್ದೇ ಆಗಿದ್ದಲ್ಲಿ ಅವನನ್ನು ಕಂಡೊಡನೆ ಪರಿಚಯ ಆಗದಿರುತ್ತಿತ್ತೆ? ಎಂದುಕೊಂಡನು.'

ಅವರಿಬ್ಬರೂ ತನ್ನ ಪರಿಚಯದ ಕುರಿತು ಚರ್ಚಿಸುತ್ತಿದ್ದಾಗ ಸೀಳ್ಬಾಯಿಯವನು ಕತ್ತು ಜೋಲಿಸಿಕೊಂಡು ನಡುಗುವ ತುಟಿಗಳನ್ನು ದೀಪದ ಘನ ಪ್ರಕಾಶಕ್ಕೆ ಒಡ್ಡಿ ನಿಂತಿದ್ದನು. ರುಬಷೊವ ತನ್ನ ಆಪ್ತ ಮಿತ್ರನೂ, ಕ್ರಾಂತಿಯ ಮಹಾ ಇತಿಹಾಸಕಾರನೂ ಆದ ಪ್ರೊಫೆಸರ್ ಕೀಫರನನ್ನು ನೆನಪಿಗೆ ತಂದನು: ಪಾರ್ಟಿ ಕಾಂಗ್ರೆಸ್ಸಿನ ಚಿತ್ರಪಠದಲ್ಲಿ ಹಳೆಯ ನಾಯಕನ ಬಲಪಕ್ಕದಲ್ಲಿ ಕೂತವನೇ ಪ್ರೊಫೆಸರ್ ಕೀಫರ್. ಹಳೆಯ ನಾಯಕನೊಡನೆ ಇತಿಹಾಸವನ್ನು ಬರೆಯುವುದರಲ್ಲಿ ಮಾತ್ರ ವಲ್ಲದೆ ಚೆಸ್ ಆಡುವುದರಲ್ಲಿಯೂ ಸಂಗಾತಿಯಾಗಿದ್ದನು. ಅಷ್ಟೇ ಅಲ್ಲ ನಾಯಕನ ಏಕಮೇವ ಆಪ್ತ ಮಿತ್ರನೂ ಇವನೇ. 'ಹಳೆಯವನ' ಮರಣಾ ನಂತರ ಅವನ ಜೀವನ ಚರಿತ್ರೆಯನ್ನು ಬರೆಯುವ ಕೆಲಸ ಕೀಫರನಿಗೆ ಕೊಡಲಾಯಿತು. ಆತ ಹತ್ತು ವರ್ಷಗಳ ಕಾಲ ಅದಕ್ಕಾಗಿ ದುಡಿದರೂ ಜೀವನ ಚರಿತ್ರೆಗೆ ಪ್ರಕಟವಾಗುವ ಭಾಗ್ಯವಿರಲಿಲ್ಲ. ಕ್ರಾಂತಿಯ ಇತಿಹಾಸವು ಅಧಿಕಾರಿ ವರ್ಗದವರಿಂದ ಬದಲಾವಣೆಗೆ ಗುರಿಯಾಗಿತ್ತು. ಈ ಹತ್ತು ವರ್ಷಗಳ ಅವಧಿಯಲ್ಲಿ ಮುಖ್ಯರಾದವರ ಚರಿತ್ರೆಯಲ್ಲಿಯೂ ಅವರನ್ನಳೆಯುವ ಮೌಲ್ಯದ ಮಾನದಂಡದಲ್ಲಿಯೂ ಬದಲಾವಣೆಗಳು ಅನಿವಾರ್ಯವಾಗಿದ್ದುವು. ಆದರೆ ಕೀಫರನ ದೃಢನಿಷ್ಠೆಯಲ್ಲಿ ಬದಲಾವಣೆಯಾಗಿರಲಿಲ್ಲ; ಒಂದನೆಯ ನಂಬರಿನವನ ನೇತೃತ್ವದಲ್ಲಿ ಹೊಸ ಯುಗದ ಕ್ರಾಂತಿ ತತ್ವವು ಸೃಷ್ಟಿಯಾಗುತ್ತಿರುವುದರ ವಿಷಯ ಆತನಿಗೆ ಗೊತ್ತೇ ಇರಲಿಲ್ಲ........

ಸೀಕ್ಸ್ಟಾಯಿಯವನು 'ಅಂತಾರಾಷ್ಟ್ರೀಯ ಜನಾಂಗ ಶಾಸ್ತ್ರ ಸಮ್ಮೇಳನಕ್ಕೆ ನಾನು ತಂದೆಯವರ ಜತೆ ಹೋಗಿದ್ದೆನಲ್ಲಾ, ಬರುವ ದಾರಿಯಲ್ಲಿ ನಾವು ತಂದೆಯವರ ಸ್ನೇಹಿತ ರುಬಷೊವರನ್ನು ನೋಡಬೇಕೆಂದು ಮುದ್ದಾಂ 'ಬಿ' ದೇಶದ ದಾರಿಯಾಗಿ ಬಂದೆವು.' ಎಂದನು. ಇದೆಲ್ಲಾ ಸರಿ ಎಂದು ರುಬಷೊವ ಅಂದು ಕೊಂಡನು. ತನ್ನ ಹೃದಯದ ಗೋಳನ್ನು ತೋಡಿಕೊಂಡು ರುಬಷೊವನ ಸಲಹೆ ಏನೆಂದು ತಿಳಿಯವುದ ಕ್ಕೋಸ್ಕರ ಕೀಫರ ಮಿತ್ರನ ಬಳಿ ಬಂದದ್ದು ನಿಜ. ಅಂದು ಸಾಯಂಕಾಲ ಅವರಿಬ್ಬರೂ ಜತೆಯಾಗಿ ಕಳೆದ ಕೆಲ ಕ್ಷಣಗಳೆಂದರೆ ಮುದುಕನ ಜೀವನದ ಅತ್ಯಂತ ಹೃದಯಸ್ಪರ್ಶಿ ರಸನಿಮಿಷಗಳಲ್ಲೊಂದಾಗಿರಬಹುದು.

ಸೀಕ್ಸ್ಟಾಯಿಯವನು ರುಬಷೊವನ ಮೇಲೆಯೆ ಕಣ್ಣಿಟ್ಟು ಮುಂದುವರಿಸಿದನು. 'ಕ್ರಾಂತಿಯ ಇಪ್ಪತ್ತನೆಯ ವರ್ಧಂತಿಯ ದಿನವೇ ನಾವಲ್ಲಿಗೆ ಮುಟ್ಟಿದುದರಿಂದ ನನಗೆ ತಾರೀಕು ಸರಿಯಾಗಿ ಜ್ಞಾಪಕ. ರುಬಷೊವ ಸಂತೋಷಕೂಟದ ಏರ್ಪಾಡಿನಲ್ಲಿ ಮಗ್ನರಾಗಿದ್ದುದರಿಂದ ತಂದೆಯವರನ್ನು ಕಾಣಲು ಅವರಿಗೆ ಹೆಚ್ಚು ಬಿಡುವಿರಲಿಲ್ಲ. ಆದರೆ ಕೂಟವು ಮುಗಿದ ಮೇಲೆ ಸಾಯಂಕಾಲದ ಹೊತ್ತು ರುಬಷೊವರ ಸ್ವಂತ ಕೊಠಡಿಯಲ್ಲಿ ನಾವು ಅವರನ್ನು ಭೇಟಿಯಾದೆವು. ರುಬಷೊವರು ಆಯಾಸಿತರಾಗಿದ್ದಂತೆ ತೋರಿತು. ಅವರು ಆಗಲೇ ನಿಲುವಂಗಿಯನ್ನು ಧರಿಸಿದ್ದರು. ಮೇಜಿನ ಮೇಲೆ ವೈನ್, ಕೊಗ್ನೆಕ್ ಮತ್ತು ತಿಂಡಿಯನ್ನು ಸಿದ್ಧಗೊಳಿಸಿಟ್ಟಿದ್ದರು. ತಂದೆಯನ್ನು ಕಂಡಕೂಡಲೇ ಆಲಿಂಗಿಸಿ, 'ಯಾದವರಲ್ಲಿ ಕೊನೆಯವನಿಗೆ ವಿದಾಯ ಸತ್ಕಾರ' ಎಂದರು.

ರುಬಷೊವನ ಬೆನ್ನ ಹಿಂದಿನಿಂದ ಗ್ಲೆಟ್‌ಕಿನ್ ನಡುವೆ ಬಾಯಿ ಹಾಕಿ, 'ತನ್ನ ಯೋಜನೆಯು ಫಲಿಸುವುದರ ಸಲುವಾಗಿ ಚೆನ್ನಾಗಿ ಮದ್ಯ ಕುಡಿಸಬೇಕೆಂದು ರುಬಷೊವ ಹೂಡಿದ ತಂತ್ರವನ್ನು ನೀನು ಗಮನಿಸಿದೆಯಲ್ಲವೆ?' ಎಂದು ಕೇಳಿದನು.

ಸೀಕ್ಸ್ಟಾಯಿಯವನು ಇದನ್ನು ಕೇಳಿ ನಸುನಗುವಂತೆ ತೋರಿತು. ಸೀಳ್ತುಟಿಯನ್ನು ನೆಕ್ಕಿಕೊಂಡು ಆತ 'ನನಗೇನೋ ಸಂದೇಹವಾಯಿತು; ಆದರೆ ಸಂಚಿಕೆಯು ಅರ್ಥವಾಗುತ್ತಿರಲಿಲ್ಲ' ಎಂದನು.

ಪಾಪ, ಎಲ್ಲಿಂದೆಲ್ಲಿಗೆ ತಂದಿದ್ದಾರೆ ಈ ಬಡ ಪಾಯಿಯನ್ನು ಎಂದು ಕೊಂಡನು ರುಬಷೊವ.

ಗ್ಲೆಟ್‌ಕಿನ್ 'ಸರಿ, ಮುಂದುವರಿಸು' ಎಂದು ಬೊಬ್ಬಿರಿದನು.

ಸೀಳ್ಪಾಯಿಯುವನು ತುಸು ತಡೆದು 'ರುಬಷೊವ ಮತ್ತು ನನ್ನ ತಂದೆ ಬಹಳ ಹೊತ್ತಿನವರೆಗೆ ಹಳೆ ನೆನಹುಗಳನ್ನು ತೋಡಿಕೊಳ್ಳುತ್ತಿದ್ದರು. ಅವರು ಭೇಟಿಯಾಗದೆ ಬಹಳ ವರ್ಷಗಳಾಗಿರಬೇಕು. ಕ್ರಾಂತಿಪೂರ್ವದ ದಿನಗಳನ್ನೂ, ಕ್ರಾಂತಿಯ ಹಳೆಯ ನಾಯಕರನ್ನೂ, ಯಾದವೀ ಯುದ್ಧದ ಘಟನೆಯನ್ನೂ ಒಂದೊಂದಾಗಿ ಅವರು ಸ್ಮರಿಸಿಕೊಂಡರು. ನನಗೆ ಅವರು ಹೇಳುವ ಎಲ್ಲ ಘಟನೆಗಳೂ ಅರ್ಥವಾಗುವಂತಿರಲಿಲ್ಲ' ಎಂದನು.

'ಅಂದರೆ ಅವರು ಕುಡಿದದ್ದು ಹೆಚ್ಚಾಗಿತ್ತಲ್ಲವೆ?'

ಸೀಳ್ಪಾಯಿಯುವನು ವಿವಶನಾಗಿ ದೀಪದ ಪ್ರಭೆಯಲ್ಲಿ ಕಣ್ಣು ಬಿಡುತ್ತಿದ್ದನು. ಅತಿ ಪ್ರಯಾಸದಿಂದ ಆತ ನಿಂತಿರುವುದನ್ನು ರುಬಷೊವ ಗಮನಿಸಿದನು.

'ಹೌದು. ಬಹಳ ಹೆಚ್ಚಾಗಿ ಕುಡಿದಿರಬೇಕು. ನನ್ನ ತಂದೆ ಅಷ್ಟು ಆನಂದದಲ್ಲಿದ್ದುದನ್ನು ನಾನು ನೋಡದೆ ಎಷ್ಟೋ ವರ್ಷಗಳಾಗಿರಬಹುದು.'

'ನಿನ್ನ ತಂದೆಯ ಕ್ರಾಂತಿ ವಿರೋಧಕ ಚಟುವಟಿಕೆಗಳು ಬಯಲಾಗುವ ಮೂರು ತಿಂಗಳ ಮೊದಲು ಈ ಭೇಟಿ ನಡೆದದ್ದು. ಭೇಟಿಗೆ ಮೂರು ತಿಂಗಳ ತರುವಾಯ ನಿನ್ನ ತಂದೆಯನ್ನು ಗಲ್ಲಿಗೇರಿಸಿದ್ದು. ಅಲ್ಲವೆ?' ಎಂದು ಗ್ಲೆಟ್‌ಕಿನ್ ಕೂಗಿದನು.

ಸೀಳ್ಪಾಯಿಯುವನು ತುಟಿಯನ್ನು ನೆಕ್ಕಿ, ವಿದ್ಯುತ್ಪ್ರಭೆಯ ಬೇಗೆಯಲ್ಲಿ ಬೇಯುತ್ತ, ಮೌನವಾಗಿದ್ದನು. ರುಬಷೊವ ಅದೇಕೋ ಹಠಾತ್ತಾಗಿ ಏನೋ ಹೇಳಬೇಕೆಂದು ಗ್ಲೆಟ್‌ಕಿನ್ ಕಡೆಗೆ ಮೊಗದಿರುಗಿಸಿದನು. ಆದರೆ ಆ ಸುಡುಬೆಳಕಿನಲ್ಲಿ ಕಣ್ಣು ಮುಚ್ಚಿಹೋಯಿತು. ನಿಧಾನವಾಗಿ ಮತ್ತೆ ಗ್ಲೆಟ್‌ಕಿನನಿಂದ ತಿರುಗಿ ಕೂತು ಕನ್ನಡಕವನ್ನು ಅಂಗಿಯ ತೋಳಿಗೆ ಉಜ್ಜಲಾರಂಭಿಸಿದನು.

'ಅಷ್ಟು ಹೊತ್ತಿಗಾಗಲೇ ನಿನ್ನ ತಂದೆ ನಿನಗೆ ಕ್ರಾಂತಿ ವಿರೋಧಕ ಚಟುವಟಿಕೆಯ ದೀಕ್ಷೆ ಕೊಟ್ಟದ್ದರಲ್ಲವೆ?' ಎಂದು ಗ್ಲೆಟ್‌ಕಿನ್ ಕೇಳಿದನು.

'ಹೌದು'.

'ಸಂಭಾಷಣೆಯಲ್ಲಿ ಅನಗತ್ಯ ಅಂಶಗಳನ್ನು ಬಿಟ್ಟು ಮುಖ್ಯ ಮುಖ್ಯ ಪದಪುಂಜಗಳನ್ನಷ್ಟು ಹೇಳಿ ಬಿಡು.'

ಸೀಳ್ಬಾಯಿಯವನು ಬೆನ್ನ ಹಿಂದುಗಡೆ ಕೈಯನ್ನು ಕಟ್ಟಿ ಗೋಡೆ ಗೊರಗಿ ನಿಂತು 'ಸ್ವಲ್ಪ ಸಮಯ ಕಳೆದ ಮೇಲೆ ತಂದೆಯವರು ಮತ್ತು ರುಬಷೊವ ಸಂಭಾಷಣೆಯನ್ನು ವರ್ತಮಾನ ಕಾಲಕ್ಕೆ ತಿರುಗಿಸಿದರು. ಪಾರ್ಟಿಯ ವಿದ್ಯಮಾನಗಳನ್ನೂ, ನಾಯಕರ ವರ್ತನೆಗಳನ್ನೂ ಬಲವಾಗಿ ನಿಂದಿಸಿದರು. ನಾಯಕನನ್ನು 'ಒಂದನೆಯ ನಂಬರಿನವನು' ಎಂದೇ ಸಂಬೋಧಿಸುತ್ತಿದ್ದರು. ಒಂದನೆಯ ನಂಬರಿನವನ ವಿಶಾಲಪೃಷ್ಠವು ಪಾರ್ಟಿಯ ಮೇಲೆ ಸವಾರಿಮಾಡುತ್ತಿರಲಾಗಿ ಅದರ ಕೆಳಗಡೆಯ ವಾತಾ ವರಣದಲ್ಲಿ ಉಸಿರಾಡುವುದೇ ಪ್ರಯಾಸವೆಂದು ರುಬಷೊವ ಹೇಳಿದನು. ಪರದೇಶದ ಕೆಲಸವನ್ನು ಆತ ಆರಿಸುತ್ತಿದ್ದುದು ಈ ಕಾರಣದಿಂದಲಂತೆ' ಎಂದನು.

ಗ್ಲೆಟ್‌ಕಿನ್ ರುಬಷೊವನ ಕಡೆಗೆ ತಿರುಗಿ 'ಪಾರ್ಟಿಯ ನಾಯಕನಿಗೆ ವಿಧೇಯನಾಗಿರುತ್ತೇನೆಂದು ನೀನು ಪ್ರಥಮ ಸಲ ಮಾಡಿದ ಬಹಿರಂಗ ಘೋಷಣೆಯ ಕೇವಲ ದಿನಗಳ ಹಿಂದೆ ನಿನ್ನ ಬಾಯಿಯಿಂದ ಬಂದ ಶಬ್ದ ಸಮುದಾಯವಿದು' ಎಂದನು.

ರುಬಷೊವ ಬೆಳಕಿನ ಕಡೆಗೆ ಅರ್ಧವಾಸಿ ತಿರುಗಿ 'ನೀನಂದುದರಲ್ಲಿ ತಪ್ಪಿಲ್ಲ' ಎಂದನು.

'ವಿಧೇಯತೆಯನ್ನು ಬಹಿರಂಗವಾಗಿ ಘೋಷಿಸುವ ಸುದ್ದಿ ಏನಾ ದರೂ ಭೇಟಿಯ ಸಮಯ ಬಂದಿತ್ತೆ?' ಎಂದು ಗ್ಲೆಟ್‌ಕಿನ್ ಸೀಳ್ಬಾಯಿ ಯವನನ್ನು ಕೇಳಿದನು.

'ಹೌದು—ನನ್ನ ತಂದೆಗೆ ಇಂಥ ಮಾತನ್ನು ರುಬಷೊವನ ಬಾಯಿಯಿಂದ ಕೇಳಿ ನಿರಾಶೆಯುಂಟಾಯಿತು. ನಿನಗೆ ಅರುವತ್ತರ ಅರಳುಮರಳು ಎಂದು ರುಬಷೊವ ನಕ್ಕನು. ಆದಷ್ಟು ಕಾಲ ತಡೆದು

ಕೊಂಡು, ಪೆಟ್ಟು ಹೊಡೆಯುವ ಗತ್ತಿನ ಸಮಯ ಬಂದಾಗ ಹೊಡೆಯು ವುದು ಬುದ್ಧಿವಂತಿಕೆ ಎಂದನು'.

'ಗತ್ತಿನ ಸಮಯ' ಎಂಬುದರ ಅರ್ಥವೇನಂತೆ?

ತರುಣನ ದೃಷ್ಟಿ ಮತ್ತೆ ರುಬಷೊವನನ್ನು ಹುಡುಕಿಕೊಂಡು ಹೊರಟಿತು. ಅದೇಕೋ ಆತ ಗೋಡೆಯನ್ನು ಬಿಟ್ಟು ನೇರವಾಗಿ ತನ್ನ ಬಳಿ ಬಂದು ತನ್ನ ಹಣೆಗೆ ಮುದ್ದಿಡಬಹುದೇನೋ ಎಂಬ ಅಸಂಭಾವ್ಯ ಯೋಚನೆಯೊಂದು ರುಬಷೊವನ ಚಿತ್ತದಲ್ಲಿ ಮಿಂಚಿ ಮಾಯವಾಯಿತು. ಯೋಚನೆ ಬರುತ್ತಲೇ ಆತ ನಗುತ್ತಿದ್ದಂತೆ 'ಪಾರ್ಟಿಯ ನಾಯಕನನ್ನು ಸ್ಥಾನದಿಂದ ಕಿತ್ತೊಗೆಯುವ ಸಮಯವೇ ಗತ್ತಿನ ಸಮಯ'ವೆಂದು ತರುಣ ಉತ್ತರಿಸಿದನು.

ರುಬಷೊವನು ನಗುತ್ತಿದ್ದುದನ್ನು ನೋಡಿದ ಗ್ಲೆಟ್‌ಕಿನ 'ಏನು, ಹಳೆಯ ನೆನಹುಗಳಿಗಾಗಿ ನಗೆ ಬರುತ್ತಿದೆಯೆ?' ಎಂದು ವಿಚಾರಿಸಿದನು. ರುಬಷೊವ 'ಇದ್ದರೂ ಇರಬಹುದು' ಎಂದನು. ರುಬಷೊವ ಕೈಗುಬ್ಬಿ ಯನ್ನು ಸರಿಪಡಿಸುತ್ತ 'ಅಂದರೆ ರುಬಷೊವನು ನಾಯಕನ ಸ್ಥಾನಚ್ಯು ತಿಯ ಸಮಯವನ್ನು ನಿನ್ನ ಹತ್ತಿರ ಪ್ರಸ್ತಾಪಿಸಿದನೆಂದಾಯಿತು. ಈ ಕೆಲಸ ವನ್ನು ಕಾರ್ಯಗತಗೊಳಿಸುವ ದಾರಿ ಯಾವುದಂತೆ?' ಎಂದು ಸೀಳ್ನಾಯಿ ಯವನನ್ನು ಪ್ರಶ್ನಿಸಿದನು.

'ಒಂದಲ್ಲ ಒಂದು ದಿನ ಪಾಪದ ಕೊಡವು ಭರ್ತಿಯಾದಾಗ ಪಾರ್ಟಿಯೇ ಅವನನ್ನು ಸ್ಥಾನಭ್ರಷ್ಟಗೊಳಿಸೀತು ಅಥವಾ ರಾಜೀನಾಮೆ ಯನ್ನು ಹೊರಿಸೀತು ಎಂಬುದು ನನ್ನ ತಂದೆಯ ಅಭಿಪ್ರಾಯ. ಆದುದ ರಿಂದ ವಿರೋಧಿ ಪಕ್ಷವು ಪ್ರಚಾರವನ್ನೇ ಆಧರಿಸಬೇಕೆಂದು ಅವರು ಹೇಳಿ ದರು.'

'ರುಬಷೊವ ಏನಂದ?'

'ರುಬಷೊವ ನನ್ನ ತಂದೆಯ ಸೂಚನೆಗೆ ಸಕ್ಕು ಮರಳಿ ಅರವತ್ತರ ಅರಳುಮರಳು ಎಂದನು. ಅನಂತರ ಒಂದನೆಯ ನಂಬರಿನವನ ಸ್ಥಾನವು ಅಕಸ್ಮಾತ್–ಸಂಭವವೇನೂ ಅಲ್ಲವೆಂದೂ, ಅದು ತನ್ನ ಅಭಿ ಪ್ರಾಯದ ಮೇಲೆ ತನಗಿರುವ ಅಚಲ ವಿಶ್ವಾಸ ಮತ್ತು ತನ್ನ ನಿರ್ಲೋಷ

ತ್ವದ ಕುರಿತ ವೃಥ ನಂಬಿಕೆಯು ಮೂರ್ತಸ್ವರೂಪವೆಂಗೂ ರುಬಷೊವ ಸಮರ್ಥಿಸಿದನು. ತನ್ನ ಸಂಕಲ್ಪದಿಂದ ಆತ ರಾಜೀನಾಮೆ ಕೊಡುವ ಸಂಭವವೇ ಬರಲೊಲ್ಲದಾದುದರಿಂದ ಹಿಂಸೆಯಿಂದಲೇ ಆತನನ್ನು ಕೆಳಗಿಳಿಸಬೇಕೆಂದೂ, ಅಲ್ಲದೆ ಪಾರ್ಟಿಯ ಮುಂದಾಳುಗಳೆಲ್ಲ ಅವನ ಕೈಗೊಂಬೆಗಳಾಗಿರುವುದರಿಂದ ಸೂತ್ರಧಾರಿಯಾದ ಒಂದನೆಯ ನಂಬರಿನವನ ಭವಿಷ್ಯವೇ ಅವರ ಭವಿಷ್ಯವೂ ಆಗಿರುವುದರಿಂದ, ಪಾರ್ಟಿಯಿಂದ ಇಂಥವನ್ನಪೇಕ್ಷಿಸಲಸಾಧ್ಯವೆಂದೂ ರುಬಷೊವ ಒತ್ತಿ ಹೇಳಿದನು.' ನಿದ್ರೆ ಎಷ್ಟೇ ಕಾಡಿದರೂ ತರುಣನ ಸ್ಮರಣಶಕ್ತಿಗೆ ರುಬಷೊವ ಮೆಚ್ಚಿದನು. ತನಗೆ ನೆನಪಿಲ್ಲದೆ ಹೋದರೂ ತರುಣನ ವಾದ ಸರಿಯೆಂದು ಅವನಿಗನಿಸಿತು. ಹೊಸದೊಂದು ಆಸಕ್ತಿಯಿಂದ ಆತ ತರುಣ ಕೀಫರನ ಕಡೆಗೆ ನೋಡಿದನು.

'ಅಂದರೆ ರುಬಷೊವ ಒಂದನೆಯ ನಂಬರಿನವನ–ಅಲ್ಲ ಪಾರ್ಟಿಯ ನಾಯಕನ—ವಿರುದ್ಧ ಹಿಂಸಾತ್ಮಕ ಕೃತ್ಯವನ್ನು ನಡೆಸುವುದರ ಆವಶ್ಯಕತೆಯನ್ನು ಅಲ್ಲಿ ಸಾರಿದನಲ್ಲವೆ?' ಎಂದು ಗ್ಲೆಟ್‌ಕಿನ ಕೇಳಿದಾಗ ತರುಣನು ಆ ಮಾತಿಗೆ ಸಮ್ಮತಿಸಿದನು.

'ಧಾರಾಳ ಮದ್ಯದೊಡನೆ ಸೇರಿಕೊಂಡು ರುಬಷೊವನ ವಾದವು ನಿನ್ನ ಮೇಲೆ ಒಳ್ಳೆಯ ಪರಿಣಾಮ ಮಾಡಿತ್ತಲ್ಲವೆ?'

ತರುಣ ಕೀಫರ ಈ ಪ್ರಶ್ನೆಗೆ ಕೂಡಲೇ ಉತ್ತರಿಸದೆ, ತುಸು ಹೊತ್ತಿನ ಮೇಲೆ 'ಕುಡಿದದ್ದು ನಾನು ಸ್ವಲ್ಪವೇ. ಆದರೆ ಅವನ ವಾದದಿಂದ ನನ್ನ ಮೇಲೆ ಪರಿಣಾಮವಾದ್ದು ಹೌದು.'

ರುಬಷೊವ ತಲೆತಗ್ಗಿಸಿ ಈ ಬಡಪಾಯಿ ತನ್ನ ವಾದಸರಣಿಯನ್ನು ನಿಜಕ್ಕೂ ಅನುಸರಿಸಿ ಆ ವಾದಸರಣಿಯ ಪರಿಣಾಮದ ಮೂರ್ತಸ್ವರೂಪನಾಗಿ ಭಗ್ನದೇಹದಿಂದ ತನ್ನ ಮುಂದೆ ನಿಂತಿರುವನೋ ಎಂಬ ಶಂಕೆ ಉದಯವಾಯಿತು. ಶಂಕೆ ಮನಸ್ಸಿನದಾದರೂ ರುಬಷೊವನಿಗೆ ದೇಹದಲ್ಲೆಲ್ಲ ನಡುಕ್ಕೇಳುತಿತ್ತು.

ಗ್ಲೆಟ್‌ಕಿನನ ಸ್ವರ ಆತನ ವಿಚಾರಲಹರಿಯನ್ನು ನಡುವೆಯೇ ಕಡಿಯಿತು: 'ತಾತ್ವಿಕ ಪೀಠಿಕೆಯೆಲ್ಲ ಮುಗಿದ ಮೇಲೆ ನಿನ್ನನ್ನು ನೇರವಾಗಿ ಕೃತ್ಯಕ್ಕೆ ಪ್ರಚೋದಿಸುವುದೂ ನಡೆಯಿತಲ್ಲವೆ?'

ಸೀಳ್ಬಾಯಿಯುವನು ಮೌನವಾಗಿ ದೀಪದ ಬೆಳಕನ್ನು ನೋಡಿ ಕಣ್ಣು ಕಣ್ಣು ಬಿಟ್ಟನು. ಕೆಲವು ಸೆಕೆಂಡುಗಳಾದರೂ ವಿದ್ಯುಚ್ಛಕ್ತಿಯ ಝೇಂಕಾರದ ಹೊರತು ಬೇರೆ ಸದ್ದಿಲ್ಲ.

'ನೆನಪು ಬರುವಂತೆ ಸಹಾಯಮಾಡಲೆ?' ಎಂದು ಗ್ಲೆಟ್‌ಕಿನ ಸ್ವಾಭಾವಿಕವಾಗಿ ಎಂಬಂತೆ ಕೇಳಿದರೂ ಸೀಳ್ಬಾಯಿಯುವನು ಬೆಚ್ಚಿ ಬಿದ್ದನು. ಅವನ ಕಣ್ಣಿನಲ್ಲಿ ಜೀವದ ಭೀತಿ ಹೊಳೆಯುತಿತ್ತು:

'ಕೃತ್ಯದ ಪ್ರಚೋದನೆಯನ್ನು ಮಾಡಿದ್ದು ಅಂದಲ್ಲ ಮರುದಿನ ನನಗೂ ರುಬಷೊವಗೂ ನಡೆದ ಆಪ್ತಸಮ್ಮೇಳನದಲ್ಲಿ'

ರುಬಷೊವ ನಸುನಕ್ಕನು. ದುಷ್ಕೃತ್ಯದ ತಾರೀಕನ್ನು ಒಂದು ದಿನ ಮುಂದೆ ಹಾಕಲೇನು ಕಾರಣವೋ. ಇದು ಗ್ಲೆಟ್‌ಕಿನ ದಿಗ್ದರ್ಶಿತ ನಾಟಕದ ಒಂದು ಕುಶಲ ಪರಿವರ್ತನೆ ಆಗಿರಬೇಕು ಎಂದೆನಿಸಿತು ರುಬಷೊವಗೆ. ನಿಯೆಂಡರ್ಥಾಲ್ ಮನೋವಿಜ್ಞಾನದಲ್ಲಿಯೂ ಮಗನ ಹತ್ತಿರ ವಿಷಕೊಟ್ಟು ಕೊಲ್ಲು ಎನ್ನುವಾಗ ತಂದೆ ಸಂತೋಷದಿಂದ ಆಲಿಸುವುದು ಅಸಂಬದ್ಧ, ಅಸಂಭಾವ್ಯ ಎನಿಸುತ್ತದೇನೋ. ರುಬಷೊವ ಗ್ಲೆಟ್‌ಕಿನನ ಕಡೆ ತಿರುಗಿ 'ಪ್ರತಿವಾದಿಯು ಮನಸ್ಸಾದರೆ ವಿಚಾರಣೆಯ ಸಮಯ ಪ್ರಶ್ನೆ ಕೇಳಬಹುದೆ?' ಎಂದನು.

ಗ್ಲೆಟ್‌ಕಿನ 'ಕೇಳಬಹುದು' ಎಂದನು.

ರುಬಷೊವ ತರುಣನ ಕಡೆಗೆ ತಿರುಗಿ 'ನನ್ನ ನೆನಪಿನಂತೆ ತಂದೆಯೊಡನೆ ನನ್ನನ್ನು ನೋಡಬಂದಾಗ ನೀನು ಅದೇ ಆಗ ನಿನ್ನ ವಿಶ್ವವಿದ್ಯಾನಿಲಯದ ಅಭ್ಯಾಸವನ್ನು ಮುಗಿಸಿದ್ದಿಯಲ್ಲವೆ?'

ತರುಣನು ಹೌದೆಂದು ಗೋಣಲ್ಲಾಡಿಸಿದನು.

'ಅದು ಸರಿಯಾದರೆ, ನನ್ನ ನೆನಪಿನಂತೆ ನೀನು ನಿನ್ನ ತಂದೆಯ ಐತಿಹಾಸಿಕ ಸಂಶೋಧನಾಲಯದಲ್ಲಿಯೇ ಕೆಲಸಕ್ಕೆ ಸೇರಬೇಕೆಂದು ನಿರ್ಣಯವಾಗಿತ್ತಲ್ಲವೆ? ಅಂದಮೇಲೆ ನೀನು ಹಾಗೇಕೆ ಮಾಡಲಿಲ್ಲ?

'ಹೌದು.' ಎಂದು ಹೇಳಿ ತರುಣನು ಮತ್ತೆ ಸ್ವಲ್ಪ ಅಸಂದಿಗ್ಧತೆ ಯಿಂದ, 'ನನ್ನ ತಂದೆಯ ಮರಣದ ವರೆಗೆ ಈ ಯೋಚನೆ ಇತ್ತು ನಿಜ.' ಎಂದನು.

'ತಿಳಿಯಿತು. ತಂದೆಯ ಮರಣದ ಬಳಿಕ ನಿನಗೆ ಸಂಶೋಧನೆ ಯನ್ನು ಬಿಡಬೇಕಾಗಿ ಬಂತು, ಬೇರೇನಾದರೂ ಕೆಲಸ ಹುಡುಕಬೇಕಾ ಗಿಯೂ ಬಂತು. ಅಲ್ಲವೆ?' ಎಂದು ರುಬಷೊವ ತುಸು ತಡೆದು ಗ್ಲೆಟ್‌ಕಿನನನ್ನು ಒಮ್ಮೆ ನೋಡಿ, '...............ಈ ತರುಣನು ನನ್ನನ್ನು ಭೇಟಿಯಾಗುವ ಕಾಲಕ್ಕೆ ನನಗಾಗಲಿ ಇವನಿಗಾಗಲಿ ಇವನ ಉದ್ಯೋಗ ಯಾವುದಾಗಬಹುದೆಂಬ ಕಲ್ಪನೆಯೇ ಇಲ್ಲದಿದ್ದುದರಿಂದ ಕೊಲೆಗೆ ಇವನನ್ನಾರಿಸುವ ಕಥೆಯು ಅಸಂಭವನೀಯವೆಂದು ಸಿದ್ಧ ವಾಗುತ್ತದೆ.'

ಕಾರ್ಯದರ್ಶಿಯ ಪೆನ್ಸಿಲಿನ ಶಬ್ದ ನಿಂತುಹೋಯಿತು. ಆಕೆ ತಿರುಗಿ ಗ್ಲೆಟ್‌ಕಿನ್ ಕಡೆ ನೋಡುತ್ತಿದ್ದಳು. ಸೀಳ್ಬಾಯಿಯುವನೂ ಗ್ಲೆಟ್‌ಕಿನನ ಕಡೆ ನೋಡಿ ತುಟಿಯ ಮೇಲೆ ನಾಲಗೆಯನ್ನಾಡಿಸಿದನು. ಅವನ ಕಣ್ಣಿನಲ್ಲಿ ಭಯವು ನೆಲೆನಿಂತಿತ್ತು. ರುಬಷೊವಗೆ ಒಂದು ಕ್ಷಣ ತಾನು ಗೆದ್ದೆನೆಂಬ ಭಾವ ಮೊಳೆಯಿತು. ಅದು ಅಲ್ಲೇ ಮುಕ್ತಾಯ ವಾಗಿ ವಿದ್ಯುಕ್ತವಾಗಿ ನಡೆಯುವ ಯಾವುದೋ ಒಂದು ಸಮಾರಂಭಕ್ಕೆ ಭಂಗ ತಂದೆನಲ್ಲಾ ಎಂದು ಕಳವಳವಾಯಿತು. ಗ್ಲೆಟ್‌ಕಿನನ ಸ್ವರವು ಎಂದಿಗಿಂತಲೂ ಹೆಚ್ಚು ಶಾಂತವಾಗಿತ್ತು.

'ಇನ್ನೇನಾದರೂ ಪ್ರಶ್ನೆ ಇದೆಯೋ?'

'ಇಲ್ಲ, ಸದ್ಯ ಇಲ್ಲ.'

'ಕೊಲೆಗಾರನು ವಿಷವನ್ನೇ ಉಣಿಸಿ ಸಾಯಿಸಬೇಕೆಂದು ನೀನು ಸೂಚಿಸಿದ್ದೆಂದು ಯಾರೂ ಹೇಳಲಿಲ್ಲವಲ್ಲಾ? ಕೊಲೆ ಮಾಡಲು ಹೇಳಿ, ಅದನ್ನು ಹೇಗೆ ಮಾಡಬೇಕೆಂಬುದರ ನಿರ್ಣಯವನ್ನು ನೀನು ಕೊಲೆಗಡಕನಿಗೆ ಬಿಟ್ಟೆ' ಎಂದು ಹೇಳಿ ಗ್ಲೆಟ್‌ಕಿನ್ ಸೀಳ್ಬಾಯಿಯುವನ ಕಡೆಗೆ ತಿರುಗಿ 'ಸರಿಯಲ್ಲವೆ?' ಎಂದು ಕೇಳಿದನು. ಆ ಬಡಪಾಯಿ

'ಹೌದು' ಎನ್ನುವಾಗ ಅವನ ಸ್ವರದಲ್ಲಿ ಅವನಿಗೇ ವಿಶ್ವಾಸವಿದ್ದಂತೆ ತೋರಲಿಲ್ಲ.

'ವಿಷ ಉಣಿಸಿ ಕೊಲ್ಲಬೇಕೆಂಬ ಪ್ರಚೋದನೆ' ಎಂದು ಆರೋಪದಲ್ಲಿ ಸ್ಪಷ್ಟವಾಗಿ ಹೇಳಿದುದು ರುಬಷೊವಗೆ ನೆನಪಾಯಿತು. ಆದರೆ ಕೀಫರ ಹುಚ್ಚುತನದ ಈ ಕೊಲೆಗಡಕತನದ ಉದ್ಯೋಗವನ್ನು ಮಾಡಿದನೆ ಅಥವಾ ಕೇವಲ ಅದರ ಹಂಚಿಕೆಯನ್ನಷ್ಟೇ ಮಾಡಿದನೆ; ಅವನು ಹೇಳುವುದನ್ನೆಲ್ಲ ಅವನಿಗೆ ಕಲಿಸಿಕೊಟ್ಟರೆ ಅಥವಾ ಕೆಲವಂಶವನ್ನು ಮಾತ್ರ ಕಲಿಸಿದರೆ ಎನ್ನುವುದರಲ್ಲಿ ರುಬಷೊವಗೆ ಯಾವ ಅಭಿರುಚಿಯೂ ಉಳಿಯಲಿಲ್ಲ. ಮುಖ್ಯ ವಿಷಯ: ತನ್ನ ಅಪರಾಧ. ತನ್ನ ತರ್ಕದ ಪರಿಣಾಮವೇ ನೆತ್ತರುಮಾಂಸದ ಮುದ್ದೆಯಾಗಿ ತನ್ನಿದಿರು ಜೀವಕ್ಕೆ ಬಂದುದು ಮುಖ್ಯ ವಿಷಯ: ಸೂಕ್ಷ್ಮ ವಿಶ್ಲೇಷಣೆ ಇಲ್ಲಿ ಅಗತ್ಯವಿಲ್ಲ. ರುಬಷೊವನ ಮೇಲಿನ ಆರೋಪವು ತರ್ಕದ ಸರಪಳಿಯಲ್ಲಿ ಈ ವರೆಗೆ ಕಾಣದ ಒಂದು ಗೊಣಸನ್ನು ತುಂಬಿಸಿಕೊಟ್ಟು ಉಪಕಾರವೆಸಗಿತ್ತು.

ಆದರೆ ಒಂದು ವಿಷಯದಲ್ಲಿ ಮಾತ್ರ ತನಗೆ ಭಾರೀ ಅನ್ಯಾಯವಾಗುತ್ತಿದೆ ಎಂದು ರುಬಷೊವ ನೆನಸಿದನು. 'ಇನ್ನೇನಾದರೂ ಕೇಳುವುದಿದೆಯೆ?' ಎಂದು ಗ್ಲೆಟ್‌ಕಿನ್ ಪ್ರಶ್ನಿಸಿದನು.

'ನೀನು ಹೋಗಬಹುದು' ಎಂದು ಗ್ಲೆಟ್‌ಕಿನ್ ತರುಣ ಕೀಫರನನ್ನು ಕಳಿಸಿದನು. ಸಮವಸ್ತ್ರಧಾರಿ ಕಾವಲುಗಾರನೊಬ್ಬನು ತರುಣನಿಗೆ ಬೇಡಿಗಳನ್ನು ಹಾಕಿ ಕರೆದೊಯ್ದನು. ತರುಣನು ರುಬಷೊವನನ್ನು ಮತ್ತೊಮ್ಮೆ ನೋಡಿ ಮರೆಯಾದನು.

ಅವನು ಹೋದ ಮೇಲೆ ಅದೇಕೊ ಅವನ ಮೇಲೆ ಕನಿಕರಿಸುವುದರ ಬದಲು ರುಬಷೊವಗೆ ಈರ್ಷೆಯುಂಟಾಯಿತು.

'ಕೀಫರನ ಹೇಳಿಕೆಯು ಮುಖ್ಯಾಂಶಗಳಲ್ಲಿ ಸತ್ಯವಾಗಿರುವುದನ್ನು ನೀನು ಒಪ್ಪಿಕೊಳ್ಳುತ್ತೀಯಾ?' ಎಂದು ಗ್ಲೆಟ್‌ಕಿನ್ ಕೇಳಿದಾಗ ತೆಳುವಾದ ಕಣ್ಣೆವೆಗಳೊಳಗೆ ಬಿಸಿಯಾದ ಬೆಳಕು ತೂರುತ್ತಿದ್ದರೂ ರುಬಷೊವ 'ಮುಖ್ಯಾಂಶಗಳಲ್ಲಿ' ಎಂಬ ಮಾತನ್ನು ಗಮನಿಸದಿರಲಿಲ್ಲ. ಇದೊಂದು

ಪದಪುಂಜವು ಗ್ಲೆಟ್‌ಕಿನನ ಆರೋಪದ ತೂತುಗಳನ್ನು ಮುಚ್ಚಲು ಸಮರ್ಥವಾಗಿದ್ದುದರಿಂದ 'ವಿಷ ಉಣಿಸಿಕೊಲ್ಲುವ ಪ್ರಚೋದನೆ'ಯು ಬರೇ 'ಕೊಲ್ಲುವ ಪ್ರಚೋದನೆ'ಯಾಗಿ ಉಳಿಯಲು ಕಷ್ಟವಿರಲಿಲ್ಲ.

'ಮುಖ್ಯಾಂಶಗಳಲ್ಲಿ ಒಪ್ಪಿಕೊಂಡೆ' ಎಂದು ರುಬಷೊವ ಹೇಳಿದನು.

ಗ್ಲೆಟ್‌ಕಿನನ ಕೈಗುಬ್ಬಿ ಸದ್ದುಮಾಡಿತು. ಕಾರ್ಯದರ್ಶಿಯೂ ಕುರ್ಚಿಯಲ್ಲೇ ತಿರುಗಿದಳು. ಇನ್ನೇನು ಆರೋಪಗಳ ಒಪ್ಪಿಗೆಗೆ ವಿರಾಮ ಬಿಂದುವನ್ನಿಕ್ಕಿ ಆಯಿತು ಎಂದುಕೊಂಡನು ರುಬಷೊವ. ರುಬಷೊವನ ದೃಷ್ಟಿಯಲ್ಲಿ ಅಪರಾಧ, ಸತ್ಯ ಎಂದರೇನೆಂದು ಈ ನಿಯೆಂಡರ್ಥಾಲರಿಗೇನು ಗೊತ್ತು, ಪಾಪ!

ಗ್ಲೆಟ್‌ಕಿನ್ ಹಠಾತ್ತಾಗಿ "ದೀಪದಿಂದ ತೊಂದರೆಯಾಗುತ್ತಿದೆಯೆ?" ಎಂದು ಕೇಳಿದನು.

ರುಬಷೊವ ನಕ್ಕನು. ಕೆಲಸಮಾಡಿದರೆ ರೊಕ್ಕ ಕೂಡಲೇ ಇಡುವುದು ನಿಯೆಂಡರ್ಥಾಲರ ಗುಣವಿರಬಹುದು ಎಂದುಕೊಂಡನು. ಆದರೂ ದೀಪದ ಪ್ರಕಾಶವು ಒಂದು ಸುತ್ತು ಕಡಮೆಯಾದಾಗ ರುಬಷೊವಗೆ ಕೃತಜ್ಞತೆ ಎನಿಸಿತು.

ಗ್ಲೆಟ್‌ಕಿನನ ತಲೆಯ ಕೆಂಪು ಕಲೆ ಈಗ ಮರಳಿ ರುಬಷೊವನ ಕಣ್ಣಿಗೆ ಗೋಚರವಾಯಿತು.

'........ಮುಖ್ಯವೆಂದು ನನಗೆ ತೋರುವ ಒಂದಂಶವನ್ನು ಬಿಟ್ಟರೆ ಬೇರೆ ಮುಖ್ಯಾಂಶಗಳಲ್ಲಿ ನಿಮ್ಮ ಆರೋಪವು ನಿಜವೆನ್ನುತ್ತೇನೆ' ಎಂದನು.

'ಯಾವುದದು?'

ಸರಿ, ಹುಡುಗನ ಹತ್ತಿರ ಮರುದಿನ ಭೇಟಿ ನಡೆಯಲಿಲ್ಲವೆಂಬುದನ್ನು ನಾನು ನಿರಾಕರಿಸಬಹುದೆಂದು ಗ್ಲೆಟ್‌ಕಿನ್ ನಿರೀಕ್ಷಿಸಿಕೊಂಡಿದ್ದಾನು.

'ನನಗೆ ಮುಖ್ಯವೆನಿಸುವ ವಿಷಯ ಇಷ್ಟೆ. ಆ ಕಾಲದಲ್ಲಿ ನಾನು ಕಟ್ಟಿಕೊಂಡ ಅಭಿಪ್ರಾಯದಲ್ಲಿ ಹಿಂಸಾಚರಣೆಯ ಆವಶ್ಯಕತೆಯನ್ನು

ನಾನು ಒತ್ತಿ ಹೇಳಿರಬಹುದಾದರೂ ಇದು ರಾಜಕೀಯ ಹಿಂಸಾಚರಣೆಯೇ ಹೊರತು ವೈಯಕ್ತಿಕ ಕೊಲೆಯಾಗಿರಲಿಲ್ಲವಲ್ಲಾ?'

'ಅಂದರೆ ಯಾದವೀ ಯುದ್ಧದ ಸೂಚನೆ.'

'ಅಲ್ಲ, ಸಾಮೂಹಿಕ ಕಾರ್ಯಾಚರಣೆ'

'ಹೌದು, ಹೌದು, ಯಾದವೀ ಯುದ್ಧದಲ್ಲಿ ಪರ್ಯವಸಾನಗೊಳ್ಳುವ ಸಾಮೂಹಿಕ ಕಾರ್ಯಾಚರಣೆ. ಅಮೂಲ್ಯವಾದ ಅಂಶ ಇದೇಯೋ?'

ರುಬಷೊವ ಉತ್ತರಿಸಲಿಲ್ಲ. ಈಗೊಂದು ಕ್ಷಣದ ಕೆಳಗೆ ಈ ಅಂಶವು ಅಮೂಲ್ಯವಾದ್ದೆಂದು ಆತನಿಗನಿಸಿದ್ದೇನೋ ನಿಜ, ಆದರೆ ಈಗ ಅದರಲ್ಲಿಯೂ ಉದಾಸೀನ ಉಂಟಾಯಿತು. ಯಾದವೀ ಯುದ್ಧದಿಂದ ಪಾರ್ಟಿಯ ಹತ್ತಿರ ಹೋರಾಡಿ ಗೆಲ್ಲುವುದೇನು? ಒಂದನೆಯ ನಂಬರಿನವನಿಗೆ ವಿಷ ಉಣಿಸಿ ಹೆಚ್ಚು ರಕ್ತಪಾತವಿಲ್ಲದೆ ಆಧಿಪತ್ಯವನ್ನುರುಳಿಸುವುದೇನು? ಯಾವುದು ಹೆಚ್ಚು, ಯಾವುದು ಕಡಮೆ? ರಾಜಕೀಯ ಕೊಲೆ ಸಾಮೂಹಿಕ ಹತ್ಯಾಕಾಂಡಕ್ಕಿಂತ ಗೌರವದಲ್ಲೇನು ಕಡಮೆ? ದುರದೃಷ್ಟ ಶಾಲಿಯಾದ ಆ ತರುಣನು ತನ್ನ ಅಭಿಪ್ರಾಯವನ್ನು ತಪ್ಪಾಗಿ ತಿಳಿದು ಕಾರ್ಯಪ್ರವೃತ್ತನಾದರೂ ಅವನ ಆಚರಣೆಯಲ್ಲಿದ್ದ ಏಕಮುಖತೆ ಕೆಲ ವರ್ಷಗಳಿಂದೀಚೆ ತನ್ನಲ್ಲಿ ನಷ್ಟವಾಗಿರುವುದನ್ನು ರುಬಷೊವ ಗುರುತಿಸಿ ಕೊಂಡನು.

ಸರ್ವಾಧಿಕಾರಿ ಪ್ರಭುತ್ವವನ್ನು ವಿರೋಧಿಸುವಾತನು ಯಾದವೀ ಯುದ್ಧವನ್ನು ಸಾಧನವೆಂದು ತಿಳಿಯತಕ್ಕದು. ಯಾದವೀ ಯುದ್ಧಕ್ಕೆ ಒಲ್ಲದವನು ಸರ್ವಾಧಿಕಾರಿ ಪ್ರಭುತ್ವವನ್ನೊಪ್ಪಿಕೊಂಡು ವಿರೋಧವನ್ನು ತ್ಯಜಿಸಬೇಕು. 'ಮುಂದಗಾಮಿಗಳ ಕುರಿತು ಮೂವತ್ತು ವರ್ಷಗಳ ಕೆಳಗೆ ತಾನೇ ಬರೆದಿದ್ದ ಈ ವಾಕ್ಯಗಳನ್ನು ರುಬಷೊವ ಈಗ ತನಗೆಯೆ ಅನ್ವಯಿಸುವ ಪ್ರಸಂಗ ಬಂದಿತ್ತು. ಗ್ಲೆಟ್‌ಕಿನನೊಡನೆ ವಾದಿಸುವುದು ಆತನಿಗೆ ಬೇಕಾಗಿರಲಿಲ್ಲ: ತಾನು ಸಂಪೂರ್ಣ ಸೋತುದೇ ಅವನಿಗೆಷ್ಟೋ ಹಿತವಾಯಿತು. ಹೋರಾಡಬೇಕಾದ ಕರ್ತವ್ಯ ಮತ್ತು ಹೊಣೆ ಗಾರಿಕೆಯು ಹೊರೆ ತಲೆಯಿಂದಿಳಿಯುತ್ತಲೇ ರುಬಷೊವನ ಮೇಲೆ ನಿದ್ದೆ ಭರದಿಂದ ಕವಿಯಿತು. ಒಂದು ಕ್ಷಣ ಅವನಿಗೆ ಡೆಸ್ಕಿನ ಹಿಂದೆ

ಗ್ಲೆಟ್‌ಕಿನನ ಬದಲು ಒಂದನೆಯ ನಂಬರಿನವನೇ ಕಾಣಿಸಿಕೊಂಡನು:—ಕೊನೆಯ ಸಲ ರುಬಷೊವ ಕೈಕುಲುಕಿದಾಗ ಅವನ ಮುಖದಲ್ಲಿದ್ದ ವ್ಯಂಗ್ಯವೇ ಡೆಸ್ಕಿನ ಹಿಂದೆ ಈಗಲೂ ಕಾಣಿಸುತಿತ್ತು. ಎರ್ರಾಂಚಿಯಲ್ಲಿ ಸೈಂಟ್ ಜಸ್ಟ್, ರೊಬಸ್ಪೇ ಮತ್ತು ಹದಿನಾರು ಕ್ರಾಂತಿಕಾರರನ್ನು ಹೂಳಿದ ಸಮಾಧಿಯ ಬಾಗಿಲಲ್ಲಿ ತಾನು ನೋಡಿದ ಒಂದು ಬರಹ ರುಬಷೊವನ ನಿಮೀಲಿತ ನೇತ್ರದಿದಿರು ಸುಳಿಯಿತು: **ಡೋರ್ಮಿರ್—ನಿದ್ರಿಸಿ.**

ಆ ಗಳಿಗೆಯಿಂದ ರುಬಷೊವನ ಸ್ಮರಣೆ ಮಸಕಾಗುತ್ತ ಬಂದಿತು. ಪ್ರಾಯಶಃ ಅವನು ಕೆಲವು ಮಿನಿಟಾದರೂ ನಿದ್ರಿಸಿರಬೇಕು—ಆದರೆ ಈ ಸಲ ಸ್ವಪ್ನವಿರಲಿಲ್ಲ. ಸಹಿ ಹಾಕುವುದಕ್ಕೋಸ್ಕರ ಗ್ಲೆಟ್‌ಕಿನ್ ಅವನನ್ನು ಎಚ್ಚರಿಸಿರಬೇಕು. ಗ್ಲೆಟ್‌ಕಿನ್ ರುಬಷೊವನ ಕೈಗೆ ತನ್ನ ಪೇನವನ್ನು ಕೊಟ್ಟಾಗ ಕಿಸೆಯಲ್ಲಿ ತಗಲಿದ ಮೈಯ ಬಿಸುಪು ಅದಕ್ಕೂ ಅಂಟಿಕೊಂಡು ರುಬಷೊವಗೆ ಅದನ್ನು ಕೈಯಲ್ಲಿ ಹಿಡಿಯಲೂ ಹೇವ ಬಂದಿತು. ಕೋಣೆಯಲ್ಲಿ ಸಂಪೂರ್ಣ ಮೌನವಾವರಿಸಿತ್ತು. ದೀಪವೂ ಮಂದವಾಗಿ ಪ್ರಕಾಶಿಸುತ್ತಿತ್ತು. ಹೊರಗೆ ನಸುಕು ಹರಿಯುತಿತ್ತು.

ರುಬಷೊವ ರುಜು ಹಾಕಿದನು.

ಕಾರಣವು ಮರೆತಿದ್ದರೂ ಮನಸ್ಸಿಗೇಕೋ ಹಿತವಾಗುತ್ತಿತ್ತು ರುಬಷೊವಗೆ. ನಿದ್ದೆಯ ಗುಂಗಿನಲ್ಲೇ ಆದರೂ ರುಜು ಹಾಕಿದ ಮೇಲೆ ಪಾರ್ಟಿಯ ನಾಯಕನನ್ನು ಕೊಲೆಮಾಡಬೇಕೆಂದು ತರುಣ ಕೀಫರನಿಗೆ ಪ್ರಚೋದಿಸಿದವನು ತಾನೆಂಬ ಹೇಳಿಕೆಯನ್ನು ಆಮೂಲಾಗ್ರವಾಗಿ ಓದಿ ನೋಡಿದಾಗ ಸಹಿಯನ್ನು ಹೊಡೆದು ಕಾಗದದ ಚೂರನ್ನು ಹರಿದು ಬಿಸಾಡಲೇ ಎಂದು ಅವನಿಗೆನಿಸಿತು. ಅಷ್ಟರಲ್ಲಿ ಹಿಂದಿನ ಘಟನೆಗಳೆಲ್ಲ ನೆನಪಿಗೆ ಬಂದು, ರುಬಷೊವ ತನ್ನ ಕನ್ನಡಕವನ್ನು ತೋಳಿಗುಜ್ಜಿ ಕಾಗದವನ್ನು ಗ್ಲೆಟ್‌ಕಿನನ ಕೈಗೆ ದಾಟಿಸಿದನು.

ನಡಮೆಯಲ್ಲಿ ಆಜಾನುಬಾಹುವಿನ ಹಿಂದೆ ನಡೆದು ಕ್ಷೌರಿಕನ ಕೋಣೆಯನ್ನು ದಾಟಿ, ತನ್ನ ಕೋಣೆಯ ಪೇಪರು ಹಚ್ಚಿದ ಕಿಟಕಿಯ ಮೂಲಕ ಹೊರಗೆ ನಸುಕು ಹರಿಯುವುದನ್ನು ಕಂಡ ನೆನಪು. ಕೋಣೆಯ

ಕದವಿಕ್ಕಿದ ಸದ್ದಿನ ನೆನಪು. ರುಬಶೋವಗೆ ಕೋಣೆ ಸೇರಿದ ಕೂಡಲೇ ನಿದ್ದೆ ಬಂದುಬಿಟ್ಟಿತು.

ಕೋಣೆಯ ಬಾಗಿಲು ತೆರೆದಾಗ ಇನ್ನೂ ಬೆಳಗಾಗಿರಲಿಲ್ಲ. ಮಲಗಿ ಒಂದು ತಾಸಾಗಿರಬಹುದೇನೋ ಎಂದೆನಿಸಿದರೂ ರುಬಶೋವ ಬೆಳಗ್ಗಿನ ಫಲಾಹಾರ ತಂದರೇ ಎಂದು ಒಮ್ಮೆ ಭಾವಿಸಿದನು. ಆದರೆ ಇದಿರಿಗೆ ಸಮವಸ್ತ್ರಧಾರಿ ಆಜಾನುಬಾಹು ನಿಂತಿದ್ದನು. ಹಾಗಾದರೆ ಮರಳಿ ವಿಚಾರಣೆಯೋ, ಸರಿ ಎಂದು ರುಬಶೋವ ಮುಖವನ್ನು ತೊಳೆದು, ಕನ್ನಡಕವನ್ನು ಹಾಕಿಕೊಂಡು, ಕ್ಷೌರಿಕನ ಕೋಣೆ ಮತ್ತು ಕೆಳಗಿಳಿಯುವ ಮೆಟ್ಟಲುಗಳನ್ನು ದಾಟಿ, ಮರಳಿ ವಿಚಾರಣೆಗೆ ಅಣಿ ಯಾದನು.

## ೪

ಆ ಬಳಿಕ ರುಬಶೋವನ ನೆನಪಿನ ಮೇಲೆ ಕವಿದ ಮಂಜಿನ ಮುಸುಕು ಅಧಿಕವಾಗುತ್ತ ಬಂದಿತು. ಎಷ್ಟೋ ಹಗಲು ಎಷ್ಟೋ ರಾತ್ರಿ ನಿರಂತರವಾಗಿ ಎಂಬಂತೆ, ಕೇವಲ ಒಂದೆರಡು ತಾಸುಗಳ ವಿರಾಮದೊಡನೆ, ನಡೆದ ಸಂಭಾಷಣೆಯಲ್ಲಿ ಅಲ್ಲಲ್ಲಿ ಇಷ್ಟಿಷ್ಟನ್ನು ಮಾತ್ರ ರುಬಶೋವ ಜ್ಞಾಪಕದಲ್ಲಿಡಬಲ್ಲನಾಗಿದ್ದನು. ಎಷ್ಟು ದಿನ ಎಂಬುದೂ ಅವನಿಗೆ ತಿಳಿಯದು; ಒಂದು ವಾರದ ತನಕ ನಡೆದಿದ್ದರೂ ನಡೆದಿರಬಹುದು. ಈ ರೀತಿ ಬಿಡದೆ ನಡೆಯುವ ವಿಚಾರಣೆಗಳ ಕಥೆ ಯನ್ನು ರುಬಶೋವ ಅರಿಯದವನಲ್ಲ. ಅಲ್ಲಿಗೂ ಇಲ್ಲಿಗೂ ಒಂದೇ ವ್ಯತ್ಯಾಸ: ಅಲ್ಲಿ ಪರೀಕ್ಷೆ ಮಾಡುವ ಮ್ಯಾಜಿಸ್ಟ್ರೇಟರಾದರೂ ಬದಲಾಗು ತ್ತಿದ್ದರು, ಇಲ್ಲಿ ಗ್ಲೆಟ್‌ಕಿನ್ ಒಬ್ಬನೇ ರುಬಶೋವನನ್ನು ವಿಚಾರಿಸು ತ್ತಿದ್ದನು. ಅವನಿಗೂ ಇದು ಆಯಾಸವನ್ನುಂಟುಮಾಡುವಂಥ ಕೆಲಸ. ಆದರೂ ಅವನದನ್ನು ಗಮನಿಸುತ್ತಿರಲಿಲ್ಲ ಎಂದರೆ ರುಬಶೋವಗೆ ಯಾವ ವಿಧವಾದ ಮಾನಸಿಕ, ನೈತಿಕ ಶ್ರೇಷ್ಠತೆಯ ಭಾವನೆ ಬರಲೂ ಆತ ಅವಕಾಶ ಕೊಡುತ್ತಿರಲಿಲ್ಲವೆಂಬುದು ನಿರ್ವಿವಾದ.

ನಲ್ವತ್ತೆಂಟು ತಾಸುಗಳ ತರುವಾಯ ರುಬಷೊವಗೆ ದಿನ-ರಾತ್ರಿಯ ಭೇದವು ತಿಳಿಯದಾಯಿತು. ಒಂದು ತಾಸು ನಿದ್ದೆ ಮಾಡಿದ ಮೇಲೆ ಆಜಾನು ಬಾಹು ಬಂದು ಎಚ್ಚರಿಸಿದಾಗ ಹೊರಗೆ ಕಾಣುವ ನಸುಬೆಳಕು ಮುಂಜಾವಿನದೋ ಸಂಜೆಯದೋ ಎಂದು ತಿಳಿಯಲಾಗುತ್ತಿರಲಿಲ್ಲ. ನಡುವೆಯಲ್ಲಿ ಅದೇ ಹಳದಿ ದೀಪ ಯಾವಾಗಲೂ ಉರಿಯುತ್ತಿತ್ತು. ವಿಚಾರಣೆಯ ಸಮಯ ಕಿಟಕಿಯಲ್ಲಿ ನಸುಬೆಳಕು ತಲೆದೋರುತ್ತಿದ್ದಂತೆ ಗ್ಲೆಟ್‌ಕಿನ್ ದೀಪವಾರಿಸಲು ಸ್ವಿಚ್ ತೆಗೆದರೆ ಆಗ ಮುಂಜಾನೆ; ಕೋಣೆಯಲ್ಲಿ ಕತ್ತಲು ಕವಿಯಿತೆಂದು ಗ್ಲೆಟ್‌ಕಿನ್ ದೀಪದ ಸ್ವಿಚ್ ಹಾಕಿದರೆ ಅದಾಗ ಸಂಜೆ.

ವಿಚಾರಣೆಯ ಸಮಯ ರುಬಷೊವಗೆ ಹಸಿವಾದರೆ ಗ್ಲೆಟ್‌ಕಿನ್ ತಿಂಡಿ ಮತ್ತು ಚಹ ತರಿಸುತ್ತಿದ್ದನು. ಆದರೆ ರುಬಷೊವಗೆ ಹಸಿವೆಯೇ ಕಡಮೆ. ಹೊಟ್ಟೆ ಸುಡುವಂಥ ಹಸಿವೆಯು ಒಮ್ಮೊಮ್ಮೆ ಅನಿಸಿದರೂ ತಿಂಡಿಯನ್ನು ಕಂಡಕೂಡಲೇ ಓಕರಿಕೆ ಬರುತಿತ್ತು. ಗ್ಲೆಟ್‌ಕಿನ್ ತನ್ನ ಇದಿರು ಏನನ್ನೂ ತಿನ್ನುತ್ತಿರಲಿಲ್ಲವಾದುದರಿಂದ ತಿಂಡಿತರಿಸಲೂ ರುಬಷೊವಗೆ ನಾಚಿಕೆಯಾಗುತ್ತಿತ್ತು. ಒಂದು ಸಲವಾದರೂ ತನ್ನ ದೇಹಾಯಾಸದ ಸೂಚನೆ ಕೊಡದ, ಆಕಳಿಸದ, ಸಿಗರೇಟು ಸೇದದ, ತಿನ್ನದ, ಕುಡಿಯದ ಧಾಂಡಿಗ ಗ್ಲೆಟ್‌ಕಿನ ನಿದಿರು ಶರೀರದ ಆರಯಿಕೆ ಮಾಡಿಕೊಳ್ಳುವುದು ರುಬಷೊವಗೆ ಒಂದಿಷ್ಟೂ ಸೇರುತ್ತಿರಲಿಲ್ಲ. ಮೂತ್ರದೊಡ್ಡಿಗೆ ಹೋಗಬೇಕೆಂದು ಪರವಾನಿಗೆ ಕೇಳುವಾಗ ರುಬಷೊವಗೆ ಆಗುವಷ್ಟು ಅಪಮಾನ ಬೇರಾವಾಗಲೂ ಆಗುತ್ತಿರಲಿಲ್ಲ. ಗ್ಲೆಟ್‌ಕಿನ್ ಸಿಪಾಯಿಯನ್ನು ಜತೆಮಾಡಿ ಅವನನ್ನು ಮೂತ್ರದೊಡ್ಡಿಗೆ ಕಳಿಸುವುದು ವಾಡಿಕೆ. ಸಾಮಾನ್ಯವಾಗಿ ಆಜಾನು ಬಾಹುವು ಈ ಕೆಲಸ ಮಾಡುತ್ತಿದ್ದನು. ಒಂದು ಸಲ ರುಬಷೊವ ಮುಚ್ಚಿದ ಬಾಗಿಲಿನ ಒಂದುಗಡೆ ಮೂತ್ರದೊಡ್ಡಿಯಲ್ಲೇ ನಿದ್ರೆ ಹೋದನು. ಆ ಬಳಿಕ ದೊಡ್ಡಿಯ ಬಾಗಿಲು ತೆರೆದಿರುತ್ತಿತ್ತು.

ವಿಚಾರಣೆಯ ಸಮಯ ಅವನು ಸಂಪೂರ್ಣ ಎಚ್ಚರತಪ್ಪಿದ್ದೆಂದರೆ ಒಂದೇ ಒಂದು ಸಲ. ಆದರೆ ಪ್ರತಿಸಲವೂ ಎಚ್ಚರ ತಪ್ಪುವುದನ್ನು

ಕೇವಲ ಅಹಂಕಾರದಿಂದ ತಡೆದು ನಿಲ್ಲಿಸಬೇಕಾಗುತ್ತಿತ್ತು. ಸಿಗರೇಟು ಹಚ್ಚಿ ಕಣ್ಣು ಪಿಳಿಪಿಳಿ ಬಿಟ್ಟರೆ ಸರಿ, ವಿಚಾರಣೆ ಮುಂದೆ ಸಾಗುವುದು.

ಇಷ್ಟನ್ನೆಲ್ಲಾ ತಾನು ಸಹಿಸಿಕೊಂಡದ್ದನ್ನರಿತು ರುಬಷೊವಗೇ ಆಶ್ಚರ್ಯವೆನಿಸುತಿತ್ತು. ಸಾಧಾರಣವಾಗಿ ಮನುಷ್ಯರ ಶರೀರ ದಾರ್ಢ್ಯಕ್ಕೆ ಜನ ಕಟ್ಟುವ ಮಿತಿ ಬಹಳ ಕಡಮೆ ಎಂದು ತೋರುತ್ತದೆ. ಹದಿನೈದು ಇಪ್ಪತ್ತು ದಿನಗಳವರೆಗೂ ನಿದ್ರೆಯಿಲ್ಲದೆ ಹಿಂಸೆಯನ್ನು ತಡೆದುಕೊಂಡವರಿದ್ದಾರೆಂದು ಆತನಿಗೆ ಗೊತ್ತು.

ಮೊದಲಸಲ ವಿಚಾರಣೆಗೆ ಬಂದು, ಅಪರಾಧಸ್ವೀಕಾರದ ಪತ್ರಕ್ಕೆ ತಾನು ರುಜುಮಾಡಿದಾಗ ಅಲ್ಲಿಗೆ ಎಲ್ಲವೂ ಮುಕ್ತಾಯವಾಯಿತೆಂದು ರುಬಷೊವ ಯೋಚಿಸಿದ್ದನು. ಆದರೆ ಎರಡನೆಯ ವಿಚಾರಣೆಯಲ್ಲಿ ಅವನಿಗೆ ಇದು ಉಪಸಂಹಾರವಲ್ಲ, ಉಪಕ್ರಮ ಮಾತ್ರ ಎಂಬುದು ಖಚಿತವಾಯಿತು. ಏಳು ಆರೋಪಗಳಲ್ಲಿ ಆತ ಇಷ್ಟರತನಕ ಒಪ್ಪಿದುದು ಒಂದನ್ನು ಮಾತ್ರ. ಆಗುವ ಅವಮಾನವೆಲ್ಲ ಆಗಿ ಇನ್ನೇನೂ ಉಳಿದಿಲ್ಲವೆಂದು ಆತ ಭಾವಿಸಿದ್ದನು. ಆದರೆ ಶಕ್ತಿಗೆ ವಿವಿಧ ಹಂತಗಳಿರುವಂತೆ ನಿಶ್ಶಕ್ತಿಗೂ ಇರುವುದೆಂದೂ, ಸೋಲಿನ ಆಳ ಕಂಡವರಿಲ್ಲವೆಂದೂ ತಿಳಿಯಿತು. ಗ್ಲೆಟ್‌ಕಿನ್ ಆತನನ್ನು ಕ್ರಮಶಃ ಒಂದೊಂದೇ ಮೆಟ್ಟಲು ಇಳಿಸುತ್ತಿದ್ದನು.

ಎಲ್ಲವನ್ನೂ ಸರಳಗೊಳಿಸುವ ದಾರಿಯೊಂದು ಇಲ್ಲದಿರಲಿಲ್ಲ. ಎಲ್ಲಕ್ಕೂ ಒಟ್ಟಾಗಿ ರುಜು ಹಾಕಿದರೆ ಅಥವಾ ಎಲ್ಲವನ್ನು ಬಿಡದೆ ಒಟ್ಟಾಗಿ ಒಪ್ಪಿಕೊಂಡರೆ ಪೀಡೆ ಅಲ್ಲಿಗೇ ನಿಂತು ಹೋಗುತಿತ್ತು. ಆದರೆ ಕರ್ತವ್ಯಬುದ್ಧಿಯು ಅವನನ್ನು ಈ ಪ್ರಲೋಭನಕ್ಕೆ ತುತ್ತಾಗಲು ಬಿಡುತ್ತಿರಲಿಲ್ಲ. ರುಬಷೊವನ ಜೀವಮಾನದಲ್ಲೆಲ್ಲ ಅವನ ತಲೆಯಲ್ಲಿ ಒಂದು ನಿರಪೇಕ್ಷ, ಸ್ವತಂತ್ರ ವಿಚಾರವೇ ತುಂಬಿಕೊಂಡಿದ್ದುದರಿಂದ 'ಪ್ರಲೋಭನ'ವನ್ನು ಆತ ತಾತ್ತ್ವಿಕ ರೀತಿಯಾಗಿ ಮಾತ್ರ ಬಲ್ಲವನಾಗಿದ್ದನು. ಈಗಾದರೋ ಹಾಗಲ್ಲ: ನಡವೆಯ ಉದ್ದಕ್ಕೂ, ಮರಳಿ ಮರಳಿ ಬರುವ ದಿನ ರಾತ್ರಿಗಳ ಪರ್ಯಾಯದಲ್ಲಿಯೂ, ಗ್ಲೆಟ್‌ಕಿನನ ದೀಪಪ್ರಭೆಯ ತವಸಲಿನಲ್ಲಿಯೂ

ಪ್ರಲೋಭನವು ಕೈ ಬೀಸಿ ಕರೆಯುತಿತ್ತು. 'ನಿವ್ರಿಸು' ಎಂದು ಬರೆದ ಸಮಾಧಿಯ ಒಂದು ಪದದಲ್ಲಿ ಪ್ರಲೋಭನವು ಅಡಗಿತ್ತು.

ವಾದ ವಿವಾದಗಳಿಲ್ಲದ, ಶಾರೀರಿಕವೂ ಅಲ್ಲದ, ಪ್ರಶಾಂತ ಪ್ರಲೋಭನ. ವಾದಗಳೆಲ್ಲ ಗ್ಲೆಟ್‌ಕಿನನಿಗಿರಲಿ. ಪ್ರಲೋಭನಕ್ಕೆ ಕ್ಷೌರಿಕನ ಸಂದೇಶದಲ್ಲಿದ್ದ 'ಮೌನವಾಗಿ ಸಾಯು' ಎಂಬ ಮಾತೇ ಸಾಕು.

ಎಲ್ಲಾದರೊಮ್ಮೆ ರುಬಷೊವನ ತುಟಿ ಚಲಿಸುತ್ತಿತ್ತು. ಗ್ಲೆಟ್‌ಕಿನನಿಗೆ ಅವನೇನು ಹೇಳುತ್ತಿರುವನೆಂಬುದು ಮಾತ್ರ ತಿಳಿಯುತ್ತಿರಲಿಲ್ಲ. ರುಬಷೊವ ಕನ್ನಡಕವನ್ನು ನಿದ್ದೆಗಣ್ಣಿನಲ್ಲೇ ಉಜ್ಜುತ್ತ ತನ್ನಂತರಂಗದ ಮೌನ ಪಾಲುಗಾರನನ್ನು ಜ್ಞಾಪಿಸಿಕೊಳ್ಳುವನು. ಈ ಮಹಾನುಭಾವನಿಗೆ ಇಲ್ಲೇನು ಕೆಲಸ?........ವ್ಯಾಕರಣಬದ್ಧ ಕಾದಂಬರಿ........

'ವಿರೋಧ ಪಕ್ಷದ ಸಲುವಾಗಿ, ಪ್ರಸ್ತುತ ಸರಕಾರವನ್ನುರುಳಿಸುವ ಉದ್ದೇಶದಿಂದ, ವಿದೇಶೀ ರಾಜ್ಯವೊಂದರ ಪ್ರತಿನಿಧಿಯೊಡನೆ ನೀನು ಮಾತುಕತೆ ನಡೆಸಿರುವುದನ್ನು ಅಲ್ಲಗಳೆಯುತ್ತೀಯಾ? ನಿಮ್ಮ ಯೋಜನೆಗೆ ಅವರು ಸಹಾಯ ಮಾಡಿದ್ದಾದರೆ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ರೀತಿಯಲ್ಲಿ—ಅಂದರೆ ದೇಶದ ಕೆಲ ಭೂಭಾಗಗಳನ್ನು ಕೊಟ್ಟಾದರೂ ವಿದೇಶೀಯರನ್ನೊಲಿಸಿಕೊಳ್ಳಲು ನೀನು ಸಿದ್ಧನಾಗಿದ್ದೀ ಎಂಬುದನ್ನು ನೀನು ಒಪ್ಪಿಕೊಳ್ಳಲಾರೆಯಲ್ಲವೆ?

ಹೌದು. ಇಂಥ ಆರೋಪಗಳನ್ನು ರುಬಷೊವ ಒಪ್ಪಿಕೊಳ್ಳಲಾರ. ವಿದೇಶೀಯ ರಾಯಭಾರಿಯೊಡನೆ ರುಬಷೊವ ಇಂಥ ದಿನ, ಇಂಥಲ್ಲಿ ಮಾತನಾಡಿರುವನೆಂಬುದನ್ನು ಗ್ಲೆಟ್‌ಕಿನ್ ತಿಳಿಸಿದಾಗ ಎಂದೋ ನಡೆದ ಅಪ್ರಾಮುಖ್ಯ ದೃಶ್ಯವೊಂದು ರುಬಷೊವನ ಮನಃಪಟಲದ ಮೇಲೆ ಸುಳಿಯಿತು. ಗ್ಲೆಟ್‌ಕಿನನಿಗೆ ಆ ದೃಶ್ಯದ ನಿಜತ್ವವನ್ನು ಹೇಳಿ ಉಪಯೋಗವಿಲ್ಲವೆಂದು ಅವನಿಗನಿಸಿತು. 'ಬಿ' ಯಲ್ಲಿನ ನಿಯೋಗದ ಕಚೇರಿಯಲ್ಲಿ ರಾಯಭಾರಿ ಸತ್ಕಾರವೊಂದರ ಅನಂತರ ನಡೆದ ಘಟನೆಯದು. ಕೆಲವೇ ತಿಂಗಳ ಹಿಂದೆ ರುಬಷೊವನ ಹಲ್ಲುದುರಿಸಿದ ರಾಷ್ಟ್ರದ ರಾಯಭಾರಿ ಕಚೇರಿಯ ದ್ವಿತೀಯ ಕೌನ್ಸಿಲರ, ಹೆರ್‌ವೊನ್ Z ಎಂಬ ಸ್ಥೂಲಕಾಯದ ವ್ಯಕ್ತಿಯ ಪಕ್ಕದಲ್ಲೇ ಕೂತು ರುಬಷೊವ ತನ್ನ ತಂದೆ

ಬೆಳಸುತ್ತಿದ್ದ ಗಿನಿಹಂದಿಯ ವಿಚಾರ ಮಾತನಾಡುತ್ತಿದ್ದನು. ಹೆರ್ ವೊನ್ Z ಅವರ ಜಮೀನಿನಲ್ಲಿಯೂ ಗಿನಿ-ಹಂದಿಗಳನ್ನು ಬೆಳಸುತ್ತಿದ್ದರಂತೆ. ಅವರ ತಾತಂದಿರ ಕಾಲದಲ್ಲಿ ಅವರು ಗಿನಿಹಂದಿಗಳ ಮಾದರಿಯನ್ನು ಅದಲುಬದಲು ಮಾಡಿಕೊಂಡಿರಲೂ ಬಹುದು.

'ಈಗ ನಿನ್ನ ತಂದೆಯ ಗಿನಿಹಂದಿಗಳೆಲ್ಲಿವೆ? ಎಂದು ಹೆರ್‌ವೊನ್ Z ಕೇಳಿದಾಗ ರುಬಷೊವ 'ಅವನ್ನು ಕ್ರಾಂತಿಯ ಕಾಲದಲ್ಲಿ ಕೊಂದು ತಿಂದು ಹಾಕಿದರು' ಎಂದನು. 'ನಮ್ಮಲ್ಲೀಗ ಗಿನಿಹಂದಿಯ ಕೊಬ್ಬು ತೆಗೆಯುತ್ತಾರೆ' ಎಂದನು ಸ್ಥೂಲಕಾಯದ ರಾಯಭಾರಿ. ತನ್ನ ರಾಜ್ಯದ ಆಧಿಪತ್ಯವು ತನ್ನನ್ನು ಸ್ಥಾನಭ್ರಷ್ಟಗೊಳಿಸದೆ ಇಟ್ಟಿರುವುದೇ ಮಹಾಭಾಗ್ಯವೆಂದು ಉಪಕಾರವೆಣಿಸಬೇಕಾಗಿದ್ದ ರಾಯಭಾರಿ ಹೊಸ ಆಧಿಪತ್ಯದ ವಿಷಯ ತನ್ನ ಅರುಚಿಯನ್ನು ಪ್ರಕಟಿಸುತ್ತಿದ್ದನು.

'ನೀನೂ ನಾನೂ ಒಂದೇ ತಕ್ಕಡಿಯಲ್ಲಿದ್ದೇವೆ. ನಮ್ಮ ಸಮಯ ಸಂದಮೇಲೂ ನಾವಿನ್ನೂ ಬದುಕಿರುವುದು ನಮ್ಮ ತಪ್ಪು. ಗಿನಿಹಂದಿಯ ಬೆಳವಣಿಗೆಯ ಕಾಲ ಮುಗಿದು ಹೋಯಿತು. ಇದೀಗ ಸಾಮಾನ್ಯರ ಕಾಲ.' ಎಂದನು ಆ ಮಹಾನುಭಾವ.

'ಆದರೆ ನಾನೂ ಸಾಮಾನ್ಯರ ಪಕ್ಷದವನೆಂಬುದನ್ನು ಮರೆಯಬೇಡ' ಎಂದು ರುಬಷೊವ ನಸುನಗುತ್ತ ಅಂದನು.

'ನಾನು ಹಾಗಂದದ್ದಲ್ಲ. ಕರಿಮೀಸೆಯ ವಾಮನ ಮೂರ್ತಿಯ ಯೋಜನೆಗಳಿಗೆ ಸೇರಲು ಬೇಕಾದರೆ ನಾನು ಸಿದ್ಧನೇ. ನನ್ನದೊಂದೇ ಪ್ರಶ್ನೆ: ಅವನಷ್ಟೊಂದು ಕಿರಿಚಿಕೊಳ್ಳುವುದೇಕಂತೆ? ನಮ್ಮ ನಮ್ಮ ನಂಬಿಕೆಯ ಹೆಸರಿನಲ್ಲೇ ನಮ್ಮ ಬಲಿದಾನ ನಡೆಯಬೇಕೆಂದು ನನ್ನ ವಾದ.' ಎಂದು ಹೆರ್‌ವೊನ್ Z ಉತ್ತರಿಸಿದನು. ಇನ್ನೂ ಸ್ವಲ್ಪ ಹೊತ್ತು ಕಳೆದಮೇಲೆ ಇನ್ನೊಂದು ಬಟ್ಟಲು ಕಾಫಿ ಕುಡಿದು, 'ರುಬಷೊವ, ನಿಮ್ಮ ದೇಶದಲ್ಲಿ ಇನ್ನೊಮ್ಮೆ ಕ್ರಾಂತಿ ನಡೆದು ಒಂದನೆಯ ನಂಬರಿನವನನ್ನು ಸ್ಥಾನಭ್ರಷ್ಟನಾಗಿ ಮಾಡುವ ಸಮಯ ಬಂದಲ್ಲಿ, ಗಿನಿ ಹಂದಿಗಳ ಮೇಲೆ ಸ್ವಲ್ಪ ಕರುಣೆ ಇರಲಿ' ಎಂದು ವಿಶೇಷ ರಾಯಭಾರಿ ಹೇಳಿದನು.

ರುಬಷೊವ 'ಅದು ಅಸಂಭವ. ನಿನ್ನ ಮಿತ್ರರಲ್ಲನೇಕರು ಹಾಗೆಂದು ನಂಬಿದರೂ ನನಗೇನೂ ಸಂದರ್ಭ ಇರುವಂತೆ ತೋರುವುದಿಲ್ಲ' ಎಂದನು.

ಹೆರ್‍ ಪ್ರೊಸ್ Z 'ಅದಕ್ಕೆ ಕಾರಣವಿದೆ. ನಿಮ್ಮ ಸಾರ್ವಜನಿಕ ವಿಚಾರಣೆಯ ವರದಿಯನ್ನೋದುವಾಗ ನಮಗೆ ನಿಮ್ಮಲ್ಲೇನೋ ಪ್ರಹಸನ ನಡೆಯುತ್ತಿರಬೇಕೆಂದು ಅನಿಸಿದ್ದು ಸಹಜವೆನ್ನು'

ರುಬಷೊವ: 'ಅಂಥ ಸಂದರ್ಭ ಒದಗಿದಲ್ಲಿ ನಿಮ್ಮ ರಾಷ್ಟ್ರದ ಧೋರಣೆ ಏನಾಗಬಹುದೆಂಬುದರ ಕುರಿತೂ ನಿನ್ನ ಸ್ನೇಹಿತರಿಗೆ ಅಂದಾಜಿರಬಹುದಲ್ಲವೆ?'

ಹೆರ್‍ ಪ್ರೊನ್ Z: 'ತೆಪ್ಪಗೆ ಕೂತಿರುವುದು. ಅದಕ್ಕೂ ಬೆಲೆ ಇದೆ, ಸುಮ್ಮಗಲ್ಲ.–ತಾಟಸ್ಥ್ಯ.

ರುಬಷೊವ: 'ಬೆಲೆ ಇಂತಿಷ್ಟೇ ಎಂದು ಈಗಾಗಲೇ ನಿರ್ಣಯಿಸಿರಬಹುದೆ?'

ಹೆರ್‍ ಪ್ರೊನ್ Z ಅಲ್ಪಸಂಖ್ಯಾಕರು ವಾಸವಾಡುತ್ತಿದ್ದ ಗೋಧಿ ಬೆಳೆಯುವ ಪ್ರಾಂತ್ಯ ಒಂದರ ಹೆಸರು ಹೇಳಿದನು. ಆ ಬಳಿಕ ರುಬಷೊವ ಆತನನ್ನು ಬೀಳ್ಕೊಂಡಿದ್ದನು.

ರುಬಷೊವಗೆ ಈ ದೃಶ್ಯವು ನೆನಪಾಗದೆ ಎಷ್ಟೋ ವರ್ಷಗಳು ಸಂದಿರಬೇಕು. ಕಾಫಿ ಮತ್ತು ಬ್ರ್ಯಾಂಡಿಯ ಸಮಯ ಆಡಿಕೊಳ್ಳುವ ಮಾತಿಗೆ ಏನೂ ಬೆಲೆ ಇಲ್ಲವೆಂದು ಗ್ಲೆಟ್‌ಕಿನ್‌ಗೆ ಹೇಳಿದರೆ ಪ್ರಯೋಜನವಾದೀತೆ? ಗಿನಿಹಂದಿಗಳ ವಿಷಯ ಹೇಳಿಕೊಟ್ಟರೂ ಅತನಿಗೆ ಅರ್ಥವಾದೀತೆ? ಗ್ಲೆಟ್‌ಕಿನ ಓದುವಾಗ ತಪ್ಪಾದ ಸ್ಥಳದಲ್ಲಿ ಒತ್ತು ಬೀಳುವುದನ್ನು ರುಬಷೊವ ಗಮನಿಸಿದ್ದನು. ಈತ ಪ್ರೊಲಿಟೇರಿಯನ್ ವರ್ಗದವನು, ಬೆಳೆದ ಮೇಲೆ ಓದು ಬರಹವನ್ನು ಕಲಿತವನಾಗಿರಬೇಕು. ಆದ್ದರಿಂದ ಗಿನಿಹಂದಿಗಳ ಮಾತೆತ್ತಿದರೆ ಅದು ಎಲ್ಲಿಗೆ ಮುಟ್ಟೀತೆಂಬುದನ್ನು ತಿಳಿಯುವ ಶಕ್ತಿ ಅವನಿಗಿಲ್ಲ.

'ಈ ಸಂಭಾಷಣೆ ಸತ್ಯವೆಂದು ಒಪ್ಪುತ್ತೀಯಾ?' ಎಂದಾತ ಕೇಳಿದನು.

'ಅದರಲ್ಲಿ ಹಾನಿಕರವಾದ್ದೇನಿತ್ತು' ಎಂದ ರುಬಷೊವಗೆ ಗ್ಲೆಟ್‌ಕಿನ್ ತನ್ನನ್ನು ನಿಚ್ಚಣಿಕೆಯ ಇನ್ನೊಂದು ಮೆಟ್ಟಲಿಗೆ ದೂಡಿ ಇಳಿಸಿದ ಅನುಭವವಾಯಿತು.

'ನಾಯಕನನ್ನು ಹಿಂಸೆಯಿಂದ ಕೊನೆಗೊಳಿಸುವ ಅನಿವಾರ್ಯತೆಯ ಕುರಿತು ತರುಣ ಕೀಫರನಿಗೆ ನೀನಂದ ತಾತ್ವಿಕ ವ್ಯಾಖ್ಯಾನದಷ್ಟೇ ಹಾನಿಕರ, ಹೆಚ್ಚೇನೂ ಅಲ್ಲವೆನ್ನು' ಎಂದು ಗ್ಲೆಟ್‌ಕಿನ್ ಅಣಕವಾಡಿದನು.

ರುಬಷೊವ ಕನ್ನಡಕವನ್ನು ಅಂಗಿಯ ತೋಳಿನಿಂದುಜ್ಜಿಕೊಳ್ಳುತ್ತ ಸಂಭಾಷಣೆಯು ಹಾನಿಕರವಾಗಿದ್ದಿರಲೂ ಬಹುದೆಂದು ಯೋಚಿಸಿದನು. ಸ್ವತಃ ಅವನು ಯಾವ 'ಸಂಧಾನ'ಕ್ಕಾಗಿಯೂ ಹಾತೊರೆದವನಲ್ಲ, ಅಲ್ಲದೆ ಹೆರ್‌ವೊನ್ Zಗೆ ಅದರ ಅಧಿಕಾರವೂ ಇರಲಿಲ್ಲ. ಮುತ್ಸದ್ದಿಗಳ ಭಾಷೆಯಲ್ಲಿ ಅವರು ಪರಸ್ಪರ 'ಆಳ ನೋಡಿ ಕೊಂಡರು' ಎನ್ನಬಹುದೇ ಹೊರತು ಅದಕ್ಕಿಂತ ಹೆಚ್ಚಿನ ಮಹತ್ತ್ವದ್ದೇನೂ ಅಲ್ಲಿ ನಡೆದಿರಲಿಲ್ಲ. ಹೀಗೆ 'ಆಳ ನೋಡುವುದು' ಆಗಿನ ಕಾಲದಲ್ಲಿ ಪಾರ್ಟಿಯ ಸಂಪ್ರದಾಯಕ್ಕನುಗುಣವಾಗಿಯೇ ಇತ್ತು. ಕ್ರಾಂತಿಯನ್ನು ಸಫಲಗೊಳಿಸಲು ಹಳೆಯ ನಾಯಕನು ಬರಬೇಕಾದರೆ ಆ ದೇಶದ ಸೈನ್ಯಾಧಿಕಾರಿಗಳ ಬೆಂಬಲವನ್ನು ಪಡೆಯಬೇಕಾಗಿ ಬಂದುದು ಜನಜನಿತವಾದ ವಿಷಯವಾಗಿತ್ತು. ಪ್ರಥಮ ಶಾಂತಿ ಒಪ್ಪಂದದಲ್ಲಿ ಮಹಾನಾಯಕನೇ ಅವರ ತಾಟಸ್ಥ್ಯಕ್ಕೋಸ್ಕರ ಸ್ವರಾಷ್ಟ್ರದ ಕೆಲವು ಭಾಗಗಳನ್ನು ಅವರಿಗೆ ಬಿಟ್ಟಿರಲಿಲ್ಲವೆ? ರುಬಷೊವನ ಮಿತ್ರರಲ್ಲಿ ಒಬ್ಬನು 'ಮುದುಕ ಬುದ್ಧಿವಂತ: ಪುರಸೊತ್ತು ಬೇಕಾಗಿದ್ದುದರಿಂದ ಭೂಮಿಯ ಒಂದು ತುಣುಕು ವಿಲೆ ಮಾಡಿದ' ಎನ್ನುತಿದ್ದ. ಅಂದಮೇಲೆ ನಿರುಪದ್ರವಕಾರಿಯಾದ ಆ ಸಂಭಾಷಣೆಯೂ ಸರಪಣಿಯ ಒಂದು ಗೊಣಸೆಂದು ಒಪ್ಪಬೇಕಾಗುತ್ತದೆ. ಗ್ಲೆಟ್‌ಕಿನನನ್ನೇಕೆ ದೂರಬೇಕು? ಅವನಿಗೆ ಗಿನಿಹಂದಿಗಳ ಪರಿಚಯವೇ ಇಲ್ಲ. ಆದರೆ ಈ ಸಂಭಾಷಣೆ ಗ್ಲೆಟ್‌ಕಿನನಿಗೆ ತಿಳಿದದ್ದೆಂತು? ಯಾರಾದರೂ ಹಿಂದಿನಿಂದ ಕೇಳಿ ಹೇಳಿರಬಹುದೆಂಬುದು ಅಸಂಭವ, ಅಥವಾ ಹೆರ್‌ವೊನ್ Z ಗುಪ್ತಚಾರನಾಗಿದ್ದಿರಬಹುದೆ? ಇದ್ದರೆ ಏತಕ್ಕೋ? ಇಂಥದೂ ನಡೆದದ್ದಿತ್ತು: ಗ್ಲೆಟ್‌ಕಿನ್ ಮತ್ತು ಒಂದನೆಯ

ನಂಬರಿನವನು ಸೇರಿ ರುಬಷೊವಗೋಸ್ಕರ ಬೋನು ತಯಾರಿಸಿಡು ವುದು; ರುಬಷೊವ ನಿಶ್ಚಿಂತೆಯಿಂದ ಅದರೊಳಗೆ ಸಿಕ್ಕಿಬೀಳುವುದು.

'ನನ್ನ ಸಂಭಾಷಣೆಯೆಲ್ಲವೂ ನಿನಗೆ ತಿಳಿದಿರುವಾಗ ಅದರಿಂದೇನೂ ಪರಿಣಾಮ ಇಲ್ಲವೆಂಬುದೂ ನಿನಗೆ ಅರ್ಥವಾಗಲಿಕ್ಕೆ ಸಾಕು.'

'ಹೌದು, ಸಮಯಕ್ಕೆ ಸರಿಯಾಗಿ ನಿನ್ನನ್ನು ಕೈದುಮಾಡಿದು ದರಿಂದ ಪರಿಣಾಮವಾಗಲಿಲ್ಲ. ಇಲ್ಲವಾದರೆ ಬೇಕಾದಷ್ಟು ಆಗುತಿತ್ತು.'

ಇದಕ್ಕೇನು ಉತ್ತರ ಕೊಡಲಿ? ಎಂದು ರುಬಷೊವ ಆಲೋಚಿಸಿದನು. ರುಬಷೊವ ಮುದುಕ, ಗ್ಲೆಟ್‌ಕಿನನ ತಾಕತ್ತು ಅವನಲ್ಲಿಲ್ಲ, ಅಲ್ಲದೆ ಅವನ ಜೀವ ದಣಿದು ಬೇಸತ್ತಿದೆ; ಆದ್ದರಿಂದ ಮುತ್ಸದ್ದಿಯ ಹರಟೆಯ ಪರಿಣಾಮವು ಎಷ್ಟಕ್ಕೂ ಗಂಭೀರವಾಗುತ್ತಿರಲಿಲ್ಲ ಎಂದು ಹೇಳಿದರೆ ಯಾರು ನಂಬುವರು? ವಿರೋಧಿಗುಂಪೆಂದು ಕರೆಸಿಕೊಳ್ಳಲ್ಪಡುತ್ತಿದ್ದ ಜನರೆಲ್ಲ ರುಬಷೊವನಂತೆ ಸೋತು ಸುಣ್ಣವಾಗಿ ಅರಳು ಮರಳು ಹರಟುವುದರಲ್ಲಿ ಮಾತ್ರ ತಜ್ಞರಾಗಿದ್ದರು. ಎಷ್ಟು ವರ್ಷ ಅವರು ಭೂಗತರಾಗಿ ಸರಕಾರದೊಡನೆ ಹೋರಾಡಿದರು? ಎಷ್ಟು ಕಾರಾಗೃಹದ ನರಕಯಾತನೆಯನ್ನನುಭವಿಸಿದರು? ಹತ್ತಾರು ವರ್ಷಗಳ ಕಾಲನಿರಂತರವಾಗಿ, ಯಾರಿಗೂ ಹೇಳದೆ ಜೀವದ ಹೆದರಿಕೆಯನ್ನು ಜೀವದೊಳಗೇ ಅದುಮಿಕೊಂಡು ಆತ್ಮವನ್ನು ಒಣಗಿಸಿಕೊಂಡು ಹಿಪ್ಪೆಯಾದರು? ವರ್ಷಗಟ್ಟಲೆ ಗಡೀಪಾರು, ಪಾರ್ಟಿಯೊಳಗಿನ ತೀವ್ರ ಸಂಘರ್ಷ, ಸೋಲಿನ ಮೇಲೆ ಸೋಲಿನ ಅನುಭವ, 'ಅಂತಿಮವಿಜಯ'ದ ಪರಿಣಾಮವಾಗಿ ಅವರಲ್ಲುಂಟಾದ ನೈತಿಕ ಪತನ—ಎಲ್ಲವೂ ಅವರನ್ನು ಸಂತತವಾಗಿ ಸವೆಸಿ ದಣಿಸಿ ಜೀರ್ಣಿಸಿದ್ದುವು. ಇದನ್ನೆಲ್ಲಾ ಗ್ಲೆಟ್‌ಕಿನಗೆ ಹೇಳಿದರೆ ಅವನಿಗರ್ಥವಾದೀತೆ? ಒಂದನೆಯ ನಂಬರಿನವನ ಸರ್ವಾಧಿಕಾರಿ ಪ್ರಭುತ್ವಕ್ಕೆ ವಿರೋಧಿ ಗುಂಪು ಒಡ್ಡಿದ ವಿರೋಧವು ಕೇವಲ ಬೆಂಕಿಯೊಡನೆ ಆಡುವ ಸರಸದಂತೆ ಆಡಿದವರನ್ನೇ ನುಂಗುವ ವಿಫಲ ಚೇಷ್ಟೆ ಎಂಬ ಸತ್ಯಾಂಶವನ್ನು ಯಾರು ಬಲ್ಲರು? ಹಳೆ ಹುದ್ದರಿಗಳೊಡನೆ ಹೋರಾಡಿ, ಸೋತು ಸುಣ್ಣವಾದ ಈ ಪಳೆಯುಳಿಕೆಗಳಿಗೆ ಇನ್ನುಳಿದ ದಾರಿ ಎರ್ರಾಂಚಿಯ ಸಮಾಧಿಯ ಮೇಲೆ ಬರೆದ 'ನಿದ್ರಿಸು' ಎಂಬ ಬರೆಹ

ದಲ್ಲಿ ಅಡಗಿತ್ತೆಂದು ಯಾರು ಬಲ್ಲರು? ಹೌದು, ನಿದ್ರಿಸಬೇಕು, ಮುಂದಿನ ಜನಾಂಗವಾದರೂ ತಮಗೆ ನ್ಯಾಯವನ್ನು ವಿತರಿಸುವರೆಂಬ ಆಸೆಯಿಂದ ಈಗ ಮೌನವಾಗಿ ನಿದ್ರಿಸಬೇಕು.

ಇದಿರು ಕೂತ ನಿಯೆಂಡರ್ಥಾಲ ಮಾನವನಿಗೆ ಏನು ಹೇಳಲಿ? ನೀನು ಹೇಳಿದ್ದೇ, ನೀನು ಮಾಡಿದ್ದೇ ಸರಿಯಪ್ಪಾ. ಆದರೆ ಒಂದೇ ಒಂದು ವಿಷಯದಲ್ಲಿ ಮಾತ್ರ ತಪ್ಪಿ ಬಿದ್ದಿದ್ದೀಯಾ. ನಿನ್ನ ಮುಂದೆ ಕೂತವನು ರುಬಷೊವ ಎಂದು ಭ್ರಮಿಸಿದ್ದೀಯಾ. ಎಲ್ಲಿದ್ದಾನೆ ರುಬಷೊವ, ನಿನ್ನಿದಿರು ಕೂತಿರುವುದು ಅವನ ನೆರಳು. ಒಟ್ಟಿನಲ್ಲಿ ಈಗ ನೀವು ಮಾಡಬಹುದಾದರೂ ಏನನ್ನು? ಅವನು ಮಾಡಿದ ಕೃತ್ಯಗಳಿಗೋಸ್ಕರವಾಗಿ ಅಲ್ಲ, ಅವನು ಮಾಡದೆ ಇರುವ ಕೃತ್ಯಗಳಿಗೋಸ್ಕರ ಅವನನ್ನು ಶಿಕ್ಷಿಸುವುದು, ಅಷ್ಟೇ ತಾನೇ? ನಮ್ಮ ನಂಬಿಕೆಗೋಸ್ಕರ ನಮ್ಮ ಬಲಿದಾನ' ಎಂದು ಹೆರ್‍ಪ್ರೊನ್ Z ಎಂದುದು ಸರಿಯೋ ತಪ್ಪೋ?

ಈ ಸಲ ಹೇಳಿಕೆಗೆ ರುಜುಮಾಡುವ ಮೊದಲು ರುಬಷೊವ ಗ್ಲೆಟ್‌ಕಿನನ ಹತ್ತಿರ ಒಂದು ಸವಾಲು ಕೇಳಿದನು. ಐವನೊವಗೆ ಏನಾಯಿತೆಂದು ತಿಳಿಯಬೇಕಾಗಿತ್ತು.

'ಐವನೊವನನ್ನು ಸೆರಮನೆಗೆ ಸೇರಿಸಲಾಗಿದೆ'

'ಕಾರಣವೇನೋ?'

'ಐವನೊವ ನಿನ್ನ ತಕ್ಸೀರನ್ನು ಉತ್ಸಾಹವಿಲ್ಲದೆ ವಿಚಾರಿಸಿದ್ದಾನೆ. ಅಲ್ಲದೆ ಖಾಸಗೀ ಸಂಭಾಷಣೆಯ ಕಾಲದಲ್ಲಿ ನಿನ್ನ ಮೇಲಿನ ಆರೋಪಗಳಲ್ಲಿ ತಾನೇ ಸಂದೇಹ ವ್ಯಕ್ತಪಡಿಸಿದ್ದಾನೆ.'

'ಅವನದನ್ನು ನಂಬದಿದ್ದರೆ ಏನಂತೆ? ಹೇಗೂ ಅವನು ನನಗೆ ಸ್ನೇಹಿತನಾಗಿದ್ದವನು.'

'ಹಾಗಿದ್ದರೆ ಅವನು ವಿಚಾರಣೆಯನ್ನು ನಿಲ್ಲಿಸಿ ನೀನು ನಿರಪರಾಧಿಯೆಂದು ಮೇಲಧಿಕಾರಿಗಳಿಗೆ ವರದಿ ಮಾಡಬೇಕಾಗಿತ್ತು.'

ಗ್ಲೆಟ್‌ಕಿನ್ ಏನು ತಮಾಷೆಮಾಡುತ್ತಿರಬಹುದೇ? ಇಲ್ಲ ಅವನ ಮುಖದಲ್ಲಿ ಅಂಥ ಸದಿಚ್ಛೆ ಇರುವಂತೆ ಕಾಣಿಸಲಿಲ್ಲ.

*   *   *

ಇನ್ನೊಂದು ಬಾರಿ ದಿನವೆಲ್ಲ ವಿಚಾರಣೆ ನಡೆದ ಮೇಲೆ ರುಬಷೊವ ಪೇನ ಹಿಡಿದುಕೊಂಡು ರುಜುಹಾಕಲು ಬಗ್ಗಿದ ಹೊತ್ತು, ಗ್ಲೆಟ್‌ಕಿನನಿಗೆ ಇನ್ನೊಂದು ಪ್ರಶ್ನೆಯನ್ನು ಹಾಕಿದನು. 'ನೀನು ಕಠಿನ ಮಾರ್ಗ'ದ ಪುರಸ್ಕರ್ತನೆಂದು ಯಾರೋ ಹೇಳಿದರು. ಆದರೆ ನನಗೆ ನೀನು ಇನ್ನೂ ಚಿತ್ರಹಿಂಸೆಯನ್ನು ಆರಂಭಿಸಲಿಲ್ಲವೇಕೆ?' ಎಂದು ಕೇಳಿದನು.

ಗ್ಲೆಟ್‌ಕಿನ್ 'ಹಾಗೋ, ಅದಕ್ಕೆ ಕಾರಣವಿದೆ. ಶಾರೀರಿಕ ಹಿಂಸೆ ಕೊಡಬಾರದೆಂದು ನಮ್ಮ ಕ್ರಿಮಿನಲ್ ಮಸೂದೆ ಹೇಳುತ್ತದೆ.'

ರುಬಷೊವ ರುಜುಹಾಕಿ ಮುಗಿಸಿದ ತರುವಾಯ, ಗ್ಲೆಟ್‌ಕಿನ್ 'ಅಲ್ಲದೆ ಇನ್ನೊಂದು ಕಾರಣವೂ ಇದೆ. ಹಿಂಸೆಯ ಒತ್ತಾಯಕ್ಕೆ ಒಪ್ಪಿಕೊಳ್ಳುವ ಆರೋಪಿಯು ಆ ಮೇಲೆ ಬಹಿರಂಗ ವಿಚಾರಣೆಯಲ್ಲಿ ಹಿಂದೆ ಹೇಳಿದ್ದನ್ನೆಲ್ಲ ಖಂಡಿಸಿ ಬಿಟ್ಟದ್ದೂ ಉಂಟು. ನೀನು ಅಂಥ ಗಟ್ಟಿ ಜಾತಿಗೆ ಸೇರಿದವನು. ಬಹಿರಂಗ ವಿಚಾರಣೆಯ ಸಮಯ ನೀನು ಸ್ವಯಂ ಸ್ಫೂರ್ತಿಯಿಂದ ಒಪ್ಪಿಕೊಂಡರೆ ಅದರಿಂದ ನನಗೆ ಪ್ರಯೋಜನವಿದೆ.'

ಗ್ಲೆಟ್‌ಕಿನ್ ಬಹಿರಂಗ ವಿಚಾರಣೆಯ ಪ್ರಸ್ತಾಪ ಮಾಡಿದುದು ಇದು ಮೊದಲ ಸಲ. ಆಜಾನುಬಾಹುವಿನ ಹಿಂದೆ ನಡವೆಯಲ್ಲಿ ಕೋಣೆಗೆ ತೆರಳುವಾಗ ರುಬಷೊವನ ಮನಸ್ಸಿನಲ್ಲಿ ನಿಂತುದು ಈ ಸುದ್ದಿಯಲ್ಲ, 'ನೀನು ಗಟ್ಟಿ ಜಾತಿ' ಎಂದು ಗ್ಲೆಟ್‌ಕಿನ್ ಹೇಳಿದನಲ್ಲಾ ಆ ಮಾತು. ಅದರಲ್ಲೇನೋ ಸುಖದಾಯಕವಾದ ಆತ್ಮಸಮಾಧಾನವಿತ್ತು. ನನ್ನ ಅರಳುಮರಳು ಅತಿಯಾಗಿ ನಾನು ಪ್ರಾಯಃ ಮಕ್ಕಳಂತಾಗುತ್ತಿದ್ದೇನೋ ಎನಿಸಿತು—ಮಂಚದಲ್ಲಿ ಮಲಗುವ ರುಬಷೊವಗೆ. ಆದರೂ ಮನಸ್ಸಿನ ಸಮಾಧಾನ ನಿದ್ದೆ ಹತ್ತುವ ತನಕ ಮಾಸಲಿಲ್ಲ.

ಪ್ರತಿಸಲ ಗ್ಲೆಟ್‌ಕಿನನೊಡನೆ ವಾದ ಮಾಡಿ ಬರುವಾಗಲೂ ರುಬಷೊವಗೆ ಅತ್ಯಂತ ದಣಿವಾಗುತ್ತಿತ್ತು. ಪ್ರತಿಸಲವೂ ಹೇಳಿಕೆಗೆ ರುಜು ಮಾಡಿ ಒಂದಾದ ಮೇಲೊಂದು ಮೆಟ್ಟಲಿಳಿದು, ನಿಶ್ಚಿತ ಪರಿಣಾಮವನ್ನು ಎಂತೂ ಮುಟ್ಟುವಂತಿರುವಾಗ ವಾದ—ಪ್ರತಿವಾದದ, ಸುಳ್ಳು, ಸತ್ಯಗಳ

ವಿವೇಚನೆ ಏತಕ್ಕೆ ಹೋರಾಟವೇತಕ್ಕೆ ಎಂದು ಆತನಿಗೆ ಒಮ್ಮೊಮ್ಮೆ ಅನಿಸುವುದು. ಎಲ್ಲವನ್ನು ಬಿಟ್ಟು ಸೋಲನ್ನೊಪ್ಪಿಕೊಂಡು ಬಿಟ್ಟರೆ ಅಲ್ಲಿಗೆ ಮುಕ್ತಾಯವಾಗುವುದಲ್ಲಾ? ಮರಣದ ಆಧಿಭೌತಿಕ ಸ್ವರೂಪವು ರುಬಷೊವನ ಚಿತ್ತದಿಂದ ಎಂದೋ ಹಾರಿ ಹೋಗಿತ್ತು. ಈಗ ಮರಣವೆಂದರೆ ನಿದ್ರೆಯಂತಹ ಬೆಚ್ಚಗಿನ ಶಾರೀರಿಕ ಆಕರ್ಷಣೆಯಾಗಿತ್ತು ಅವನ ಮನೋಭೂಮಿಕೆಯಲ್ಲಿ. ಆದರೆ ಅದೇನೋ ಕರ್ತವ್ಯ ಬುದ್ಧಿಯೊಂದು ಗಾಳಿಯೊಡನೆ ಹೋರಾಡಲು ಅವನನ್ನು ನಿತ್ಯವೂ ಪ್ರೇರಿಸುತಿತ್ತು. ನಿಚ್ಚಣಿಕೆಯ ಕೊನೆಯ ಮೆಟ್ಟಲಿಂದ ಗ್ಲೆಟ್‌ಕಿನ ತನ್ನನ್ನು ನೂಕುವಲ್ಲಿಯವರೆಗೂ ಹೋರಾಡತಕ್ಕದ್ದು ಅವನ ವಿಧಿ. ದಾರಿಯ ಅಂತ್ಯವೇ ಅವನ ಅಂತ್ಯ. ತೆರೆದ ಕಣ್ಣಿನಿಂದ ಅಂಧಕಾರವನ್ನು ಪ್ರವೇಶಿಸಿದ ಮೇಲೆಯೆ ಸುಖನಿದ್ರೆಯನ್ನು ಮಾಡುವ ಅಧಿಕಾರ ಅವನಿಗೆ ಪ್ರಾಪ್ತಿಯಾದೀತು, ಅದಕ್ಕೆ ಮೊದಲಲ್ಲ.

*　　　*　　　*

ದಿನ ರಾತ್ರಿಯ ಅವಿರತ ವಿಚಾರಣೆಯ ದೆಸೆಯಿಂದ ಗ್ಲೆಟ್‌ಕಿನನಲ್ಲಿಯೂ ಅದೇನೋ ಪರಿಣಾಮವಾದಂತೆ ರುಬಷೊವಗೆ ಅನಿಸಿತು. ಹೆಚ್ಚೇನೂ ಅಲ್ಲವಾದರೂ ನಿಶ್ಚಿತವಾಗಿ ಏನೋ ಆಗಿತ್ತೆಂದು ರುಬಷೊವನ ಕಣ್ಣಿಗೆ ಬೀಳದಿರಲಿಲ್ಲ. ಕೊನೆ ತನಕವೂ ಆತ ಡೆಸ್ಕಿನ ಹಿಂದೆ ನಿರ್ದಿಷ್ಟ ಭಂಗಿಯಲ್ಲೇ ಕೂತಿರುತ್ತಿದ್ದರೂ, ದಿನಗಳೆದಂತೆ ದೀಪದ ಪ್ರಕಾಶದಿಂದ ರುಬಷೊವನನ್ನು ಹಿಂಸಿಸಬಾರದೆಂಬ ಸದ್ಬುದ್ಧಿ ಅವನಿಗೆ ಬಂದು ಈಗೀಗ ದೀಪವು ಸರ್ವಸಾಮಾನ್ಯ ದೀಪಗಳಷ್ಟೆ ಪ್ರಕಾಶಿಸುತಿತ್ತು. ಅವನ ಮುಖದ ಮೇಲೆ ಒಮ್ಮೆಯಾದರೂ ನಗೆ ಆಡಿದ್ದಿಲ್ಲ, ಪ್ರಾಯಃ ನಿಯೆಂಡರ್ಥಾಲ್ ಮನುಷ್ಯರಿಗೆ ನಗುವುದು ಬರುವುದಿಲ್ಲವೋ ಏನೋ. ಅವನ ಸ್ವರದಲ್ಲಿ ಭಾವನೆಗಳನ್ನು ಸೂಚಿಸುವ ಏರಿಳಿತ ಉಂಟಾಗಲಿಲ್ಲ. ಆದರೆ ಒಂದು ಸಲ ರುಬಷೊವನ ಸಿಗರೇಟ ಖಾಲಿಯಾಗಲು ಗ್ಲೆಟ್‌ಕಿನ್ ತಾನು ಸೇದದಿದ್ದರೂ ರುಬಷೊವಗೆ ಹೊಸ ಪ್ಯಾಕೆಟ್ ಒಂದನ್ನು ಜೇಬಿನಿಂದ ತೆಗೆದು ಕೊಟ್ಟಿದ್ದನು.

ಎಲ್ಯುಮಿನಿಯಮ್ ಟ್ರಸ್ಟಿನ ವಿಷಯದಲ್ಲಿ ರುಬಷೊವೇ ಗೆದ್ದ ನೆಂದು ಹೇಳಬೇಕು. ಗೆದ್ದರೂ ಅದಕ್ಕೆ ಮಹತ್ತ್ವವಿರಲಿಲ್ಲವೆಂಬುದು ಬೇರೆ ಮಾತು. ರುಬಷೊವ ಈ ಅಮುಖ್ಯ ಆರೋಪದಲ್ಲಿಯೂ ಇತರ ಆರೋಪಗಳಂತೆಯೇ ಲೋಪಗಳನ್ನು ಎತ್ತಿ ತೋರಿಸಿ ಗ್ಲೆಟ್‌ಕಿನನೊಡನೆ ಹೋರಾಡಿದನು: ಅಂದು ಇರುಳೆಲ್ಲ ಅವರಿಬ್ಬರೂ ಒಬ್ಬರೊಬ್ಬರ ಸಮ್ಮುಖದಲ್ಲಿ ಕೂತಿದ್ದರು: ರುಬಷೊವ ಒಂದೊಂದಾಗಿ ಆರೋಪ ಗಳನ್ನು ಅಲ್ಲಗಳೆಯುತ್ತ ಬಂದನು, ಅವನಿಗೆ ಸಮಯಕ್ಕೆ ಸರಿಯಾಗಿ ಅದು ಹೇಗೋ ಸರಿಯಾದ ಅಂಕೆಸಂಖ್ಯೆಗಳೂ ನೆನಪಿಗೆ ಬಂದುದರಿಂ ದಾಗಿ ಆರೋಪವನ್ನು ತಲೆಕೆಳಗೆ ಮಾಡುವುದು ಸುಲಭವಾಯಿತು. ಗ್ಲೆಟ್‌ಕಿನಗೆ ತನ್ನ ಹೊಡೆತವನ್ನು ಎಲ್ಲಿಂದ ತೊಡಗುವುದೆಂದೇ ತಿಳಿ ಯದು. ಮೂರನೆಯ ಭೇಟಿಯ ಹೊತ್ತಿಗಾಗಲೇ ಅವರಿಬ್ಬರೊಳಗೆ ಒಂದು ಅಲಿಖಿತ ಒಪ್ಪಂದವಾಗಿತ್ತು: ಆರೋಪದ ಮೂಲವು ಸರಿ ಎಂಬುದನ್ನು ಗ್ಲೆಟ್‌ಕಿನ್ ಸಮರ್ಥಿಸಬಲ್ಲನಾದರೆ ರುಬಷೊವ ಆ ಆರೋ ಪದ ಪರಿಣಾಮಗಳಿಗೆ ಕೊಂಬು, ಗೊಲಸು ಸೇರಿಸುವ ಸ್ವಾತಂತ್ರ್ಯ ವನ್ನು ಗ್ಲೆಟ್‌ಕಿನಗೆ ಕೊಡುತ್ತಿದ್ದನು. ಆದ್ದರಿಂದ ಬರಬರುತ್ತ ರುಬಷೊವ ವಸ್ತುತಃ ಮಾಡಿದ ಕೃತ್ಯಗಳಿಗೂ, ಅವನ ಅಭಿಪ್ರಾಯದ ಪರಿಣಾಮವಾಗಿ ಆತ ಮಾಡಿರಬಹುದಾದ ಕೃತ್ಯಗಳಿಗೂ ಅಂತರವೇನೆಂಬುದೇ ಅವರಿಗೆ ತಿಳಿಯದಾಯಿತು. ಅರ್ಥಾತ್ ಭ್ರಾಂತಿ ಯಾವುದು, ವಾಸ್ತವವಾವುದು; ತಾರ್ಕಿಕ ಕಟ್ಟುಕತೆ ಯಾವುದು, ಸತ್ಯ ಯಾವುದು ಎಂಬುದನ್ನು ತಿಳಿಯುವ ವಿವೇಚನೆಯೇ ಅವರಲ್ಲಿ ಮಾಯವಾಯಿತು.

ರುಬಷೊವಗೆ ತಲೆಯ ಮಂಜು ಹರಿದ ಹೊತ್ತಿನಲ್ಲಿ ಇದು ಅರ್ಥ ವಾಗುತ್ತಿತ್ತು; ಆಗ ಅವನಿಗೇನೋ ಮಾದಕತೆಯ ಒಂದು ಸ್ಥಿತಿಯ ಅನುಭವವಾಗುತಿತ್ತು. ಆದರೆ ಗ್ಲೆಟ್‌ಕಿನ್‌ಗೆ ಈ ವಿಷಯ ತಿಳಿಯದು.

ಮುಂಜಾವು ಸಮೀಪಿಸಿದಂತೆ ರುಬಷೊವ ಇನ್ನೂ ಹೋರಾಡುತ್ತಲೇ ಇದ್ದುದರಿಂದ ಗ್ಲೆಟ್‌ಕಿನ ಮಾತನಾಡುವಾಗ ಅವನ ಸ್ವರದಲ್ಲಿ ನಡುಕ ವಿತ್ತು. ಆತ ದೀಪವನ್ನು ಒಮ್ಮೆಲೆ ಹೆಚ್ಚು ಒತ್ತಡಕ್ಕೆ ತಿರುಗಿಸಿ ರುಬ ಷೊವನ ಮುಖದಲ್ಲಿ ಆಡುತ್ತಿದ್ದ ವ್ಯಂಗ್ಯದ ನಗುವನ್ನು ನೋಡುತ್ತಲೇ

ಮರಳಿ ಪ್ರಕಾಶವನ್ನಿಳಿಸಿದನು. ಇನ್ನೂ ಏನೇನೋ ಪ್ರಶ್ನೆಗಳನ್ನು ಕೇಳಿದರೂ ಅವರಲ್ಲಿ ಸತ್ತ್ವವಿರಲಿಲ್ಲ. ಕೊನೆಯಲ್ಲಿ 'ಅಂದರೆ ನಿನ್ನ ಆಡಳಿತೆಗೆ ಒಪ್ಪಿಸಿದ ಉದ್ಯಮದ ವಿಷಯ ನೀನು ಯಾವ ವಿಧ್ವಂಸಕ ಕಾರ್ಯವನ್ನೂ, ಅಥವಾ ಅದಕ್ಕೆ ಸಾಧಕವಾಗುವ ಯಾವ ಯೋಜನೆಯನ್ನೂ ಮಾಡಿಲ್ಲವೆಂದು ನಿನ್ನ ಅಂಬೋಣವೆ?' ಎಂದು ಕೇಳಿದನು.

ರುಬಷೊವ ಹೌದೆಂದು ತಲೆ ಅಲ್ಲಾಡಿಸಿ, ನಿದ್ರಿತ ನೇತ್ರಗಳಿಂದ ಮುಂದೇನು ಎಂಬ ಕುತೂಹಲದಲ್ಲಿದ್ದನು. ಗ್ಲೆಟ್‌ಕಿನ್ ಕಾರ್ಯದರ್ಶಿಯ ಕಡೆಗೆ ತಿರುಗಿ, 'ಸರಿಯಾದ ಪುರಾವೆಗಳಿಲ್ಲದಿರುವುದರಿಂದ ಈ ಆರೋಪವನ್ನು ಹೊಡೆದುಹಾಕಬೇಕೆಂದು ಪರೀಕ್ಷಕ ಮ್ಯಾಜಿಸ್ಟ್ರೇಟ್ ಶಿಫಾರಸು ಮಾಡುತ್ತಾನೆ ಎಂದು ಬರೆ' ಎಂದನು.

ರುಬಷೊವ ಬೇಗ ಬೇಗನೆ ಸಿಗರೇಟ ಹಚ್ಚಿ ತನ್ನಲ್ಲಿ ಉದಿಸಿದ ವಿಜಯೋಲ್ಲಾಸವನ್ನು ಅಡಗಿಸಲು ಯತ್ನಿಸಿದನು. ಗ್ಲೆಟ್‌ಕಿನನ ಮೇಲೆ ಆತನ ಪ್ರಥಮ ವಿಜಯವು ಮಹಾಸಮರದಲ್ಲಿ ಎಲ್ಲೋ ಒಂದು ಮೂಲೆಯಲ್ಲಿ ದೊರೆತ ಸ್ಥಾನೀಯ ವಿಜಯವೆಂದು ರುಬಷೊವ ಅರಿಯದವನಲ್ಲ. ಆದರೂ ವಿಜಯದ ಹುಮ್ಮಸ್ಸು ಮನಸ್ಸಿಗೆ ಬಾರದೆ ಎಷ್ಟು ತಿಂಗಳು, ಎಷ್ಟು ವರ್ಷ ಸಂದಿರಬಹುದೋ........ ಗ್ಲೆಟ್‌ಕಿನ್ ಕಾರ್ಯದರ್ಶಿಯ ಕೈಯಿಂದ ವರದಿಯನ್ನು ತೆಗೆದುಕೊಂಡು ಆಕೆಯನ್ನು ಹೋಗಹೇಳಿದನು.

ಅವರಿಬ್ಬರೇ ಇದ್ದಾಗ—ರುಬಷೊವ ರುಜುಹಾಕಲು ಬಗ್ಗಿದಾಗ—ಗ್ಲೆಟ್‌ಕಿನ ಅವನ ಕೈಯಲ್ಲಿ ಪೇನ ಕೊಡುತ್ತ 'ನಮ್ಮ ಅನುಭವದ ಪ್ರಕಾರ ಸರಕಾರಕ್ಕೆ ಅತಿ ಹೆಚ್ಚು ಕೀಟಲೆ ಕೊಡಬೇಕೆನ್ನುವ ವಿರೋಧಿ ಗುಂಪಿನವರಿಗೆ ಉದ್ಯಮಗಳ ವಿಧ್ವಂಸನದಷ್ಟು ಒಳ್ಳೆಯ ಉಪಾಯ ಬೇರೆ ಇಲ್ಲವೆಂದು ತಿಳಿದುಬಂದಿದೆ. ಈ ಮಾರ್ಗವನ್ನು ಅನುಸರಿಸಲೇ ಇಲ್ಲವೆಂದು ನೀನು ಇಷ್ಟೇತಕ್ಕೆ ಹಠ ಹಿಡಿಯುತ್ತೀಯಾ?' ಎಂದು ಕೇಳಿದನು.

'ಏತಕ್ಕೆನ್ನಲಿ—ಅವರ ತಂತ್ರವೇ ತಪ್ಪು. ವಿಧ್ವಂಸಕಾರಿ ಎಂಬ ಒಂದು ಕಾಲ್ಪನಿಕ ವ್ಯಕ್ತಿಯನ್ನು ಪ್ರತಿಸಲವೂ ಎಲ್ಲ ತಪ್ಪಿಗೂ ಹೊಣೆ

ಯಾಗಿ ಮಾಡುವುದು, ಆ ಮೇಲೆ ಆತನು ಅದನ್ನು ಅಲ್ಲಗಳೆಯುವುದು—
ಇದೊಂದು ಆಟ ನನ್ನ ಮನಸ್ಸಿಗೆ ಹಿಡಿಸದು.'

ರುಬಷೊವನ ವಿಜಯೋಲ್ಲಾಸವು ಅವನನ್ನು ಗಟ್ಟಿಯಾಗಿ ಮಾತಾಡುವಂತೆ ಪ್ರೇರಿಸಿತ್ತೋ ಏನೋ, ಅವನ ಸ್ವರವು ಹಿಂದಿಗಿಂತ ಬಲವಾಯಿತು.

'ಸರಿ, ವಿಧ್ವಂಸಕ ಚಟುವಟಿಕೆಯು ಕೇವಲ ಕಟ್ಟುಕತೆ ಎಂಬುದು ನಿನ್ನ ಅಭಿಪ್ರಾಯವಾದರೆ ಔದ್ಯಮಿಕ ಕ್ಷೇತ್ರದ ಬೆಳವಣಿಗೆಯು ಅತೃಪ್ತಿಕರವಾಗಿ ಸಾಗುತ್ತಿರಲು ಏನಾದರೂ ಕಾರಣವಿರಬೇಕಲ್ಲಾ?'

'ಇದೆ. ಗಂಟೆಗಿಷ್ಟು ಸಂಬಳ ಎನ್ನುವುದರ ಬದಲು ಕೆಲಸದ ಉತ್ಪನ್ನದ ಮೇಲಿಂದ ಕೂಲಿಯನ್ನು ನಿರ್ಣಯಿಸಿದ್ದು, ಕೂಲಿಕಾರರನ್ನು ಗುಲಾಮರಂತೆ ನಡೆಸುವುದು, ಮತ್ತು ನಿರ್ದಯ ಅನಾಗರಿಕ ಶಿಸ್ತು ನಿಯಮಗಳ ಒತ್ತಾಯ— ಇದರಿಂದಾಗಿ ಉದ್ಯಮಗಳ ನಡೆ ಮಂದವಾಗಿದೆ. ಅಳತೆ ಮೀರಿ ದುಡಿದ ಕೆಲಸಗಾರರನ್ನು ವಿಧ್ವಂಸಕರೆಂದು ಪಟ್ಟಿ ಹಚ್ಚಿ ಗುಂಡಿಕ್ಕಿದ ಎಷ್ಟೋ ನಿದರ್ಶನ ನನ್ನ ಎಲ್ಯುಮಿನಿಯಮ್ ಟ್ರಸ್ಟಿನಲ್ಲಿಯೇ ನಡೆದಿತ್ತು. ಎರಡು ಮಿನಿಟು ತಡವಾಗಿ ಬಂದರೆ ಕೆಲಸ ವಜಾ ಮಾತ್ರವಲ್ಲ ಅವನ ಗುರುತುಪತ್ರದಲ್ಲಿ ಹಾಕುವ ಮುದ್ರೆಯನ್ನು ನೋಡಿ ಅವನಿಗೆ ಬೇರೆಲ್ಲೂ ಕೆಲಸ ಸಿಗದಂತೆ ನೋಡಿಕೊಳ್ಳುವುದೂ ನಿಮ್ಮ ಪದ್ಧತಿಯಾಗಿದೆ.'

ಗ್ಲೆಟ್‌ಕಿನ್ ತನ್ನ ಸ್ವಾಭಾವಿಕ ಸ್ವರದಲ್ಲಿ 'ನೀನು ಚಿಕ್ಕವನಿದ್ದಾಗ ನಿನಗೆ ಕೈಗಡಿಯಾರ ಕೊಟ್ಟಿದ್ದರೆ?' ಎಂದು ಕೇಳಿದನು.

ಈ ಮಾತನ್ನಾಲಿಸಿ ರುಬಷೊವಗೆ ಪರಮಾಶ್ಚರ್ಯವಾಯಿತು. ಇದೇನು ನಿಯಾಂಡರ್ಥಾಲ ಮನುಷ್ಯನಿಗೂ ವಿನೋದದ ರಸನಿಮಿಷಾನುಭವವುಂಟೆ?

'ಏನು, ನನ್ನ ಪ್ರಶ್ನೆಗೆ ಉತ್ತರಕೊಡಲೊಲ್ಲೆಯಾ?'

'ಕೊಡದೆ ಏನು?' ಎಂದ ರುಬಷೊವ.

'ಗಡಿಯಾರ ಕೊಟ್ಟಾಗ ನಿನ್ನ ವಯಸ್ಸೆಷ್ಟು?'

'ಸರಿಯಾಗಿ ನೆನಪಿಲ್ಲ, ಎಂಟೋ ಒಂಭತ್ತೋ ಇರಬಹುದು.'

ಗ್ಲೆಟ್‌ಕಿನ್ 'ಗಂಟೆಯನ್ನು ಮಿನಿಟುಗಳಾಗಿ ವಿಭಾಗಿಸಲು ಬರುತ್ತ ದೆಂದು ನನಗೆ ಮೊದಲು ತಿಳಿದದ್ದು ನನ್ನ ಹದಿನಾರನೆಯ ವಯಸ್ಸಿನಲ್ಲಿ. ನನ್ನ ಹಳ್ಳಿಯ ಜನರು ಪಟ್ಟಣಕ್ಕೆ ಹೋಗಬೇಕಾದರೆ ಮುಂಜಾನೆ ಮನೆಯಿಂದ ಹೊರಟು ರೈಲ್ವೆ ಸ್ಟೇಷನಿನಲ್ಲಿ ರೈಲು ಬರುವತನಕ ನಿದ್ರಿಸುವುದು, ಕಾಯುವುದು ರೂಢಿ. ರೈಲು ಮಧ್ಯಾಹ್ನ ಬಂದರೂ ಬಂತು, ಸಂಜೆ ಬಂದರೂ ಬಂತು, ಬರದೆ ಮರುದಿನ ಬಂದದ್ದೂ ಉಂಟು. ನಮ್ಮ ಗಿರಣಿಗಳಲ್ಲಿ ಈಗ ಕೆಲಸಮಾಡುವ ಜನ ಇಂಥವರು, ರೈತರು. ಉದಾಹರಣೆ ಕೊಡುವುದಾದರೆ ಪ್ರಪಂಚದ ಅತಿದೊಡ್ಡ ರೈಲುಕಾರ್ಖಾನೆ ಇವತ್ತು ನನ್ನ ಹಳ್ಳಿಯಲ್ಲಿದೆ. ಮೊದಲ ವರ್ಷ ಕಾರ್ಖಾನೆಯ ಮೇಸ್ತ್ರಿಗಳು ಕುಲುಮೆ ಒಮ್ಮೆ ಖಾಲಿಯಾಗಿ ಮತ್ತೊಮ್ಮೆ ತುಂಬುವ ನಡುವಿನ ಸಮಯದಲ್ಲಿ ಅಲ್ಲೇ ಪಕ್ಕದಲ್ಲಿ ಗೊರಕೆ ಹೊಡೆಯುತ್ತಿದ್ದರು. ಅವರನ್ನು ಗುಂಡಿಕ್ಕದೆ ಬೇರೇನು ಮಾಡಬೇಕು? ಬೇರೆ ದೇಶಗಳಲ್ಲಿ ಯಂತ್ರಗಳ ರಖವಾಲೆ ಮಾಡುವುದನ್ನು ಕಲಿಯಲು ರೈತರಿಗೆ ನೂರಿನ್ನೂರು ವರ್ಷ ಸಮಯ ದೊರೆಯಿತು. ಇಲ್ಲಿ ಹತ್ತೇ ವರ್ಷದಲ್ಲಿ ಎಲ್ಲವೂ ಆಗಬೇಕಾಗಿತ್ತು. ಅವರನ್ನು ಗುಂಡಿಕ್ಕುವ ಮತ್ತು ಕೆಲಸದಿಂದ ತೆಗೆಯುವ ಶೀಘ್ರ ವಿಧಾನದಿಂದಲ್ಲದೆ ಸುಧಾರಿಸುವುದೇ ಶಕ್ಯವಿರಲಿಲ್ಲ; ಇಡಿ ದೇಶವೇ ತಟಸ್ಥವಾಗಿ, ಕೆಲಸವೆಲ್ಲ ನಿಂತು ಉಕ್ಕಿನ ಕುಲುಮೆಗಳ ಸುತ್ತಲೂ ಹುಲ್ಲು ಬೆಳೆಯುತಿತ್ತು. ಕಳೆದ ವರ್ಷ ಇಂಗ್ಲೆಂಡಿನ ಮೆಂಚೆಸ್ಟರನಿಂದ ಒಂದು ಸ್ತ್ರೀಯರ ಶಿಷ್ಟಮಂಡಲಿ ನಮ್ಮಲ್ಲಿ ಸಂದರ್ಶನೆಗೆ ಬಂದಿತು. ಅವರಿಗೆ ನಾವು ನಮ್ಮ ಉದ್ಯಮ ಗಳನ್ನೆಲ್ಲ ತೋರಿಸಿದೆವು. ಸ್ವದೇಶಕ್ಕೆ ಮರಳಿದ ಮೇಲೆ ಅವರು ಲೇಖನಗಳನ್ನು ಬರೆದು ಮೆಂಚೆಸ್ಟರನ ಕೆಲಸಗಾರರಾದರೆ ಒಂದು ಗಂಟೆ ಕೂಡ ಇಲ್ಲಿ ಕೆಲಸ ಮಾಡುವುದು ಸಾಧ್ಯವಿಲ್ಲವೆಂದು ನಮ್ಮ ಪದ್ಧತಿ ಯನ್ನು ಕಟುವಾಗಿ ಟೀಕಿಸಿದರು. ಮೆಂಚೆಸ್ಟರಿನಲ್ಲಿ ಬಟ್ಟೆಯ ಉದ್ಯ ಮವು ಆರಂಭವಾಗಿ ಇನ್ನೂರು ವರ್ಷ ಆಗಿದೆ, ಇನ್ನೂರು ವರ್ಷಗಳ ಹಿಂದಿನ ಆರಂಭಕಾಲವಲ್ಲಿ ಅಲ್ಲಿನ ಪರಿಸ್ಥಿತಿ ಹೇಗಿತ್ತೆನ್ನುವುದನ್ನು ನಾನು ಓದಿಬಲ್ಲೆ. ಕಾಮ್ರೆಡ ರುಬಶೊವ, ನೀನೀಗ ಉಪಯೋಗಿಸುವ ವಾದ

ಈ ಸ್ತ್ರೀ ಶಿಷ್ಟ ಮಂಡಲದ ವಾದವಾಗಿದೆ. ಆದರೆ ನಿನಗೆ ಈ ಸ್ತ್ರೀಯರಿ ಗಿಂತ ಪರಿಸ್ಥಿತಿಯ ಜ್ಞಾನ ಹೆಚ್ಚಾಗಿರುವುದರಿಂದ ನಿನ್ನ ವಾದದ ಅರ್ಥ ವೇನೆಂದು ಯಾರಾದರೂ ಪರ್ಯಾಲೋಚಿಸಬೇಕಾಗುತ್ತದೆ. ಆದರೆ ನಿನಗೂ ಶಿಷ್ಟಮಂಡಲಿಗೂ ಒಂದು ವಿಷಯದಲ್ಲಿ ಸಮಾನತೆಇದೆ: ನೀನೂ ಚಿಕ್ಕವನಿರುವಾಗ ಕೈಗಡಿಯಾರ ಕಟ್ಟಿಕೊಂಡವನು' ಎಂದನು.

ರುಬಷೊವ ಮೌನವಾಗಿ ಗ್ಲೆಟ್‌ಕಿನನ್ನು ಹೊಸ ಆಸಕ್ತಿಯಿಂದ ಪರೀಕ್ಷಿಸಿದನು. ಇದೇನು ನಿಯೆಂಡರ್ಥಾಲನು ತನ್ನ ಬುಟ್ಟಿಯಿಂದ ಹೊರಗೆ ಬರುವ ಹಾಗಿದೆಯಲ್ಲಾ ಎಂದುಕೊಂಡನು. ಆದರೆ ಗ್ಲೆಟ್‌ಕಿನ ಕೂತಭಂಗಿಯಲ್ಲಿ ಏನೂ ಬದಲಾವಣೆ ಇರಲಿಲ್ಲ.

'ನಿನ್ನ ವಾದದಲ್ಲಿ ಕೆಲವಂಶ ಸರಿಯಾಗಿರಬಹುದು. ಆದರೆ ಈ ಪ್ರಶ್ನೆಯನ್ನು ನಾನು ಪ್ರಸ್ತಾಪಿಸಲಿಲ್ಲ: ಇಂಥ ಘಟನೆಗಳ ನೈಸರ್ಗಿಕ ಕಾರಣಗಳನ್ನು ನೀನೇ ಅಷ್ಟು ಚೆನ್ನಾಗಿ ವಿವರಿಸಿದಿ ಅಂದ ಮೇಲೆ ಬಲಿ ಪಶುಗಳನ್ನೇತಕ್ಕೆ ಹುಡುಕುತ್ತಿರಬೇಕೋ?' ಎಂದು ರುಬಷೊವ ಕೇಳಿ ದನು.

'ಜಟಿಲವಾದ ಪ್ರಶ್ನೆಗಳಿಗೆಲ್ಲ ಜನತೆಗೆ ನಾವು ಸುಲಭದಲ್ಲಿ ಅರ್ಥ ವಾಗುವ ಸರಳ ಉತ್ತರಗಳನ್ನು ಸಿದ್ಧಗೊಳಿಸುವುದಗತ್ಯ. ಇತಿಹಾಸದಲ್ಲಿ ಎಲ್ಲೂ ಬಲಿಪಶುಗಳಿಲ್ಲದೆ ಕೆಲಸ ನಡೆದದ್ದು ನನಗೆ ಕಂಡು ಬರಲಿಲ್ಲ. ಎಲ್ಲ ಕಾಲದಲ್ಲಿಯೂ ಬಲಿ ಅಗತ್ಯ, ಇದರ ಮೂಲವನ್ನು ಧರ್ಮದಲ್ಲಿ ಗುರುತಿಸಬಹುದೆಂದು ನಿನ್ನ ಸ್ನೇಹಿತ ಐವನೊವನೇ ನನಗೆ ಕಲಿಸಿಕೊಟ್ಟಿ ದ್ದಾನೆ. ನನಗೆ ನೆನಪಿರುವಂತೆ ಇದು ಹಿಬ್ರೂ ಜನರ ಪದ್ಧತಿಯಂತೆ. ವರ್ಷಕ್ಕೊಮ್ಮೆ ಅವರು ತಮ್ಮ ಪಾಪಗಳನ್ನೆಲ್ಲ ಒಂದು ಆಡಿನ ಮೇಲೆ ಹೊರಿಸಿ ಅದನ್ನು ಬಲಿಕೊಡುತ್ತಿದ್ದರಂತೆ. ಅಲ್ಲದೆ, ಇತಿಹಾಸದಲ್ಲಿ ಸ್ವಯಂ ಬಲಿಪಶುಗಳಾಗಲು ಮುಂದೆ ಬರುವವರೆಷ್ಟು ಮಂದಿ ಇಲ್ಲ? ನಿನಗೆ ಕೈಗೆ ಕಟ್ಟಲು ಗಡಿಯಾರ ಬಂದ ವಯಸ್ಸಿನಲ್ಲಿ ನಮ್ಮ ಗ್ರಾಮದ ಇಗರ್ಜಿಯ ಪಾದ್ರಿ ಏಸು ಕ್ರಿಸ್ತನು ನಮ್ಮ ಪಾಪಗಳನ್ನೆಲ್ಲ ಹೊತ್ತ ಕುರಿ ಮರಿ ಎಂದು ನನಗೆ ಉಪದೇಶಿಸುತ್ತಿದ್ದನು. ಮನುಷ್ಯಜಾತಿಗೋಸ್ಕರ ನಾನು ಬಲಿದಾನ ಮಾಡುತ್ತೇನೆ ಎನ್ನುವವನಿಂದ ಮನುಷ್ಯಜಾತಿಯ

ಹಿತವು ಹೇಗೆ ಸಾಧಿಸುವುದೆಂಬುದು ನನಗೆ ಏನು ಮಾಡಿದರೂ ಅರ್ಥ ವಾಗಲೊಲ್ಲದು. ಆದರೆ ಎರಡು ಸಾವಿರ ವರ್ಷ ಜನ ಇದನ್ನೇ ನಂಬಿ ಕೊಂಡು ಬಂದಿದ್ದಾರೆ.'

ರುಬಷೊವ ಗ್ಲೆಟ್‌ಕಿನನ ಉದ್ದೇಶವಾದರೂ ಏನು? ಈ ಸಂವಾದದ ಗುರಿಯಾವುದು? ನಿಯೆಂಡರ್ಥಾಲ ಮನುಷ್ಯನು ಯಾವ ಚಕ್ರವ್ಯೂಹದಲ್ಲಿ ಚಲಿಸುತ್ತಿದ್ದಾನೆ ಎಂದು ಯೋಚಿಸಿದನು.

'ಅದೇನೇ ಇರಲಿ, ಪ್ರಪಂಚವನ್ನೆಲ್ಲ ವಿಧ್ವಂಸಕರಿಂದಲೂ ದೆವ್ವಗಳಿಂದಲೂ ತುಂಬಿಸಿಡುವುದಕ್ಕಿಂತ ಜನರಿಗೆ ಸತ್ಯವನ್ನು ಹೇಳುವುದು ಶ್ರೇಯಸ್ಕರವೆಂದು ನಮ್ಮ ಎಣಿಕೆ' ಎಂದನು ರುಬಷೊವ.

ಅದಕ್ಕೆ ಗ್ಲೆಟ್‌ಕಿನ್, 'ಕ್ರಾಂತಿಯ ಬಳಿಕ ಕೂಡ ನೀವಿನ್ನೂ ಹಿಂದುಳಿದಿದ್ದೀರಾ ನಿಧಾನವಾಗಿ ನಡೆಯುತ್ತಿದ್ದೀರಾ ಎಂದರೆ ನನ್ನ ಗ್ರಾಮದ ಜನರು ಕಣ್ಣು ಕಣ್ಣು ಬಿಟ್ಟಾರು. ಆದರೆ ನೀವು ಬಹಳ ಹುಷಾರಿ ಜನ, ಅಮೇರಿಕದವರಿಗಿಂತಲೂ ಕೆಲಸದಲ್ಲಿ ಜಾಣರಿದ್ದೀರಾ, ವಿಧ್ವಂಸಕರು, ದೆವ್ವಗಳು ಮಾತ್ರ ಕೆಟ್ಟ ಜನ ಎಂದು ಅವರಿಗೆ ಹೇಳಿದರೆ ಆಗ ಸ್ವಲ್ಪವಾದರೂ ಅರ್ಥವಾಗುತ್ತದೆ. ಮನುಷ್ಯ ಜಾತಿಗೆ ಪ್ರಯೋಜನಕರವಾದ್ದೇ ಸತ್ಯ, ಹಾನಿಕರವಾದ್ದೇ ಸುಳ್ಳು. ಪಾರ್ಟಿ ಏರ್ಪಡಿಸುವ ರಾತ್ರಿ ಶಾಲೆಗಳಲ್ಲಿ ಕಲಿಸುವುದಕ್ಕಾಗಿ ಬರೆಯಲ್ಪಟ್ಟ ಇತಿಹಾಸದಲ್ಲಿ ಕ್ರೈಸ್ತ ಧರ್ಮವು ಕೂಡ ಅದು ಆರಂಭವಾದ ಕೆಲವು ಶತಮಾನಗಳ ಕಾಲ ಪ್ರಗತಿಶೀಲವಾಗಿತ್ತೆಂದು ಹೇಳಲಾಗುತ್ತಿದೆ. ಏಸುವು ಸತ್ಯವನ್ನೇ ನುಡಿದನೇ ಇಲ್ಲವೇ, ಆತ ಕುಮಾರಿಯ ಹೊಟ್ಟೆಯಿಂದ ಜನಿಸಿದನೆ, ದೇವಾಂಶ ಸಂಭೂತನಹುದೇ ಅಲ್ಲವೆ ಎಂಬುದರಲ್ಲೇನು ಮಹತ್ತ್ವವಿದೆ? ಇದಕ್ಕೆಲ್ಲ ಸಂಕೇತಾರ್ಥವಿದೆಯಂತೆ; ಆದರೆ ರೈತರು ಇದನ್ನು ಅಕ್ಷರಶಃ ನಂಬಿದ್ದಾರೆ. ನಾವೂ ಹಾಗೆಯೆ ಸಂಕೇತಗಳನ್ನು ಸೃಷ್ಟಿ ಮಾಡುತ್ತೇವೆ; ರೈತರು ಅದನ್ನು ಅಕ್ಷರಶಃ ನಂಬುತ್ತಾರೆ.'

'ಒಮ್ಮೊಮ್ಮೆ ನೀನೂ ಐವನೊವನ ಹಾಗೆಯೇ ವಾದಿಸುತ್ತಿ ಎಂದು ನನಗೆ ಅನಿಸುತ್ತದೆ' ಎಂದನು ರುಬಷೊವ.

'ಐವನೊವ ಹಳೆಯ ಬುದ್ಧಿಜೀವಿ ವರ್ಗಕ್ಕೆ ಸೇರಿದವನು. ಅವನ ಇತಿಹಾಸಜ್ಞಾನದಿಂದಾಗಿ ಅವನ ಹತ್ತಿರ ಮಾತನಾಡಿದರೆ ಚಿಕ್ಕಂದಿನಲ್ಲಿ ತಪ್ಪಿಹೋದ ಶಿಕ್ಷಣವನ್ನು ಮರಳಿ ಪಡೆದ ಹಾಗಾಗುತ್ತಿತ್ತು: ವ್ಯತ್ಯಾಸ ಇಷ್ಟೆ: ನಾನು ಆ ಜ್ಞಾನವನ್ನು ಪಾರ್ಟಿಯ ಹಿತಕ್ಕಾಗಿ ಉಪಯೋಗಿಸು ವವನು; ಐವನೊವ ಸದಾಶಂಕಿ.'

'ಏನಂದಿ, ಐವನೊವ........'

'ಹೌದು, ಐವನೊವ ನಿನ್ನೆ ಆಧಿಪತ್ಯದ ಆಜ್ಞೆಯ ಮೇರೆಗೆ ಗುಂಡಿಗೆ ಆಹುತಿಯಾದನು.'

ಈ ಸಂವಾದದ ತರುವಾಯ ಸುಮಾರು ಎರಡು ತಾಸಿನ ವರೆಗೆ ಗ್ಲೆಟ್‌ಕಿನ್ ರುಬಶೊವಗೆ ನಿದ್ದೆ ಹೋಗಲು ಅವಕಾಶಕೊಟ್ಟನು. ಆದರೆ ಕೋಣೆಗೆ ಹಿಂತೆರಳುವ ದಾರಿಯಲ್ಲಿ ಐವನೊವನ ಮರಣದ ಸುದ್ದಿಯಿಂದ ತನ್ನ ಮೇಲೆ ಅಷ್ಟೊಂದು ಆಳವಾದ ಪರಿಣಾಮವಾಗದಿರಲು ಏನು ಕಾರಣವೆಂದು ಹೃದಯವನ್ನು ತಡಕಿನೋಡಿದನು. 'ಗ್ಲೆಟ್‌ಕಿನನ ಮೇಲೆ ತಾನು ಸಂಪಾದಿಸಿದ ಕ್ಷಣಿಕ ವಿಜಯೋಲ್ಲಾಸವು ಮರೆಯಾಗುವಷ್ಟೇ ಅದರ ಪ್ರಭಾವವೆ? ಆ ಮೇಲೆ ಉಳಿದದ್ದು ನಿದ್ದೆ, ಆಯಾಸ ಮಾತ್ರ. ಆದರೆ ಗ್ಲೆಟ್‌ಕಿನನ ವಿಷಯದ ವಿಜಯೋಲ್ಲಾಸಕ್ಕೆ ರುಬಶೊವಗೆ ನಾಚುಗೆಯಾಗುತ್ತಿತ್ತು. ಅದು ಮರೆಯಾಗಲು ಐವನೊವ ಸಾಯಬೇಕಾಗಿರಲಿಲ್ಲ. ಆದರೆ ಗ್ಲೆಟ್‌ಕಿನನ ವ್ಯಕ್ತಿತ್ವವು ರುಬ ಶೊವನ ಮೇಲೆ ಬೀರಿದ ಪ್ರಭಾವದಿಂದಾಗಿ ಗೆಲವೂ ಸೋಲಾಗಿ ಬಿಡುತಿತ್ತು. ಎಷ್ಟೋ ಜನ ರುಬಶೊವರು ಮತ್ತು ಐವನೊ ವರ ನೆತ್ತರು ಬೆವರಿಂದ ಸೃಷ್ಟಿಗೊಂಡ ರಾಷ್ಟ್ರದ ಕ್ರೌರ್ಯಕ್ಕೆ ಮೂರ್ತ ಸ್ವರೂಪನಾಗಿ ದೈತ್ಯನಂತೆ, ಮುಖದಲ್ಲಿ ನಿರ್ವಿಕಾರ ಭಾವದಿಂದ ಗ್ಲೆಟ್ ಕಿನ್ ವಿಜೃಂಭಿಸುತ್ತಿದ್ದನು. ಅವರ ನೆತ್ತರುಮಾಂಸವೇ ಅವರಿಂದ ಸಿಡಿದು ಹೋಗಿ, ಸ್ವತಂತ್ರವಾಗಿ ಗ್ಲೆಟ್‌ಕಿನನ ಅವತಾರತಾಳಿದೆ. ಐವ ನೊವನ ಶಿಷ್ಯನೆಂದು ಗ್ಲೆಟ್‌ಕಿನ್ ಹೇಳಿಕೊಳ್ಳುವವನಲ್ಲವೆ? ಗ್ಲೆಟ್‌ಕಿನ್ ಸಂಘ ನವ-ನಿಯೆಂಡರ್ಥಾಲರು ಹಳೆಯ ನಾಯಕರ ಪೀಳಿಗೆಯವರೇ ಆಗಿದ್ದು ಅವರ ಕೆಲಸವನ್ನು ಪೂರ್ಣಗೊಳಿಸುವ ಹೊಣೆ ಹೊತ್ತಿರುವ

ದನ್ನು ಅಲ್ಲಗಳೆಯುವಂತಿದೆಯೆ? ನಾಯಕರ ತತ್ವಗಳು ಅವರ ಬಾಯಲ್ಲಿ ಅಮಾನುಷವಾಗಿ ಕಂಡರೆ ಅದರ ತಪ್ಪು ಪ್ರಾಯಶಃ ಹವಾಗುಣದ ಮೇಲಿರಬೇಕು. ಐವನೊವ ಮಾತನಾಡುವಾಗಲೂ ಅವನ ಸ್ವರದಲ್ಲಿ ಕಳೆದು ಹೋದ ಪ್ರಪಂಚದ ಗತವೈಭವದ ಕುರುಹು ಕೇಳಿಸುತಿತ್ತು. ಐವನೊವ ಕೊನೆತನಕವೂ ತನ್ನ ಗತಕಾಲವನ್ನು ಮರೆಯಲಾರದವನಾಗಿದ್ದನು, ಅವನ ಪ್ರತಿ ಮಾತಿನಲ್ಲಿ ಹುದುಗಿದ್ದ ನೋವು ಅವನ ನಿಶ್ಚಯಜ್ಞಾನವನ್ನು ಕದಡಿ ಅವನನ್ನು ಸದಾಶಂಕಿ ಎಂದನಿಸಿತ್ತು. ಗ್ಲೆಟ್‌ಕಿನ್ ಅಂಥವರು ಅವರ ಗತಕಾಲವನ್ನು ನಿರಾಕರಿಸಬೇಕಾದ ಪ್ರಮೇಯವಿರಲಿಲ್ಲ; ಏತಕ್ಕೆಂದರೆ ಅವರಿಗೆ ಗತಕಾಲವೇ ಇಲ್ಲ. ಅವರು ನಾಭಿಸೂತ್ರವಿಲ್ಲದೆ ಹುಟ್ಟಿದವರಾದ್ದರಿಂದ ಅವರ ಹತ್ತಿರ ವಿನೋದವೂ ಇಲ್ಲ, ನಿರಾಶೆಯೂ ಇಲ್ಲ.

೫

ನಿ. ಸ. ರುಬಷೊವನ ದಿನಚರಿಯಿಂದ ಉದ್ಧೃತ.

'........ರಂಗಭೂಮಿಯನ್ನು ಬಿಟ್ಟು ತೆರಳಲಿರುವ ನಮಗೆ ಗ್ಲೆಟ್‌ಕಿನ್ ಅಂಥವರನ್ನು ತಿರಸ್ಕಾರ ದೃಷ್ಟಿಯಿಂದ ನೋಡಲು ಯಾವ ಅಧಿಕಾರವಿದೆ? ನಿಯೆಂಡರ್ಥಾಲ ಮನುಷ್ಯನು ಜಗತ್ತಿನಲ್ಲಿ ಮೊದಲು ಬಂದಾಗ ಕಪಿಗಳು ಅವರನ್ನು ಕಂಡು ಗಹಗಹಿಸಿ ನಕ್ಕಿರಬಹುದು. ಅತ್ಯುಚ್ಚ ನಾಗರಿಕತೆಯ ಮಟ್ಟವನ್ನೇರಿದ ಕಪಿಗಳು ಗೆಲ್ಲಿಂದ ಗೆಲ್ಲಿಗೆ ಕೌಶಲದಿಂದ ನೆಗೆಯುತ್ತಿರುವಾಗ ಕುರೂಪಿ ನಿಯೆಂಡರ್ಥಾಲ ಮನುಷ್ಯನು ನೆಲಕ್ಕೇ ಅಂಟಿಕೊಂಡು ಅಸಹಾಯನಾಗಿದ್ದನು. ಸಂತೃಪ್ತಿಯಿಂದಲೂ ಶಾಂತಿಯಿಂದಲೂ, ಕಪಿಗಳು ಆಟವಾಡುತ್ತಲೂ ತಾತ್ವಿಕ ಏಕಾಗ್ರತೆಯ ನಡುವೆ ಹೇನು ತೆಗೆಯುತ್ತಲೂ ಇರುವಾಗ ನಿಯೆಂಡರ್ಥಾಲನು ಗದೆಯನ್ನು ಬೀಸಿಕೊಂಡು ಪ್ರಪಂಚವನ್ನು ತತ್ತಳದುಳಿಯುತ್ತಿದ್ದನು. ಕಪಿಗಳು ಮರದ ಮೇಲಿಂದ ಅವನ ಪಾಡಿಗೆ ವಿನೋದಪಟ್ಟು ಅವನಿಗೆ ಹಣ್ಣುಗಳನ್ನು ಎಸೆಯುತ್ತಿದ್ದುವು. ಕೆಲವು ಸಲ ಹಣ್ಣುಗಳನ್ನೂ ನಳನಳಿಸುವ

ಎಳೆಪಸಿಗಳನ್ನೂ ತಿನ್ನುತ್ತಿದ್ದ ಕಪಿಗಳಿಗೆ ಆತನನ್ನು ನೋಡಿ ಅತ್ಯಂತ ಹೇಸಿಕೆ ಎನಿಸುತಿತ್ತು; ಆತ ಹಸಿ ಮಾಂಸವನ್ನು ತಿನ್ನುತ್ತಿದ್ದನು, ಮೃಗಗಳನ್ನು ಕೊಲ್ಲುತ್ತಿದ್ದನು, ತನ್ನ ಸಂಗಾತಿಗಳ ನೆತ್ತರನ್ನು ಕುಡಿಯುತ್ತಿದ್ದನು. ಎತ್ತರವಾಗಿ ಬೆಳೆದು ಎಷ್ಟೋ ಕಾಲದಿಂದ ನಿಂತಿದ್ದ ಮರಗಳನ್ನು ಕಡಿದು ಹಾಕುತ್ತಿದ್ದನು, ಮಹಾ ಶಿಲೆಗಳನ್ನು ಅವು ಹಲಗಾಲದಿಂದ ಒರಗಿದ್ದ ನೆಲದಿಂದ ಕೀಳುತ್ತಿದ್ದನು, ಅರಣ್ಯದಪ್ರತಿಯೊಂದು ಶಾಸನವನ್ನೂ ಸಂಪ್ರದಾಯವನ್ನೂ ಮುರಿಯುತ್ತಿದ್ದನು. ಅವನನ್ನು ನೋಡಿದರೆ ಹೇಸಿಕೆ ಅನಿಸುತ್ತಿತ್ತು. ಅವನು ಕ್ರೂರ, ಮೃಗಗೌರವಹೀನ. ಅತಿ ಸುಸಂಸ್ಕೃತ ಕಪಿಗಳ ದೃಷ್ಟಿಯಲ್ಲಿ ಆತ ಇತಿಹಾಸದ ಪರಾವರ್ತನೆಗೆ ಉದಾಹರಣೆ. ಅಳಿದುಳಿದ ಚಿಂಪಾಂಜೀ ಕಪಿಗಳು ಈಗಲೂ ಮನುಷ್ಯರನ್ನು ನೋಡಿದರೆ ಗಂಭೀರವಾಗಿ ತಮ್ಮ ಶ್ರೇಷ್ಠತ್ವವನ್ನು ಸಾರುವುವು........

## ೬

ಐದಾರು ದಿನಗಳ ಮೇಲೆ ಒಂದು ಘಟನೆ ನಡೆಯಿತು. ವಿಚಾರಣೆಯ ಸಮಯ ರುಬಷೊವಗೆ ಕಣ್ಣುಕತ್ತಲೆ ಬಂದಿತು. ಆರೋಪದ ಕೊನೆಯನ್ನವರು ಆಗ ತಾನೇ ಮುಟ್ಟಿದ್ದರು: ಇನ್ನೇನು, ರುಬಷೊವ ತನ್ನ ಕೃತ್ಯಗಳ ಉದ್ದೇಶವನ್ನಷ್ಟು ಹೇಳಿದರಾಯಿತು ಎನ್ನುವಾಗ ಅವನಿಗೆ ಎಚ್ಚರ ತಪ್ಪಿತು. 'ಕ್ರಾಂತಿ ವಿರೋಧಕ ಮನೋವೃತ್ತಿ', 'ಶತ್ರು ರಾಷ್ಟ್ರದೊಡನೆ ಗುಪ್ತ-ಸಂಧಾನ' ಇಷ್ಟೇ ಆರೋಪದಲ್ಲಿ ಹೇಳಲಾಗಿತ್ತು. ರುಬಷೊವ ಇವೆರಡು ಆರೋಪಗಳನ್ನು ಕಾರ್ಯಕಾರಣ ಭಾವದಿಂದ ಜೋಡಿಸಿದ ಪರಿಯನ್ನು ಬಲವಾಗಿ ವಿರೋಧಿಸಿದನು. ಮುಂಜಾವಿನಿಂದ ನಡು ಹಗಲಿನವರೆಗೆ ರುಬಷೊವ ವಾದಿಸುತ್ತಲೇ ಇದ್ದನು. ಅಷ್ಟರಲ್ಲಿ ಅಕಸ್ಮಾತ್ ಕುರ್ಚಿಯಿಂದ ಬದಿಗೆ ವಾಲಿ ನೆಲಕ್ಕೆ ಬಿದ್ದುಬಿಟ್ಟನು.

ಕೆಲವು ಮಿನಿಟುಗಳ ತರುವಾಯ ಅವನಿಗೆ ಎಚ್ಚರವಾದಾಗ ಪೆಪ್ಪೆರ್‌ಮಿಂಟ್-ಬ್ರೆಡ್ ತಿನ್ನುತ್ತಿದ್ದ ಡಾಕ್ಟರ ಮಹಾಶಯನು ರುಬಷೊವನ ಮೋರೆಗೆ ನೀರೆರಚಿ, ನಾಡಿಯನ್ನು ತಿಕ್ಕುತ್ತಿದ್ದನು.

ರುಬಷೊವನನ್ನು ಹೊರಗಿನ ಗಾಳಿಗೆ ಒಯ್ಯಬೇಕೆಂದು ಆತ ಸೂಚಿಸಿದನು. ಈ ದೃಶ್ಯವನ್ನು ನಿರೀಹವಾಗಿ ನೋಡುತ್ತಿದ್ದ ಗ್ಲೆಟ್‌ಕಿನ್ ಫೋನನ್ನು ಮೇಲಕ್ಕೆತ್ತಿ ನೆಲದ ಮೇಲಿನ ಕಂಬಳಿಯನ್ನು ಸ್ವಚ್ಛಗೊಳಿಸಬೇಕೆಂದು ಆಳನ್ನು ಬರಹೇಳಿದನು. ರುಬಷೊವನನ್ನು ಕೋಣೆಗೆ ಕರೆದೊಯ್ಯಲಾಯಿತು, ತದನಂತರ ಕೆಲ ಹೊತ್ತಿನಲ್ಲಿ ಅಂಗಳಕ್ಕೆ ವ್ಯಾಯಾಮ ಮಾಡಲು ಕರೆದುಕೊಂಡು ಹೋದರು.

ಅಂಗಳದ ನಿರ್ಮಲವಾದ ಗಾಳಿಯಿಂದ ರುಬಷೊವಗೆ ಅಮಲು ಹಿಡಿದಂತಾಯಿತು. ನಾಲಗೆಯು ರುಚಿಕರವಾದ ಪಾನೀಯದ ಸವಿ ನೋಡುವಂತೆ ಆತನ ಶ್ವಾಸಕೋಶಗಳು ಆಮ್ಲಜನಕವನ್ನು ಸೇವಿಸುತ್ತಿದ್ದುವು. ಸೂರ್ಯನ ಪ್ರಕಾಶ ಮಂದವಾಗಿತ್ತು. ಹಗಲಿನ ಹನ್ನೊಂದು ತಾಸು–ಈ ಪ್ರಶ್ನೋತ್ತರಗಳ ಪರ್ವಕ್ಕೆ ಮೊದಲು, ಯುಗ ಯುಗಗಳ ಪೂರ್ವದಲ್ಲಿ, ಅಂಗಳದ ಪ್ರದಕ್ಷಿಣೆ ನಡೆಯುತ್ತಿದ್ದುದು ಅದೇ ಹೊತ್ತಿಗೆ. ಇದೆಂತಹ ದೊಡ್ಡ ಭಾಗ್ಯವೆಂದು ಅವನಿಗೆ ಆಗ ಅನಿಸಿತು. ಹಿಮದ ಮೇಲೆ ಸೂರ್ಯನ ಬಿಸಿಲಿಗೆ ಮುಖವೊಡ್ಡಿ ನಡೆಯುವುದು, ಬದುಕುವುದು, ಉಸಿರಾಡುವುದು–ಇದಕ್ಕಿಂತ ದೊಡ್ಡ ಭಾಗ್ಯವೇನಿದೆ? ಹೌದು, ಸುಮ್ಮನೆ ಗ್ಲೆಟ್‌ಕಿನ್ ಹತ್ತಿರ ವರಸೆ ಹಿಡಿಯುವುದಕ್ಕಿಂತ ಎಲ್ಲರಂತೆ ತಾನೂ ಬದುಕುವ ದಾರಿಯನ್ನು ಕಂಡುಕೊಳ್ಳಬಾರದೇಕೆ?

ವ್ಯಾಯಾಮದ ಸಮಯವಾದ್ದರಿಂದ ರೈತನೂ ಅಲ್ಲೇ ತಿರುಗುತ್ತಿದ್ದನು. 'ಒಡೆಯನನ್ನು ನೋಡದೆ ಬಹಳ ದಿನವಾಯಿತಲ್ಲಾ? ನೀವು ಕೃಶರಾಗಿರುವುದನ್ನು ನೋಡಿದರೆ ಇನ್ನು ಹೆಚ್ಚು ದಿನ ಬದುಕಲಾರಿರಿ ಎನಿಸುತ್ತದೆ. ಯುದ್ಧ ಸುರುವಾಗುತ್ತದಂತೆ' ಎಂದನು.

ರುಬಷೊವ ಮಾತಾಡಲಿಲ್ಲ. ಕೆಳಗೆ ಬಿದ್ದ ಹಿಮವನ್ನು ಕೈಯಲ್ಲಿ ತೆಗೆದು ಒಂದು ಉಂಡೆಯಾಗಿ ಮಾಡಬೇಕೆಂದು ಅವನಿಗೆ ಮನಸ್ಸಾದರೂ ಅದನ್ನು ಅವನು ತಡೆದುಕೊಂಡನು. ಅವನಿಗಿನ್ನುತ್ತು ಹೆಜ್ಜೆ ಮುಂದೆ ಇನ್ನಿಬ್ಬರು ಕಾಲುಹಾಕುತ್ತಿದ್ದುದನ್ನು ಮಾತ್ರ ಅವನು ಗಮನಿಸಿದನು.

'ಇನ್ನೇನು ಬಿತ್ತುವ ಸಮಯ ಸಮೀಪವಾಯಿತು. ಹಿಮ ಕರಗಿದ ಮೇಲೆ ಕುರಿಮಂದೆ ಬೆಟ್ಟಗಳ ಕಡೆ ಹೋಗುತ್ತವೆ. ಬೆಟ್ಟಕ್ಕೆ ಮುಟ್ಟಲು

ಮೂರು ದಿನ ಹಿಡಿಯುತ್ತದೆ. ಹಿಂದಿನ ಕಾಲದಲ್ಲಿ ಎಲ್ಲರೂ ಕುರಿಗಳನ್ನು ಒಂದೇ ದಿನ ಅಟ್ಟುವುದು ವಾಡಿಕೆ. ಆ ದಿನ ಬಂದರೆ ಬೆಳಗುಮುಂಜಾನೆ ಎಲ್ಲ ಕಡೆಯಿಂದಲೂ ಕುರಿಗಳ ಜಮಾವಣೆಯೇ ಜಮಾವಣೆ. ಅಷ್ಟು ಕುರಿ, ಅಷ್ಟು ನಾಯಿ. ಅವುಗಳ ಬೊಗಳುವಿಕೆ, ಅಷ್ಟೊಂದು ಧೂಳು, ಗದ್ದಲಗಳನ್ನು ನಮ್ಮ ಒಡೆಯರು ಎಲ್ಲೂ ನೋಡಿರಲಿಕ್ಕಿಲ್ಲ........ ಮಾತಾಯಿ ಎಷ್ಟು ಸಂತೋಷವಾಗಿರುತ್ತಿತ್ತು?' ಎಂದು ರೈತ ಉದ್ಗರಿಸಿದನು.

ರುಬಶೊವ ಮುಖವನ್ನು ಮೇಲಕ್ಕೆತ್ತಿ ಬಿಸಿಲಿನಲ್ಲಿ ನೆನೆಯಿಸಿದನು. ತೋಫಖಾನೆಯ ಮೇಲ್ಗಡೆ ಹಕ್ಕಿಗಳು ಕಚಕುಳಿ ಆಡುತ್ತಿರುವುದನ್ನು ನೋಡಿದನು.

ರೈತನು ಕ್ಷೀಣ ಸ್ವರದಲ್ಲಿ, 'ಹಿಮವು ಕರಗುವ ಸಮಯವೆಂದರೆ ನನಗೆ ಬಲು ಇಷ್ಟ. ನಮ್ಮಿಬ್ಬರಿಗೂ ಇನ್ನು ಹೆಚ್ಚು ದಿನ ಉಳಿದಿಲ್ಲ ಒಡೆಯಾ, ಪ್ರತಿಗಾಮಿಗಳೆಂದು ನಮ್ಮನ್ನು ಮೆಟ್ಟಿ ಪುಡಿಮಾಡಿದ್ದಾರೆ, ನಾವು ಸುಖಸಂತೋಷದಲ್ಲಿರುತ್ತಿದ್ದ ಹಳೆಯ ದಿನಗಳು ಮರಳಬಾರದೆಂದು ನಮ್ಮನ್ನು ಮುಗಿಸಿಬಿಡುತ್ತಾರೆ........' ಎಂದನು.

ರುಬಶೊವ 'ಆಗಿನ ಕಾಲದಲ್ಲಿ ನೀನು ನಿಜವಾಗಿ ಅಷ್ಟು ಸುಖಿಯಾಗಿದ್ದೆಯಾ?' ಎಂದು ಕೇಳಿದನು. ರೈತ ಕೆಳದನಿಯಲ್ಲೇನೋ ಗೊಣಗಿದನು. ಏನೆಂದು ರುಬಶೊವಗೆ ಅರ್ಥವಾಗಲಿಲ್ಲ. ಆತ, ಬೈಬಲಿನಲ್ಲಿ ಮರುಭೂಮಿಯಲ್ಲಿ ನೆರೆದ ಜನ 'ನಾವೊಬ್ಬ ನಾಯಕನನ್ನು ಆರಿಸುವಾ, ಐಗುಪ್ತಕ್ಕೆ ಮರಳುವಾ' ಎಂದುದು ನಿನಗೆ ಜ್ಞಾಪಕವಿದೆಯೆ?........ ಎಂದು ಕೇಳಿದನು.

ರೈತನಿಗೆ ಜ್ಞಾಪಕವಿತ್ತು. ಆದರೆ ಈ ಮಾತಿನ ಅರ್ಥ ಅವನಿಗಾಗಲಿಲ್ಲ. ಅಷ್ಟರಲ್ಲಿ ಅವರನ್ನು ಮರಳಿ ಕೋಣೆಯ ಕಡೆಗೆ ಒಯ್ದರು. ಕಟ್ಟಡವನ್ನು ಪ್ರವೇಶಿಸುವಲ್ಲಿ ರುಬಶೊವಗೆ ತಲೆಯು ಭಾರವಾಗ ಹತ್ತಿತು. ಅವನು ಅಲ್ಲೇ ಬಿದ್ದಿದ್ದ ಹಿಮವನ್ನಷ್ಟು ಕೈಯಿಂದ ತೆಗೆದು ಹಣೆಗೆ ತಿಕ್ಕಿಕೊಂಡನು.

ರುಬಷೊವನನ್ನು ಅವನ ಕೋಣೆಗೆ ಕರೆದುಕೊಂಡು ಹೋಗದೆ ಗ್ಲೆಟ್‌ಕಿನ್ ಹತ್ತಿರ ಒಯ್ದರು. ಗ್ಲೆಟ್‌ಕಿನನು ಯಥಾಪೂರ್ವ ಭಂಗಿಯಲ್ಲಿ ಕೂತಿದ್ದನು. ರುಬಷೊವ ಕೋಣೆಯಿಂದ ಹೊರಟುಲಾಗಾಯಿತು ಆತ ಸ್ಥಳಬಿಟ್ಟು ಕದಲಲಿಲ್ಲವೋ ಏನೋ. ದೀಪ ಉರಿಯುತ್ತಿತ್ತು. ಗ್ಲೆಟ್‌ಕಿನನ ಕೋಣೆಯಲ್ಲಿ ಸಮಯವು ಕೊಳದಲ್ಲಿ ನಿಂತ ನೀರಿನಂತೆ ತಟಸ್ಥವಾಗಿ ನಿಂತಿತ್ತು: ಕುರ್ಚಿಯಲ್ಲಿ ಕೂತಾಗ ರುಬಷೊವನ ದೃಷ್ಟಿ ಕಂಬಳಿಯ ಮೇಲಿನ ಒದ್ದೆ ಜಾಗದ ಮೇಲೆ ಬಿದ್ದಿತು. ಹಾಗಾದರೆ ಗ್ಲೆಟ್‌ಕಿನನಲ್ಲಿಂದ ತೆರಳಿ ಒಂದು ತಾಸಷ್ಟೇ ಆಗಿರಬಹುದೆಂದು ರುಬಷೊವ ಎಣಿಸಿಕೊಂಡನು.

'ನಿನ್ನ ಆರೋಗ್ಯ ಈಗ ಸುಧಾರಿಸಿರಬೇಕೆಂದು ನಾನು ಭಾವಿಸುತ್ತೇನೆ. ಕ್ರಾಂತಿವಿರೋಧಕ ಮನೋವೃತ್ತಿಗೆ ಕಾರಣಗಳನ್ನು ಹೇಳುವಲ್ಲಿಯವರೆಗೆ ನಾವು ಬಂದಿದ್ದೆವು' ಎಂದು ಗ್ಲೆಟ್‌ಕಿನ್ ಬಿಟ್ಟಲ್ಲಿಂದಲೇ ಆರಂಭಿಸಿದನು. ರುಬಷೊವನ ಕೈಯಲ್ಲಿದ್ದ ಹಿಮದ ಮುದ್ದೆಯನ್ನು ನೋಡಿ ಅವನಿಗೆ ತುಸು ಅಚ್ಚರಿ ಎನಿಸಿತು. ದೀಪದ ಬಿಸಿಗೆ ಅದು ಕರಗಿ ನೀರಾಗುವುದನ್ನು ಅವರಿಬ್ಬರೂ ನೋಡಿದರು.

'ನಿನ್ನ ಉದ್ದೇಶವೇನಿತ್ತು ಎಂಬುದನ್ನಷ್ಟು ಹೇಳಿಬಿಟ್ಟು ರುಜು ಹಾಕಿದರೆ ಆ ಮೇಲೆ ನಮ್ಮ ಕೆಲಸವೆಲ್ಲ ಮುಗಿದ ಹಾಗೆ'

ವಿದ್ಯುದ್ದೀಪದ ಪ್ರಭೆ ಅಧಿಕವಾಯಿತು. ರುಬಷೊವನ ಕಣ್ಣು ತತ್ತರಿಸ ತೊಡಗಿತು.

'ಆ ಮೇಲೆ ನೀನು ವಿಶ್ರಾಂತಿ ಪಡೆಯಬಹುದು.' ರುಬಷೊವ ಹಣೆಯ ಮೇಲೆ ಕೈಯಾಡಿಸಿದರೆ ಹಿಮದ ತಂಪು ಮಾಯವಾಗಿತ್ತು. ಗ್ಲೆಟ್‌ಕಿನನ ವಾಕ್ಯದ 'ವಿಶ್ರಾಂತಿ' ಎಂಬ ಶಬ್ದವು ಮೌನದ ನಡುವೆ ತೂಗಿ ನಿಂತಂತೆ ಅನಿಸಿತು. ನಾಯಕನನ್ನಾರಿಸಿ ಜಗುಪ್ಸೆಕ್ಕೆ ಮರಳುವಾ ........ಕನ್ನಡಕದ ಮೂಲಕ ಗ್ಲೆಟ್‌ಕಿನನನ್ನು ದಿಟ್ಟಿಸಿ ರುಬಷೊವ 'ನನ್ನ ಉದ್ದೇಶವೇನೆಂದು ನನಗೆ ಗೊತ್ತಿರುವಷ್ಟೇ ನಿನಗೂ ಗೊತ್ತಿದೆ. ನಾನು 'ಕ್ರಾಂತಿ ವಿರೋಧಕ ಮನೋವೃತ್ತಿ'ಯಿಂದ ಕೆಲಸ ಮಾಡಿದ್ದೂ ಇಲ್ಲ, ಶತ್ರು ರಾಷ್ಟ್ರದ ಚಾಕರಿ ಮಾಡಿದ್ದೂ ಇಲ್ಲ. ನನ್ನ ಅಭಿಪ್ರಾಯ ಮತ್ತು

ಆತ್ಮಸಾಕ್ಷಿಗೆ ಅನುಸಾರವಾಗಿ ನಾನು ಯೋಚಿಸಿದ್ದೇನೆ, ಮಾಡಿದ ಕೆಲಸ ಮಾಡಿದ್ದೇನೆ' ಎಂದನು.

ಗ್ಲೆಟ್‌ಕಿನ್ ಡ್ರಾವರಿನಿಂದ ಒಂದು ಫೈಲನ್ನು ತೆಗೆದು ಅದರಿಂದ ಓದುತ್ತ 'ವ್ಯಕ್ತಿನಿಷ್ಠ ಪ್ರಾಮಾಣಿಕತೆಗೆ ನಾವು ಬೆಲೆ ಕೊಡುವುದಿಲ್ಲ. ಯಾರು ತಪ್ಪು ಮಾಡುತ್ತಾನೋ ಅವನು ದಂಡ ತೆರಬೇಕು, ತಪ್ಪು ಮಾಡದವನು ಹೇಗೂ ಬಿಡುಗಡೆಯಾಗುತ್ತಾನೆ. ಇದು ನಮ್ಮ ಶಾಸನ ........ ಹೀಗೆ ನಿನ್ನ ದಿನಚರಿಯಲ್ಲಿ ನೀನೇ ಬರೆದಿದ್ದೀ' ಎಂದು ನುಡಿದನು.

ರುಬಷೊವನ ಕಣ್ಣಿವೆ ದೀಪದ ನೋವಿಗೆ ಮಿಡಿಯುತ್ತಿತ್ತು. ತಾನು ಬರೆದ ಪದಗಳು ಗ್ಲೆಟ್‌ಕಿನನ ಬಾಯಿಯಲ್ಲಿ ಏನೋ ಒಂದು ನಗ್ನ-ಭಗ್ನ ರೂಪವನ್ನು ತಳೆದಂತೆ ಅವನಿಗನಿಸಿತು—ಅನಾಮಧೇಯ ಪಾದರಿಯ ಹತ್ತಿರ ಹೇಳಬೇಕಾದ ಪಾಪಸ್ವೀಕಾರವನ್ನು ಗ್ರಾಮಫೋನ್ ರಿಕಾರ್ಡಿನಲ್ಲಿ ಕೊಟ್ಟರೆ ಹೇಗಾದೀತೋ ಹಾಗಾಯಿತು.

ಗ್ಲೆಟ್‌ಕಿನ್ ಫೈಲಿನಿಂದ ಇನ್ನೊಂದು ಹಾಳೆಯನ್ನು ಮಗುಚಿ: 'ಅಹಂಕಾರವಿಲ್ಲದೆ ಸೇವೆ ಮಾಡುವುದು, ಅಂತಿಮ ಪರಿಣಾಮ ಸಿಗುವ ವರೆಗೂ ದುಡಿಯುವುದು ಮರ್ಯಾದೆಯ ಲಕ್ಷಣ ಎಂದು ನೀನು ಬರೆದಿದ್ದೀ' ಎಂದು ನುಡಿದು ರುಬಷೊವನ ಮೇಲೆ ದೃಷ್ಟಿಯನ್ನು ನೆಟ್ಟನು.

ರುಬಷೊವ ಅದನ್ನು ತಡೆದುಕೊಳ್ಳಬೇಕೆಂದು ಪ್ರಯತ್ನಿಸಿದನು.

'ಇಡಿ ಪ್ರಪಂಚದಿದಿರು ಪಾರ್ಟಿಯ ಸದಸ್ಯರು ಮಣ್ಣಿನ ಸ್ನಾನ ಮಾಡುತ್ತಾ ಇದ್ದರೆ ಅದರಿಂದ ಪಾರ್ಟಿಗೆ ಹಿತವೇನೆಂದು ನನಗೆ ತಿಳಿಯುವುದಿಲ್ಲ. ನೀನು ಹೇಳಿದ್ದಕ್ಕೆಲ್ಲ ನಾನು ರುಜುಮಾಡಿ ಆಗಿದೆ. ಹಾನಿಕರವಾದ ಧೋರಣೆಯನ್ನು ನಾನು ಅನುಸರಿಸಿದ್ದೇನೆಂದು ನೀವು ಹೊರಿಸಿದ ಆರೋಪವನ್ನು ನಾನು ಒಪ್ಪಿಕೊಂಡಾಗಿದೆ. ಇಷ್ಟು ಸಾಲದೆ ಹೆಚ್ಚು ಹೇಳಿದರೆ, ನಿ. ಸ. ರುಬಷೊವ ಎಂಬ ಹೆಸರೂ ಪಾರ್ಟಿಯ ಇತಿಹಾಸದ ಒಂದು ಭಾಗವೆಂಬುದನ್ನು ಮರೆಯಬೇಡಿ. ಅದಕ್ಕೆ ಕೊಳೆ ಹಚ್ಚಿದರೆ ಕ್ರಾಂತಿಯ ಇತಿಹಾಸಕ್ಕೂ, ಆ ಕೊಳೆ ಅಂಟಿಕೊಳ್ಳುವುದೆಂಬುದನ್ನು ಮರೆಯಬೇಡಿ.'

'ಹಾಗೋ ಅದಕ್ಕೂ ನಿನ್ನ ಮಾತಿನಲ್ಲೇ ಉತ್ತರವನ್ನು ಕೊಡ ಬಹುದು' ಎಂದು ಗ್ಲೆಟ್‌ಕಿನ್ ಫೈಲಿನ ಮತ್ತೊಂದು ಹಾಳೆಯನ್ನು ತಿರುಗಿಸಿದನು:

"ಎಲ್ಲವನ್ನೂ ಸರಳವಾಡಿ ಮತ್ತೆ ಮತ್ತೆ ಸಾರಿ ಜನತೆಯ ತಲೆಯೊಳಗೆ ತುಂಬಿಸಬೇಕು. ಸರಿಯಾದ್ದು ಭಂಗಾರದಂತೆ ಥಳ ಥಳಿಸಬೇಕು; ಸರಿಯಲ್ಲದ್ದು ಇದ್ದಲಿನಂತೆ ಕಪ್ಪಗಾಗಿರಬೇಕು; ಜನತೆಯ ಸೇವನೆಗಾಗಿ ರಾಜಕೀಯ ಪ್ರಕ್ರಿಯೆಗಳಿಗೆ ಸಂತೆಯ ಬೊಂಬೆಗಳಂತೆ ಬಣ್ಣ ಬಳಿಯಬೇಕು—ಎಂದವನು ನೀನೇ'

ರುಬಷೊವ ಸ್ವಲ್ಪ ಮೌನವಾಗಿದ್ದು ಆ ಮೇಲೆ "ಓಹೋ, ಇದೊ ನಿನ್ನ ಉದ್ದೇಶ? ನಿನ್ನ ಗೊಂಬೆಯಾಟದಲ್ಲಿ ನಾನು ರಾಕ್ಷಸ–ನಾಲಗೆ ಹೊರ ಚಾಚಿ, ದಂತಗಳನ್ನು ಮಸೆಯುತ್ತ ಬೊಬ್ಬಿರಿಯುವ ರಾಕ್ಷಸ ನಲ್ಲವೆ? ಸಾಲದ್ದಕ್ಕೆ ನಾನು ಸ್ವಯಂಸ್ಫೂರ್ತಿಯಿಂದಲೇ ರಕ್ಕಸನ ಬಣ್ಣ ಬಳಿದುಕೊಳ್ಳಬೇಕಲ್ಲವೆ? ಡಾಂಟನ್ ಮತ್ತು ಅವನ ಮಿತ್ರರಿಗೆ ಈ ಒಂದು ಸೌಭಾಗ್ಯವಿರಲಿಲ್ಲ.'

'ಬಹಿರಂಗ ವಿಚಾರಣೆಯ ಸಮಯ ನೀನು ಹೇಳುವ ಮಾತು ಪಾರ್ಟಿಗೆ ನೀನು ಮಾಡತಕ್ಕ ಕೊನೆಯ ಸೇವೆ.'

ರುಬಷೊವ ಕಣ್ಣುಮುಚ್ಚಿ ಮೌನವಾಗಿ ಗ್ಲೆಟ್‌ಕಿನನ ಮಾತನ್ನು ಕೇಳುತ್ತಿದ್ದನು.

'ನಿನ್ನ ಡಾಂಟನ್ ಮುಂತಾದವರಿಗೂ ನಮಗೂ ಹೋಲಿಕೆಯೇ ಇಲ್ಲ. ಆ ವಿಷಯ ನಾನು ಸ್ವಲ್ಪ ಓದಿದ್ದೇನೆ. ಬಣ್ಣ ಬಳಿದ ಜುಟ್ಟನ್ನು ಧರಿಸಿ, ತಾವು ಮರ್ಯಾದಸ್ಥರೆಂದು ಘೋಷಿಸುವ ಫ್ರೆಂಚ ಕ್ರಾಂತಿಕಾರಿಗಳ ಕಥೆಯಲ್ಲಿ ಸಾಯುವ ಕಾಲಕ್ಕೆ ಧೀರೋದಾತ್ತತೆಯಿಂದ ಸತ್ತರೆಂದು ಜನ ಹೇಳುವುದನ್ನು ಕೇಳುವ ಲವಲವಿಕೆ ಎದ್ದು ತೋರುತ್ತಿತ್ತಲ್ಲದೆ ತಮ್ಮ ಕೃತಿಯಿಂದ ಪರಿಣಾಮವೇನಾದೀತೆನ್ನುವ ಕಲ್ಪನೆಯ ಲವಲೇಶವೂ ಇರಲಿಲ್ಲ.'

ಈ ಮಾತುಗಳು ರುಬಷೊವನ ತಲೆಬುರುಡೆಯೊಳಗೆ ಜುಂಯ್ ಎಂದು ಎಲ್ಲ ಕಡೆಯಿಂದಲೂ ಒಳಹರಿಯುವಂತೆ ಅನಿಸಿತು.

'ಇಲ್ಲಿ ಅಡಕವಾದ ಮಹತ್ವದ ವಿಷಯ ಏನೆಂದು ನೀನುಬಲ್ಲೆ. ಇತಿಹಾಸದಲ್ಲೇ ಪ್ರಥಮ ಸಲ ಕ್ರಾಂತಿಯು ಅಧಿಕಾರವನ್ನು ಅಪಹರಿಸಿದ್ದು ಮಾತ್ರವಲ್ಲದೆ ಅದನ್ನಿನ್ನೂ ತನ್ನ ಬಳಿ ಇಟ್ಟುಕೊಂಡಿದೆ. ನಮ್ಮ ರಾಷ್ಟ್ರವು ನವಮನ್ವಂತರದ ಸುದೃಢ ಕೋಟೆಯಾಗಿದೆ. ಲೋಕದ ಆರರಲ್ಲೊಂದು ಭೂಭಾಗ, ಹತ್ತರಲ್ಲೊಂದು ಜನ ನಮ್ಮ ದೇಶಕ್ಕೆ ಸೇರಿದ್ದಾರೆ'

ಗ್ಲೆಟ್‌ಕಿನ್ ಕೋಣೆಯಲ್ಲಿ ಅತ್ತಿತ್ತ ನಡೆಯುತ್ತ ಮಾತನಾಡುತ್ತಿದ್ದನು. ಅದು ಅವನ ವಿಚಾರಣೆಯ ಇತಿಹಾಸದಲ್ಲಿ ಪ್ರಥಮ ಸಲ.

'ನಮ್ಮ ದೇಶದಲ್ಲಿ ಕ್ರಾಂತಿಯು ಯಶಸ್ವಿಯಾದಾಗ ಇದು ವಿಶ್ವವ್ಯಾಪಿಯಾಗುವುದೆಂದು ನಾವು ನಂಬಿದ್ದೆವು. ಅದರ ಬದಲು, ಪ್ರತಿಗಾಮಿಗಳು ನಮ್ಮ ಮೇಲೆ ದೊಡ್ಡ ದಾಳಿಯನ್ನೇ ಮಾಡಿದರು. ಪಾರ್ಟಿಯಲ್ಲಿ ಎರಡು ಬಣಗಳಾದುವು. ಪರದೇಶದಲ್ಲಿ ಕ್ರಾಂತಿಗೆ ಪ್ರಚೋದನೆ ಮಾಡಬೇಕೆನ್ನುವ ಸಾಹಸಿಗಳೊಂದು ಕಡೆ ಸೇರಿದರು. ನೀನು ಅವರಲ್ಲೊಬ್ಬ. ಈ ಪ್ರವೃತ್ತಿಯು ಅಪಾಯಕರವೆಂದು ತಿಳಿದು ನಾವು ಇದನ್ನು ನಿರ್ನಾಮಗೊಳಿಸಿದ್ದೇವೆ.'

ರುಬಷೊವ ತಲೆ ಎತ್ತಿ ಏನನ್ನಾದರೂ ಹೇಳಬೇಕೆಂದು ಯೋಚಿಸಿದನು. ಗ್ಲೆಟ್‌ಕಿನ್ ನಡೆಯುವಾಗ ಉಂಟಾಗುವ ಪದಘಾತವು ಅವನ ತಲೆ ಬುರುಡೆಯೊಳಗೆ ಪ್ರತಿಧ್ವನಿಸುತ್ತಿತ್ತು. ದಣಿವು ಮಿತಿಮೀರಿದ್ದರಿಂದ ಅವನು ಕಣ್ಣು ಮುಚ್ಚಿ ಕುರ್ಚಿಗೊರಗಿದನು.

'ಪಾರ್ಟಿಯ ನಾಯಕನ ದೃಷ್ಟಿ ವಿಶಾಲವಾಗಿಯೂ, ಉಪಾಯಗಳು ದುರ್ದಮನೀಯವಾಗಿಯೂ ಇದ್ದುವು. ಪ್ರಪಂಚದಲ್ಲಿ ವ್ಯಾಪಿಸಿದ ಪ್ರತಿಗಾಮಿ ಸುಂಟರಗಾಳಿಯನ್ನು ಗೆದ್ದು ಕೋಟೆಯನ್ನು ಸ್ಥಿರಗೊಳಿಸದಿದ್ದರೆ ಕ್ರಾಂತಿಗೆ ಗೆಲವಿಲ್ಲವೆಂಬುದು ನಾಯಕನ ನಿರ್ಣಯವಾಗಿತ್ತು: ಈ ಅವಧಿ ಎಷ್ಟು ಕಾಲ-ಹತ್ತು ವರ್ಷವೋ, ಇಪ್ಪತ್ತೊ ನಲ್ವತ್ತೊ ಐವತ್ತೊ-ಯಾರೂ ಹೇಳುವ ಹಾಗಿರಲಿಲ್ಲ. ಅಂತೂ ಕ್ರಾಂತಿಯ ಇನ್ನೊಂದು ಮಹಾತರಂಗವು ಏಳುವ ಪರ್ವಕಾಲದ ತನಕ ಕೋಟೆಯ ಭದ್ರತೆಯನ್ನು ಕಾಪಾಡಿಕೊಳ್ಳುವುದು ನಮ್ಮ ಕರ್ತವ್ಯವೆಂದು ಆತ ಬಗೆದಿದ್ದನು. ಆ

ವರೆಗೆ ನಾವು ಏಕಾಕಿಗಳು, ಆ ವರೆಗೆ ನಮಗೊಂದೇ ಕರ್ತವ್ಯ: 'ನಾಶವಾಗದೆ ಉಳಿಯುವುದು'

ರುಬಷೊವನ ನೆನಪಿನಲ್ಲಿ ಯಾವುದೋ ಒಂದು ಮಾತು ಸುಳಿಯಿತು: 'ತನ್ನ ಜೀವ ಹಿಡಿದುಕೊಂಡಿರುವುದು ಕ್ರಾಂತಿಕಾರಿ ವ್ಯಕ್ತಿಯ ಪ್ರಥಮ ಕರ್ತವ್ಯ.' ಯಾರ ಮಾತಿದು? ತಾನೇ ಹೇಳಿದ್ದೇ? ಐವನೊವ ಅಂದುದೇ? ಅರ್ಲೋವಳನ್ನು ರುಬಷೊವ ಬಲಿಕೊಡಲು ಈ ಸೂತ್ರವೇ ಕಾರಣ. ಎಲ್ಲಿಂದೆಲ್ಲಿಗೋ ಒಯ್ದಿತು ಸೂತ್ರ.

'........ನಾಶವಾಗದೆ ಉಳಿಯುವುದು. ಎಂಥ ಬಲಿಕೊಟ್ಟಾದರೂ ಕೋಟೆಯ ಗೋಡೆಯ ರಕ್ಷಣೆ ಮಾಡತಕ್ಕದು. ಪಾರ್ಟಿಯ ನಾಯಕನು ಈ ತತ್ತ್ವವನ್ನು ಸ್ಪಷ್ಟವಾಗಿ ಮನಗಂಡು ಎಲ್ಲ ಸಂದರ್ಭಗಳಲ್ಲಿಯೂ ಅದನ್ನು ಅನ್ವಯಿಸಿದ್ದಾನೆ. 'ಇಂಟರ್‌ನ್ಯಾಷನಲ್ ಸಾಮ್ಯವಾದಿ ಸಂಘದ' ಧೋರಣೆಯು ನಮ್ಮ ರಾಷ್ಟ್ರೀಯ ಆವಶ್ಯಕತೆಗಳಿಗೆ ಹೊಂದಿಕೊಂಡು ನಡೆಯಬೇಕಾದ್ದು ಇದರಿಂದ. ಈ ಆವಶ್ಯಕತೆ ಯಾರಿಗೆ ಅರ್ಥವಾಗುವುದಿಲ್ಲವೋ ಅವರನ್ನು ನಾಶಮಾಡತಕ್ಕದು. ಯುರೋಪಿನ ಇತರ ದೇಶಗಳಲ್ಲಿದ್ದ ನಮ್ಮ ಕಾರ್ಯಕರ್ತರೆಲ್ಲರನ್ನೂ ಈ ತತ್ತ್ವದ ಮೇಲಿಂದ ನಿರ್ನಾಮಗೊಳಿಸಲಾಯಿತು. ವ್ಯಕ್ತಿಗಳನ್ನು ಮಾತ್ರವೇ ಅಲ್ಲ ಪರದೇಶಗಳಲ್ಲಿರುವ ನಮ್ಮ ಶಾಖಾ ಸಂಘಗಳನ್ನೂ ಸಾವಿರೇ ರೀತಿ ನಾಶಮಾಡಿದ್ದೇವೆ—ಕೋಟೆಯ ಸಂರಕ್ಷಣೆಗೋಸ್ಕರ. ಪ್ರತಿಗಾಮಿ ರಾಷ್ಟ್ರಗಳಲ್ಲಿ ಅಸಮಯದಲ್ಲಿ ಕ್ರಾಂತಿ ಚಳವಳಿ ಎದ್ದಲ್ಲಿ ಆ ದೇಶದ ಪೋಲೀಸರೊಡನೆ ಸಹಕರಿಸಿ ನಾವು ಚಳವಳಿಯನ್ನು ಹತ್ತಿಕ್ಕಿದುದೂ ಉಂಟು. ಕೋಟೆಯ ಸಂರಕ್ಷಣೆಗಾಗಿ ಮಿತ್ರರಿಗೆ ದ್ರೋಹ ಮಾಡಿ, ಶತ್ರುಗಳೊಡನೆ ಸಂಧಾನ ಮಾಡಿದವರು ನಾವು. ಪ್ರಥಮ ಜಯಶೀಲ ಕ್ರಾಂತಿಯ ಪ್ರತಿನಿಧಿಗಳಾದ ನಮಗೆ ಇತಿಹಾಸವು ವಿಧಿಸಿದ ಈ ಕರ್ತವ್ಯವನ್ನು ನಾವು ದಕ್ಷತೆಯಿಂದ ನಿರ್ವಹಿಸಿದ್ದೇವೆ. ದೂರದೃಷ್ಟಿಯಿಲ್ಲದ ನೀತಿವಾದಿಗಳಿಗೂ, ಸೌಂದರ್ಯವಾದಿಗಳಿಗೂ ಇದು ಅರ್ಥವಾಗಲಿಲ್ಲ. ಆದರೆ ಕ್ರಾಂತಿಯ ಮಹಾ ನಾಯಕನಿಗೆ ಎಲ್ಲವೂ ಯಾವ

ವರ ಮೇಲೆ ಹೊಂದಿಕೊಂಡಿವೆಯೆಂಬುದು ಗೊತ್ತು. ಕೊನೆ ತನಕ ನಿಲ್ಲಬೇಕು, ಸ್ಥಿರವಾಗಿ ನಿಲ್ಲಬೇಕು–ಇದು ನಿಶ್ಚಯ.

ಗ್ಲೆಟ್‌ಕಿನ್ ನಡೆಯುವುದನ್ನು ನಿಲ್ಲಿಸಿ, ರುಬಷೊವನ ಬೆನ್ನ ಒಂದು ಗಡೆ ಬಂದನು. ತನ್ನ ಗಂಭೀರ ಭಾವವನ್ನು ಬಿಟ್ಟು ಈ ಪರಿಯಾಗಿ ಉದ್ವೇಗಕ್ಕೀಡಾದುದನ್ನು ಕಂಡು ಅವನಿಗೆ ನಾಚುಗೆ ಎನಿಸಿರಬೇಕು. ಮರಳಿ ಡೆಸ್ಕಿನ ಹಿಂದೆ ಕೂತು ಕೈಗುಬ್ಬಿಗಳನ್ನು ಸರಿಮಾಡಿಕೊಂಡನು. ದೀಪವನ್ನು ತುಸು ಇಳಿಸಿ, ಬೆವರನ್ನು ಕರವಸ್ತ್ರದಿಂದ ಒರಸಿಕೊಂಡನು.

'ಪಾರ್ಟಿಯ ದಾರಿ ನಿಶ್ಚಿತವಾಗಿತ್ತು. ಗುರಿ ಚೆನ್ನಾಗಿದ್ದರೆ ಸಾಕು ಅದರ ಸಾಧನೆಗೆ ಯಾವ ಉಪಾಯವನ್ನೂ ಎಲ್ಲ ತರದ ಉಪಾಯವನ್ನೂ ಬಳಸಬಹುದೆಂದು ನಿರ್ಣಯವಾಗಿತ್ತು. ಈ ಸೂತ್ರಕ್ಕನುಗುಣವಾಗಿ ಪಬ್ಲಿಕ್ ಪ್ರೊಸಿಕ್ಯೂಟರನು ಈಗ ನಿನ್ನಜೀವ ಕೇಳುತ್ತಿದ್ದಾನೆ.

'ರುಬಷೊವ, ನಿನ್ನ ಗುಂಪಿನವರೆಲ್ಲ ಸೋತು ಹೋದರು, ಹತರಾದರು. ಪಾರ್ಟಿಯನ್ನೊಡೆದಲ್ಲಿ ಯಾದವೀ ಯುದ್ಧವು ನಿಶ್ಚಯವೆಂದು ತಿಳಿದೂ ತಿಳಿದು ನೀನು ಪಾರ್ಟಿಯನ್ನೊಡೆಯಲೆಳಸಿದಿ. ನಾವು ಹೊರಿಸಿದ ತ್ಯಾಗವನ್ನು ಅರ್ಥಮಾಡಿಕೊಳ್ಳಲಾರದ ರೈತ ಬಂಧುಗಳಲ್ಲಿ ಅದೆಷ್ಟು ಅತೃಪ್ತಿ ಹರಡಿದೆ ಎಂದು ನೀನು ಬಲ್ಲೆ. ಕೆಲವೇ ತಿಂಗಳುಗಳಲ್ಲಿ ಆರಂಭವಾಗಬಹುದಾದ ಯುದ್ಧದ ಸಂದರ್ಭದಲ್ಲಿ ಇಂಥ ಪ್ರವೃತ್ತಿಗಳಿಂದ ದೇಶವು ಗಂಡಾಂತರದೊಳಗೆ ಸಿಲುಕುವ ಸಂಭವವಿದೆ. ಆದ್ದರಿಂದ ಪಾರ್ಟಿಯೊಳಗಿನ ಐಕ್ಯವನ್ನು ಕಾಪಾಡಿಕೊಳ್ಳುವುದು ಅತ್ಯಗತ್ಯವೆಂದು ಕಂಡು ಬಂದಿದೆ. ಕುರುಡು ಶಿಸ್ತಿನಿಂದಲೂ, ನಿರಂಕುಶ ವಿಶ್ವಾಸದಿಂದಲೂ ಪಾರ್ಟಿಯ ಒಗ್ಗಟ್ಟು ಪ್ರಬಲವಾಗತಕ್ಕದು. ರುಬಷೊವ, ನೀನೂ ನಿನ್ನ ಸ್ನೇಹಿತರೂ ಸೇರಿ ಪಾರ್ಟಿಯಲ್ಲಿ ಒಡಕು ಹುಟ್ಟಿಸಿದ್ದೀರಿ. ನಿಮ್ಮ ಪಶ್ಚಾತ್ತಾಪವು ನಿಜವಾದಲ್ಲಿ ಈ ಒಡಕನ್ನು ಮುಚ್ಚುವ ಕೆಲಸದಲ್ಲಿ ನೀವು ನಮಗೆ ನೆರವಾಗಬೇಕು. ನಿನ್ನಿಂದ ಪಾರ್ಟಿಯು ಅಪೇಕ್ಷಿಸುವ ಕೊನೆಯ ಸೇವೆ ಇಷ್ಟೇ ಎಂದು ನಾನು ಆಗಲೇ ನಿನಗೆ ಹೇಳಿದ್ದೇನೆ.

'ನಿನ್ನ ಕೆಲಸ ಸರಳವಾಗಿದೆ: ಅದೇನೆಂದು ನೀನೇ ವರ್ಣಿಸಿರುವಿ: ಸರಿಯಾದ್ದಕ್ಕೆ ಸುನೆರಿ ಹಚ್ಚುವುದು, ಅಲ್ಲದ್ದಕ್ಕೆ ಮಸಿ ಬಳಿಯುವುದು. ವಿರೋಧಕರ ಧೋರಣೆ ತಪ್ಪು. ಆದ್ದರಿಂದ ವಿರೋಧ ಗುಂಪಿನವರ ಆಚರಣೆಗಳು ಅತ್ಯಂತ ಕುತ್ಸಿತವೆಂದೂ, ಅವರಲ್ಲಿ ಒಬ್ಬೊಬ್ಬನೂ ಮಹಾದ್ರೋಹಿ ಎಂದೂ ನೀನು ಜನತೆಗೆ ತಿಳಿಯಪಡಿಸಬೇಕು. ಜನರಿಗೆ ಅರ್ಥವಾಗುವ ಸರಳ ಭಾಷೆ ಎಂದರೆ ಇದು. ನಿನ್ನ ಉದ್ದೇಶಗಳೂ, ಪ್ರೇರಣೆಗಳೂ, ಅಂತರಂಗ ವಿಶ್ಲೇಷಣೆಗಳೂ ಅವರ ಮನಸ್ಸಿನಲ್ಲಿ ಗೊಂದಲವುಂಟುಮಾಡಿಯಾವು. ಆದ್ದರಿಂದ ಇವುಗಳ ಪ್ರಸ್ತಾಪವೇ ಬೇಡ. ಜನತೆಗೆ ವಿರೋಧಕರ ಮೇಲೆ ಕರುಣೆಯುಂಟಾಗದಂತೆ ನೀನು ನೋಡಿಕೊಳ್ಳಬೇಕಾದ್ದು ಮುಖ್ಯ. ವಿರೋಧಿ ಗುಂಪಿನ ಮೇಲೆ ಜನಕ್ಕೆ ಕರುಣೆ ಉತ್ಪನ್ನವಾಗುವುದು ದೇಶಕ್ಕೆ ದೊಡ್ಡ ಗಂಡಾಂತರ.

'ಕಾಮ್ರೇಡ್ ರುಬಷೊವ, ಪಾರ್ಟಿಯು ನಿನಗೊಪ್ಪಿಸಿದ ಕರ್ತವ್ಯವು ನಿನಗೆ ಈಗ ಅರಿವಾಯಿತೆಂದು ನಾನು ಭಾವಿಸುತ್ತೇನೆ.' ಎಂದು ಗ್ಲೆಟ್‌ಕಿನ್ ನುಡಿದನು.

ತನ್ನನ್ನು ಕಾಮ್ರೇಡ್ ಎಂದು ಈತ ಕರೆದುದು ಇದೇ ಮೊದಲ ಬಾರಿ ಎಂದುಕೊಂಡನು ರುಬಷೊವ. ಅವನ ನೆತ್ತರು ಕುದಿಯುತ್ತಿತ್ತು, ಆದರೇನು ಮಾಡೋಣ, ಅಸಹಾಯತೆಯಿಂದ ಆತ ಬಸವಳಿದು ಹೋಗಿದ್ದನು. ಕನ್ನಡಕವನ್ನು ಹಾಕಿಕೊಳ್ಳುವಾಗ ಗಲ್ಲದಲ್ಲಿ ನಡುಕವುಂಟಾಯಿತು.

ಆತ 'ತಿಳಿಯಿತು' ಎಂದನು.

ಗ್ಲೆಟ್‌ಕಿನ್ 'ಇದಕ್ಕಾಗಿ ಪಾರ್ಟಿ ನಿನಗೆ ಉಡುಗೊರೆ ಕೊಡುವುದೆಂದು ಭಾವಿಸಬೇಡ. ಕೆಲವು ಆರೋಪಿಗಳು ದೈಹಿಕ ಹಿಂಸೆಗೆ ಬಗ್ಗಿದ್ದಾರೆ. ಕೆಲವರು ತಮ್ಮ ಮತ್ತು ತಮ್ಮ ಕುಟುಂಬದ ಜನರ ಪ್ರಾಣರಕ್ಷಣೆಗೋಸ್ಕರ ನಮ್ಮ ಮಾತನ್ನು ಕೇಳಿದ್ದಾರೆ. ಆದರೆ ನಿನಗೆ ನಾವು ಯಾವ ಆಸೆಯನ್ನೂ ತೋರಿಸುವುದಿಲ್ಲ'

'ಅರ್ಥವಾಯಿತು' ಎಂದನು ರುಬಷೊವ.

'ನಿನ್ನ ದಿನಚರಿಯಲ್ಲಿ ನಾನು ಮೆಚ್ಚುವ ಒಂದು ವಾಕ್ಯವನ್ನು ಸೇರಿಸಿದ್ದೀಯೆ: 'ನಾನು ಹೇಗೆ ಮಾಡಬೇಕಾಗಿತ್ತೋ, ಯೋಚಿಸಬೇಕಾಗಿತ್ತೋ ಹಾಗೆಯೇ ಮಾಡಿದ್ದೇನೆ, ಯೋಚಿಸಿದ್ದೇನೆ. ನನ್ನ ದಾರಿ ಸರಿಯಾದರೆ ನಾನು ಪಶ್ಚಾತ್ತಪಿಸುವ ಆಗತ್ಯವಿಲ್ಲ; ದಾರಿ ತಪ್ಪಾದರೆ, ಸುಂಕ ಕೊಡುತ್ತೇನೆ' ಎಂದು ನೀನು ಅದರಲ್ಲಿ ಬರೆದಿದ್ದಿ' ಎಂದು ರುಬಷೊವನ ಫೈಲಿನಿಂದ ಗ್ಲೆಟ್ ಕಿನ್ ಓದಿ ಹೇಳಿದನು.

ಫೈಲಿನಿಂದ ಕಣ್ಣು ತೆಗೆದು ರುಬಷೊವನನ್ನೇ ದಿಟ್ಟಿಸುತ್ತ: 'ನಿನ್ನ ದಾರಿ ತಪ್ಪಿ ಹೋಯಿತು. ಸುಂಕ ಕೊಟ್ಟೇ ತೀರಬೇಕು, ಕಾಮ್ರೇಡ ರುಬಷೊವ. ಪಾರ್ಟಿಯು ನಿನಗೆ ಒಂದೇ ಒಂದು ಆಶ್ವಾಸನೆ ಕೊಡಬಲ್ಲುದು: ಪಾರ್ಟಿಯು ಅಂತಿಮ ವಿಜಯವನ್ನು ಪಡೆದು ನಿನ್ನ 'ಉದ್ದೇಶ'ಗಳಿಂದ ಯಾವ ತೊಂದರೆಯೂ ಆಗದೆ, ಒಳ್ಳೆಯ ಕಾಲಬಂದಾಗ ಗೊಂಬೆಯಾಟವೆಂದು ನೀನು ಕರೆದಿರುವ ಈ ವಿಚಾರಣೆಯನ್ನೂ ಅದರ ಹಿನ್ನೆಲೆಯ ಗುಪ್ತ ಫೈಲುಗಳನ್ನೂ ಇತಿಹಾಸದ ಬೆಳಕಿಗೆ ನಾವು ಒಡ್ಡಬಹುದು........'

ಕೆಲವು ಕ್ಷಣ ತಡೆದು, 'ನಿನಗೂ ನಿನ್ನ ಮಿತ್ರರಿಗೂ ಈಗ ದೊರೆಯದ ಅನುತಾಪವು ಭವಿಷ್ಯದ ಜನರಿಂದ ದೊರೆಯುಬಹುದು.' ಎಂದು ಹೇಳಿ ಕಾಗದವನ್ನು ರುಬಷೊವನ ಕಡೆಗೆ ಕೊಟ್ಟು, ಪೇನವನ್ನು ಅದರ ಬಳಿ ಇಟ್ಟನು. ರುಬಷೊವ ಎದ್ದು ನಿಂತು, ಕಷ್ಟದಿಂದ ನಕ್ಕು, 'ನಿಯೆಂಡರ್ಥಾಲರು ಹೃದಯಿಕವಾಗಿ ಮಾತನಾಡಿದರೆ ಹೇಗಿರುತ್ತದೆಂಬುದನ್ನು ನೋಡಿದ ಹಾಗಾಯಿತು' ಎಂದು ಹೇಳಿಕೆಗೆ ರುಜು ಹಾಕಿದನು. ರುಜು ಹಾಕಿ ತಲೆ ಎತ್ತಿದಾಗ ಒಂದನೆಯ ನಂಬರಿನವನ ಚಿತ್ರಪಟವು ಅವನ ಮೇಲೆ ವ್ಯಂಗ್ಯವಾಗಿ ಒಮ್ಮೆ ನಕ್ಕಿತು; ಅಂದಿನ ಆ ಬೀಳ್ಕೊಳ್ಳುವ ಸಮಯ ಅವನ ಮುಖದಲ್ಲಿದ್ದ ನಗು.

'ನಿನಗೆ ಅರ್ಥವಾಗದಿದ್ದರೂ ಚಿಂತಿಲ್ಲ. ಹಳೆ ತಲೆಮಾರಿನ ಐವನೊವ, ರುಬಷೊವ, ಕೀಫರ್ ಅಂಥವರಿಗೆ ಮಾತ್ರ ಅರ್ಥವಾಗುವ ವಿಷಯಗಳಿರಲಿಲ್ಲವೆ? ಆದರೇನು ಮಾಡೋಣ, ವಿಷಯಗಳಿಗೀಗ ಸ್ಥಾನವಿಲ್ಲ.

'ವಿಚಾರಣೆಯ ಕಾಲದ ವರೆಗೆ ನಿನಗೆ ತೊಂದರೆ ಕೊಡಬಾರದೆಂದು ಆಜ್ಞೆ ಕೊಡುತ್ತೇನೆ. ನಿನಗೇನಾದರೂ ಕೇಳುವುದಿದ್ದರೆ ಕೇಳು' ಎಂದು ಗ್ಲೆಟ್‌ಕಿನ್ ಹೇಳಿದನು.

'ಬೇರೇನೂ ಇಲ್ಲ, ನಿದ್ದೆ ಮಾಡಬೇಕು' ಎಂದು ರುಬಷೊವ ಹೇಳಿದನು.

'ಸರಿ ನಿನಗೆ ನಿದ್ದೆಯಲ್ಲಿ ತೊಂದರೆ ಕೊಡಬಾರದೆಂದು ಆಜ್ಞೆ ಕೊಡುತ್ತೇನೆ' ಎಂದ ಗ್ಲೆಟ್‌ಕಿನ್.

ರುಬಷೊವನ ಹಿಂದೆ ಕದ ಚಾಚಿದ ಮೇಲೆ ಗ್ಲೆಟ್‌ಕಿನ್ ಮರಳಿ ತನ್ನ ಡೆಸ್ಕಿಗೆ ಹೋಗಿ ಕೂತನು. ಕೆಲವು ಕ್ಷಣ ಅಲ್ಲಾಡದೆ ಕೂತಿದ್ದು ಕಾರ್ಯದರ್ಶಿನಿಯನ್ನು ಬರಹೇಳಿದನು. ಆಕೆ ತನ್ನ ನಿಶ್ಚಿತ ಸ್ಥಾನದಲ್ಲಿ ಕೂತು 'ನಿಮ್ಮ ಯಶಸ್ಸಿಗೋಸ್ಕರ ನನ್ನ ಅಭಿವಂದನೆ ಸ್ವೀಕರಿಸಿ ಕಾಮ್ರೇಡ್ ಗ್ಲೆಟ್‌ಕಿನ್' ಎಂದಳು.

ಗ್ಲೆಟ್‌ಕಿನ್ ಬೆಳಕನ್ನು ಇಳಿಸಿದನು.

ದೀಪವನ್ನೊಮ್ಮೆ ನೋಡಿ ಗ್ಲೆಟ್‌ಕಿನ್ ಹೇಳಿದನು:

'ನಿದ್ದೆ ಇಲ್ಲದಿರೋಣ ಮತ್ತು ದೇಹಾಯಾಸ ಸೇರಿದರೆ ಯಶಸ್ಸು. ಎಲ್ಲ ಅವರವರ ದೇಹಸ್ಥಿತ್ಯನುಸಾರ ತಾನೇ' ಎಂದನು.

# ವ್ಯಾಕರಣಬದ್ಧ ಕಾದಂಬರಿ

ದಾರಿ ಯಾವುದೆನ್ನದೆ ಗುರಿಯನ್ನು ಮಾತ್ರ ನಮಗೆ ತೋರಿಸ ಬೇಡ. ಈ ಭೂಮಿಯಲ್ಲಿ ಗುರಿ ಮತ್ತು ದಾರಿ ಒಂದರೊಡ ನೊಂದು ಹೆಣೆದುಕೊಂಡಿರುವ ರೀತಿ ಹೇಗೆಂದರೆ ಒಂದನ್ನು ಬದ ಲಿಸಿದರೆ ಮತ್ತೊಂದು ಸ್ವತಃ ಏವ ಬದಲಾಗಿ ಬಿಡುತ್ತದೆ. ದಾರಿ ಬೇರೆಯಾದರೆ ಗುರಿಯೂ ಬೇರೆಯಾಗುತ್ತದೆ.

**ಫರ್ಡಿನೆಂಡ ಲಾಸ್ಸಾಲೆ:**

ಪ್ರಾನ್ಜ್ ವೊನ್ ಸಿಕ್ಕಿಂಗೆನ್.

೧

'ಅಪರಾಧವನ್ನೊಪ್ಪಿಕೊಳ್ಳುತ್ತೀಯಾ ಎಂದು ಕೇಳಿದಾಗ ಆರೋಪಿ ರುಬಷೋವ ಸ್ಪಷ್ಟ ಸ್ವರದಲ್ಲಿ 'ಹೌದು' ಎಂದನು. ಆರೋಪಿ ಕ್ರಾಂತಿ ವಿರೋಧಕರ ಹಸ್ತಕನಾಗಿ ಕೆಲಸಮಾಡಿದ್ದು ನಿಜವೆ ಎಂದು ಪಬ್ಲಿಕ್ ಪ್ರೊಸಿಕ್ಯೂಟರ ಕೇಳಿದ ಪ್ರಶ್ನೆಗೂ ಆತ ತಗ್ಗಿದ ಸ್ವರದಲ್ಲಿ 'ಹೌದು' ಎಂಬ ಉತ್ತರವನ್ನೇ ಕೊಟ್ಟನು.'

ಕಾವಲುಗಾರ ವಾಸ್ಸಿಲಿಯ ಮಗಳು ಒಂದೊಂದು ಶಬ್ದವನ್ನೂ ಬಿಡಿಸಿ ಬಿಡಿಸಿ ಓದುತ್ತಿದ್ದಳು. ವರ್ತಮಾನ ಪತ್ರವನ್ನು ಮೇಜಿನ ಮೇಲೆ ಹರವಿ ಪ್ರತಿ ಸಾಲನ್ನೂ ಬೆರಳಿಂದ ಮುಟ್ಟಿನೋಡಿ ತಲೆಗೆ ಕಟ್ಟಿದ ಕರವಸ್ತ್ರವನ್ನು ಸವರಿಕೊಳ್ಳುತ್ತ ನಿಧಾನವಾಗಿ ಓದಿದಳು.

'........ತನ್ನ ಪರವಾಗಿ ವಾದಿಸಲು ವಕೀಲರು ಬೇಕೆ ಎಂದು ಕೇಳಿದರೆ ಆರೋಪಿಯು ಈ ಸೌಲಭ್ಯವನ್ನು ನಿರಾಕರಿಸಿದನು. ನ್ಯಾಯಾಲಯವು ತದನಂತರ ಆರೋಪವನ್ನು ಕೇಳಲು ಸಿದ್ಧವಾಯಿತು........'

ಕಾವಲುಗಾರ ವಾಸ್ಸಿಲಿ ಮೋರೆಯನ್ನು ಗೋಡೆಗೆ ತಿರುಗಿಸಿಕೊಂಡು ಮಂಚದ ಮೇಲೆ ಮಲಗಿದ್ದನು. ಮಗಳು ವೇರಾ ವಾಸ್ಸಿಲೋವ್ನಾಳಿಗೆ ತಂದೆ ನಿದ್ರಿಸಿರುವನೇ ಅಥವಾ ಓದುವುದನ್ನು ಆಲಿಸುತ್ತಿರುವನೇ ಎಂಬುದು ತಿಳಿಯುವ ಹಾಗಿರಲಿಲ್ಲ. ಆಕೆ ಅದನ್ನು ಗಮನಿಸದೆ ತಂದೆಯ 'ಜ್ಞಾನ ವಿಕಾಸ' ಕ್ರೋಸ್ಕರ ಪ್ರತಿದಿನವೂ ಕಾರ್ಖಾನೆಯಿಂದ ಮರಳಿದ ಮೇಲೆ-ರಾತ್ರಿ ಪಾರ್ಟಿ ಗುಂಪಿನ ಸಭೆ ಇದ್ದಾಗಲೂ-ಪತ್ರಿಕೆಯನ್ನೋದದೆ ಬಿಡುತ್ತಿರಲಿಲ್ಲ.

'............ದಸ್ತಾವೇಜುಗಳ ಪುರಾವೆಯಿಂದಲೂ, ಆರಂಭದ ವಿಚಾರಣೆಯಲ್ಲಿ ಆರೋಪಿಯು ಒಪ್ಪಿಕೊಂಡಂತೆಯೂ, ರುಬಷೋವ ಆರೋಪದ ಎಲ್ಲ ಅಂಶಗಳಲ್ಲಿಯೂ ಅಪರಾಧಿ ಎಂಬುದು ಸ್ಪಷ್ಟವಾಗುತ್ತದೆ. ನ್ಯಾಯಾಲಯದ ಅಧ್ಯಕ್ಷರು ನಿನ್ನ ವಿಚಾರಣೆಯ

ವಿಷಯ ನಿನಗೇನಾದರೂ ಆಕ್ಷೇಪ ಹೇಳುವುದಿದ್ದರೆ ಹೇಳು ಎಂದಾಗ ಆರೋಪಿಯು ಏನೂ ಹೇಳುವುದಿಲ್ಲವೆಂದುದು ಮಾತ್ರವಲ್ಲದೆ ತಾನು ಸ್ವಯಂಸ್ಫೂರ್ತಿಯಿಂದಲೂ ಕೃತಕರ್ಮದ ಪಶ್ಚಾತ್ತಾಪದಿಂದಲೂ ಅಪರಾಧ ಸ್ವೀಕಾರ ಮಾಡಿರುವುದಾಗಿ ಒಪ್ಪಿಕೊಂಡನು....'

ಕಾವಲಿನ ವಾಸ್ಸಿಲಿ ಮಲಗಿದಲ್ಲಿಂದ ಒಂದಿನಿಸೂ ಚಲಿಸಲಿಲ್ಲ. ಅವನು ಮಲಗಿದಲ್ಲೇ ತಲೆಯ ಪಕ್ಕದಲ್ಲಿ ಒಂದನೆಯ ನಂಬರಿನವನ ಚಿತ್ರ ತೂಗಾಡುತಿತ್ತು. ಅದರ ಸಮೀಪದಲ್ಲಿ ಇನ್ನೊಂದು ತುಕ್ಕು ಹಿಡಿದ ಮೊಳೆಯಲ್ಲಿ ಇದೇ ಕೆಲವು ದಿನ ಹಿಂದೆ ರುಬಷೊವನ ಚಿತ್ರ ತೂಗಾಡುತಿದ್ದಿತು. ಈಗ ಅದಿಲ್ಲ. ಹಾಸಿಗೆಯ ಕೆಳಗಡೆಯ ತೂತಿನ ಕಡೆ ವಾಸ್ಸಿಲಿಯ ಕೈ ತನ್ನಿಂದ ತಾನೇ ಮುಂದುವರಿಯಿತು. ಆದರೆ ಅಲ್ಲಿ ಬೈಬಲೂ ಇರಲಿಲ್ಲ. ಮಗಳ ಕಣ್ಣಿಂದ ಅಡಗಿಸಿಟ್ಟಿದ್ದ ಬೈಬಲನ್ನು ರುಬಷೊವ ಸೆರೆಯಾದ ಕೆಲ ದಿನಗಳಲ್ಲಿ ಆಕೆ ಹೇಗೋ ಪತ್ತೆ ಹಚ್ಚಿ ಬಿಸುಟಿದ್ದಳು.

'........ಪ್ರೊಸಿಕ್ಯೂಟರನ ಪ್ರಾರ್ಥನೆಯಂತೆ ಆರೋಪಿ ರುಬಷೊವ ಪಾರ್ಟಿ ಧೋರಣೆಗೆ ವಿರೋಧಕನಾಗಿದ್ದ ತಾನು ಹೇಗೆ ಕ್ರಾಂತಿ ವಿರೋಧಿಯಾದೆನೆಂಬುದನ್ನೂ ರಾಷ್ಟ್ರದ್ರೋಹಿಯಾದೆನೆಂಬುದನ್ನೂ ವಿವರಿಸ ತೊಡಗಿದನು. ಕಿವಿ ನಿಗುರಿ ಕೂತ ಸಭಾಸದರ ಮುಂದೆ ಆರೋಪಿ ತನ್ನ ಹೇಳಿಕೆಯನ್ನು ಈ ರೀತಿ ಆರಂಭಿಸಿದನು.'

"ನ್ಯಾಯ ಮೂರ್ತಿಗಳೇ, ಪರೀಕ್ಷಕ ಮ್ಯಾಜಿಸ್ಟ್ರೇಟನ ಮುಂದೂ, ನ್ಯಾಯದ ಉನ್ನತ ಪ್ರತಿನಿಧಿಗಳಾದ ನಿಮ್ಮ ಮುಂದೂ ನಾನು ಶರಣಾಗತಿಯನ್ನು ಒಪ್ಪಿಕೊಳ್ಳಲು ಕಾರಣವೇನೆಂಬುದನ್ನು ಹೇಳುತ್ತೇನೆ. ಪಾರ್ಟಿಯ ಧೋರಣೆಯಿಂದ ಒಂದಿನಿಸು ಕದಲಿದರೂ ಸಹಿತ ಅದು ಹೇಗೆ ಕ್ರಾಂತಿ ವಿರೋಧಿ ವಿದ್ರೋಹದಲ್ಲಿ ಪರ್ಯವಸಾಯಿಯಾಗುವುದೆಂದು ನನ್ನ ಕಥೆಯಿಂದ ನೀವು ತಿಳಿಯಬಹುದು. ನಮ್ಮ ವಿರೋಧದ ಪರಿಣಾಮವಾಗಿ ನಾವು ಹೆಚ್ಚು ಹೆಚ್ಚು ಕೆಸರಿನಲ್ಲಿ ಹೂತು ಹೋಗುವಂತಾಯಿತು. ಈ ಪ್ರಾಮುಖ್ಯ ಸಂಧಿಕಾಲದಲ್ಲಿ ಪಾರ್ಟಿ ಧೋರಣೆಯು ಕುರಿತೂ.

ಪಾರ್ಟಿ ನಾಯಕತ್ವದ ವಿವೇಕದ ಕುರಿತೂ ಸಂದೇಹವುಳ್ಳವರಿಗೆ ಎಚ್ಚರಿಕೆಯಾಗುವಂತೆ ನನ್ನ ಪತನದ ಕಥೆಯನ್ನು ನಾನೀಗ ನಿಮ್ಮ ಮುಂದೆ ಚಿತ್ರಿಸುವೆನು. ನಾಚಿಕೆಯಿಂದ ಮೋರೆ ಮುಚ್ಚಿಕೊಂಡು, ಮಣ್ಣಿನಿಂದ ಮೈ ಕೆಸರಾಗಿಸಿಕೊಂಡು, ಮರಣಾಸನ್ನ ಸ್ಥಿತಿಯಲ್ಲಿರುವ ನಾನು ವಿದ್ರೋಹಿಯೊಬ್ಬನ ಈ ದುರಂತ ಪ್ರಗತಿಯನ್ನು ವಿವರಿಸಿದರೆ ಇದರ ಭಯಂಕರ ಪಾಠವನ್ನು ನಮ್ಮ ರಾಷ್ಟ್ರದ ಕೋಟ್ಯಂತರ ಜನತೆ ಪರಿಗ್ರಹಿಸುವುದೆಂಬ ಆಸೆ ನನಗಿದೆ........'

ವಾಸ್ಸಿಲಿ ಮುಖವನ್ನು ಹಾಸಿಗೆಗೆ ಒತ್ತಿ ಹಿಡಿದನು. ವೀರ ವಾಣಿಯಿಂದ ಆಣೆ ಇಡುತ್ತಿದ್ದ ಸೇನಾನಿ ರುಬಷೊವನ ಚಿತ್ರವು ವಾಸ್ಸಿಲಿಯ ಕಣ್ಣಮುಂದೆ ಕುಣಿದಾಡುತ್ತಿತ್ತು. ಅದೆಲ್ಲಿ, ಇಂದಿನ 'ಮೋರೆ ಮುಚ್ಚಿಕೊಂಡು ಮಣ್ಣನಲ್ಲಿ ಹೊರಳಾಡುವ' ರಣ ಹೇಡಿ ಎಲ್ಲಿ? ವಾಸ್ಸಿಲಿ ಜೈಬಲಿದ್ದ ಜಾಗವನ್ನು ತಡಕಿನೋಡಿದನು, ಚಿಂತಿಲ್ಲ ಎಷ್ಟೋ ಸಾಲು ಬಾಯಿಗೇ ಬರುವುದಲ್ಲಾ ಎಂದುಕೊಂಡನು.

'ಇಷ್ಟರಲ್ಲಿ ಸರಕಾರಿ ವಕೀಲರು ಆರೋಪಿಯ ಕಥಾನಕವನ್ನು ನಿಲ್ಲಿಸಿ ಆರೋಪಿಯ ಕಾರ್ಯದರ್ಶಿನಿಯಾಗಿದ್ದು ವಿದ್ರೋಹಿ ಚಟುವಟಿಕೆಗಳಿಂದಾಗಿ ಗುಂಡಿನ ಬಾಯಿಗೆ ಆಹುತಿಯಾದ ಅರ್ಲೋವಾಳ ಕುರಿತು ಕೆಲವು ಪ್ರಶ್ನೆಗಳನ್ನು ಕೇಳಿದರು. ರುಬಷೊವನ ಉತ್ತರಗಳಿಂದ ತಿಳಿದು ಬಂದುದೇನೆಂದರೆ ಪಾರ್ಟಿಯ ಸೂಕ್ಷ್ಮ ನೇತ್ರಗಳಿಗೆ ಸಿಕ್ಕಿ ತನ್ನ ಚಟುವಟಿಕೆಗಳಿಗೆಲ್ಲಿ ಭಂಗಬರುವುದೋ ಎಂಬ ಹೆದರಿಕೆಯಿಂದಲೂ, ಜೀವ ಉಳಿಸಿಕೊಳ್ಳುವ ಆಸೆಯಿಂದಲೂ ತನ್ನ ತಪ್ಪಿಗೆ ಅರ್ಲೋವಾಳನ್ನುಹೊಣೆ ಮಾಡಿ ಆರೋಪ ತಪ್ಪಿಸಿಕೊಂಡನಂತೆ. ಒಂದಿಷ್ಟು ನಾಚಿಕೆ ಮರ್ಯಾದೆಯಿಲ್ಲದೆ ರುಬಷೊವ ಈ ಅಪರಾಧವನ್ನು ಬಹಿರಂಗವಾಗಿ ಒಪ್ಪಿಕೊಂಡನು. 'ನೋಡುವಾಗ ನಿನ್ನಲ್ಲಿ ನೀತಿಯ ಕಲ್ಪನೆಯೇ ಇರುವಂತೆ ಕಾಣುವುದಿಲ್ಲ' ಎಂದು ಸರಕಾರಿ ವಕೀಲರು ಟೀಕಿಸಿದರೆ ಆತ 'ನೋಡುವಾಗ ಇಲ್ಲ' ಎಂದು ವ್ಯಂಗ್ಯವಾಗಿ ನುಡಿದನು. ಆರೋಪಿಯ ನಡತೆಯನ್ನು ನೋಡಿ ಶ್ರಾವಕ ಸಭಾಸದರು ಸಿಟ್ಟಿನಿಂದ ಮತ್ತು ಜುಗುಪ್ಸೆಯಿಂದ ನ್ಯಾಯಾಲಯ

ದೊಳಗೆ ಗಲಭೆ ಮಾಡಲಾರಂಭಿಸಿದರು. ಗಲಭೆಯನ್ನಂತೂ ನ್ಯಾಯಾಲಯದ ಅಧ್ಯಕರು ಕ್ಷಿಪ್ರದಲ್ಲಿ ನಿಲ್ಲಿಸಿದರು. ನಡುವೆ ಒಂದು ಸಲ ಆರೋಪಿಯು 'ನನಗೆ ಹಲ್ಲು ನೋಯುತ್ತಿದೆ, ಐದು ಮಿನಿಟು ಅವಕಾಶ ಕೊಡಿ' ಎಂದಾಗ ಜನತೆಯ ನ್ಯಾಯ ಬುದ್ಧಿಯು ನಗೆಪಾಟಲಿನ ಗಲಭೆಯಲ್ಲಿ ವ್ಯಕ್ತವಾಯಿತು. ಕ್ರಾಂತಿಕಾರಿ ನ್ಯಾಯದ ಪ್ರತೀಕವೋ ಎಂಬಂತೆ ಅಧ್ಯಕ್ಷರು ಆರೋಪಿಯ ವಿನಂತಿಯನ್ನು ಕೂಡಲೇ ಮನ್ನಿಸಿ ವಿಚಾರಣೆಯನ್ನು ಐದು ಮಿನಿಟು ತಡೆ ಹಿಡಿದರು.

ಕಾವಲಿನ ವಾಸ್ಸಿಲಿ ಶತ್ರುಗಳಿಂದ ಪಾರಾಗಿ ಬಂದ ರುಬಷೊವನನ್ನು ಜನರು ಜಯ ಜಯಕಾರದಿಂದ ಸ್ವಾಗತಿಸಿದ ದೃಶ್ಯವನ್ನು ಸ್ಮರಿಸಿದನು. ಕೆಂಪು ಬಾವುಟ ಮತ್ತು ತೋರಣಗಳ ನಡುವೆ ಊರುಗೋಲಿನ ಆಧಾರದಿಂದ ಮಂದಸ್ಮಿತವದನನಾಗಿ ನಿಂತಿದ್ದ ರುಬಷೊವನನ್ನು ಜನತೆ ಹರ್ಷೋನ್ಮಾದದ ಉದ್ಗಾರಗಳಿಂದ ಸ್ವಾಗತಿಸಿದ್ದಿತು.

**'ಸಿಪಾಯಿಗಳು ಆತನನ್ನು ಅಧಿಪತಿಯ ಅರಮನೆಗೆ ಸೇರಿದ ಅಂಗಳದೊಳಕ್ಕೆ ಸಾಗಿಸಿಕೊಂಡು ಹೋಗಿ ಪಟಾಲವನ್ನೆಲ್ಲ ಕರೆದು ಆತನಿಗೆ ಕೆಂಪು ಒಲ್ಲಿಯನ್ನು ಹೊದಿಸಿ. ಮುಳ್ಳಿನ ಕಿರೀಟವನ್ನು ಹೆಣೆದು ಆತನಿಗಿಟ್ಟು ಬೆತ್ತದಿಂದ ಆತನ ತಲೆಯ ಮೇಲೆ ಹೊಡೆದು ಆತನ ಮೇಲೆ ಉಗುಳಿ ಆತನ ಮುಂದೆ ಮೊಣಕಾಲೂರಿ ಅಡ್ಡಬಿದ್ದರು.'**

ಇದೇನು ಬಾಯಿಯೊಳಗೇ ಮಣಮಣ ಹೇಳುತ್ತಿದ್ದೀಯಾ'? ಎಂದು ಕೇಳಿದಳು ಮಗಳು.

'ನಿನಗೇಕೆ?' ಎಂದ ವಾಸ್ಸಿಲಿ ಮತ್ತೆ ಗೋಡೆಗೆ ಮುಖ ತಿರುಗಿಸಿದನು. ಹಾಸಿಗೆಯ ತೂತಿಗೆ ಕೈಹಾಕಿ ನೋಡಿದರೆ ಅದು ಖಾಲಿಯಾಗಿತ್ತು, ಮೇಲಿನ ಮೊಳೆಯೂ ಖಾಲಿಯಾಗಿತ್ತು. ಮಗಳು ರುಬಷೊವನ ಚಿತ್ರವನ್ನು ತೆಗೆದು ಕಸದ ಡಬ್ಬಿಗೆ ಎಸೆದಾಗ ವಾಸ್ಸಿಲಿ ಪಿಟ್ಟೆಂದು ಮಾತನಾಡಿರಲಿಲ್ಲ. ಈ ಮುದಿ ವಯಸ್ಸಿನಲ್ಲಿ ಸೆರೆಮನೆಯ ಸವಿ ನೋಡಲು ಆತ ಸಿದ್ಧನಾಗಿರಲಿಲ್ಲ.

ಮಗಳು ಓದುವುದನ್ನು ನಿಲ್ಲಿಸಿ, ಚಹ ಮಾಡಲು ಪ್ರಿಮಸ್ ಸ್ಟೋವನ್ನು ಹಚ್ಚಿದಳು. ಕೋಣೆಯಲ್ಲಿ ಪೆಟ್ರೋಲಿನ ಕಡು ವಾಸನೆ ಹರಡಿತು. 'ನಾನು ಓದುವುದನ್ನು ಆಲಿಸಿದೆಯಾ?' ಎಂದು ಆಕೆ ತಂದೆಯನ್ನು ಕೇಳಿದಳು.

ವಾಸ್ಸಿಲಿ ವಿಧೇಯನಾಗಿ ಮೋರೆ ತಿರುಗಿಸಿ 'ಎಲ್ಲವನ್ನೂ ಕೇಳಿದೆ' ಎಂದು ಉತ್ತರವಿತ್ತನು.

ಸ್ಟೋವಿಗೆ ಗಾಳಿ ಹಾಕುತ್ತ ವೇರಾ ವಾಸ್ಸಿಲೊವ್ನಾ 'ನೋಡಿದಿಯಾ, ವಿದ್ರೋಹಿಯೆಂಬುದನ್ನು ಆತನೇ ಒಪ್ಪಿಕೊಂಡಿದ್ದಾನೆ. ಅದು ಸುಳ್ಳಾದರೆ ಆತ ಒಪ್ಪಿಕೊಳ್ಳುತ್ತಿದ್ದನೆ? ನಮ್ಮ ಕಾರ್ಖಾನೆಯಲ್ಲಿ ನಡೆದ ಸಭೆಯಲ್ಲಿ ನಾವೂ ಠರಾವು ಪಾಸು ಮಾಡಿದ್ದೇವೆ. ಇನ್ನು ನಾವೆಲ್ಲ ರುಜು ಮಾಡಿದರಾಯಿತು' ಎಂದಳು.

ವಾಸ್ಸಿಲಿ ನಿಟ್ಟುಸಿರು ಬಿಡುತ್ತ 'ನಿಮಗೆಲ್ಲಾ ಗೊತ್ತಪ್ಪಾ' ಎಂದನು. ಇದನ್ನು ಕೇಳಿ ವೇರಾ ವಾಸ್ಸಿಲೊವ್ನಾ ತಂದೆಯ ಕಡೆಗೆ ತಿರುಗಿ ನೋಡಿದ ನೋಟವನ್ನು ತಡೆಯಲಾರದೆ ಮುದುಕನು ಮೋರೆಯನ್ನು ಗೋಡೆಗೆ ತಿರುಗಿಸಿದನು. ಆಕೆ ತನ್ನನ್ನು ಆ ದೃಷ್ಟಿಯಲ್ಲಿ ನೋಡಿದಾಗಲೆಲ್ಲ ಮುದುಕನಿಗೆ ತಾನು ಮಗಳ ದಾರಿಯಲ್ಲಿ ಒಂದು ವಿಘ್ನವಾಗಿರುವುದು ನೆನಪಾಗುತ್ತಿತ್ತು. ಮೂರು ವಾರಗಳ ಹಿಂದೆ ಆಕೆ ಕಾರ್ಖಾನೆಯ ಜೂನಿಯರ್ ಮೆಕ್ಯಾನಿಕ್ ಒಬ್ಬನನ್ನು ರಿಜಿಸ್ಟ್ರಿ ವಿವಾಹ ಮಾಡಿಕೊಂಡಿದ್ದಳು. ಅವನಿಗೆ ಸ್ವಂತ ಕೊಠಡಿ ಇರಲಿಲ್ಲ. ಸರಕಾರದ ಗೃಹಸಮಿತಿಯು ಅವನಿಗೆ ಮನೆ ಕೊಡಿಸುವುದು ಯಾವಾಗಲೋ ಏನೋ.

ಪ್ರಿಮಸ್‌ನಲ್ಲಿ ಬೆಂಕಿ ಹಿಡಿಯಿತು. ವೇರಾ ಕಿಟ್ಲಿಯನ್ನು ಅದರ ಮೇಲೇರಿಸಿದಳು.

'ನಮ್ಮ ಪಾರ್ಟಿಗುಂಪಿನ ಕಾರ್ಯದರ್ಶಿ ಠರಾವನ್ನು ಓದಿ ಹೇಳಿದನು. ವಿದ್ರೋಹಿಗಳನ್ನು ನಿಷ್ಕರುಣೆಯಿಂದ ನಿರ್ನಾಮಗೊಳಿಸಬೇಕೆಂದು ಅದರಲ್ಲಿ ಬರೆಯಲಾಗಿತ್ತು. ಯಾರು ಅವರ ಮೇಲೆ ಕರುಣೆ ತೋರಿಸುವರೋ ಅವರೂ ವಿದ್ರೋಹಿಗಳೆಂದೂ ಅವರ ಮೇಲೆ ಕೂಡಲೇ

ದೂರು ಕೊಡಬೇಕಾದ್ದು ಕರ್ತವ್ಯವೆಂದೂ ಅದರಲ್ಲಿ ಸಮೂದಿಸಿದ್ದರು. ಶ್ರಮಜೀವಿಗಳು ಎಚ್ಚರಿಕೆಯಲ್ಲಿರಬೇಕಂತೆ. ನಮಗೆಲ್ಲರಿಗೂ ಠರಾವಿನ ಒಂದೊಂದು ಪ್ರತಿಯನ್ನು ಕೊಟ್ಟು ಅದಕ್ಕೆ ಸಾಧ್ಯವಾದಷ್ಟು ಸಹಿಗಳನ್ನು ಸಂಗ್ರಹಿಸಲು ಆಜ್ಞೆಯಾಗಿದೆ' ಎಂದಳು.

ವೇರಾ ವಾಸ್ಸಿಲೊವ್ನಾ ವರ್ತಮಾನ ಪತ್ರವನ್ನು ಮತ್ತೆ ಮೇಜಿನ ಮೇಲೆ ಹರವಿದಳು. ಮುದುಕನು ಒಮ್ಮೆ ಪಠವಿಲ್ಲದ ಮೋಳೆಯನ್ನೂ ಒಮ್ಮೆ ವರ್ತಮಾನ ಪತ್ರವನ್ನೂ ನೋಡಿ ಕಣ್ಣು ಮಿಟುಕಿಸಿ ಫಕ್ಕನೆ ಗೋಡೆಗೆ ಮುಖಮಾಡಿದನು.

**'ಯೇಸು ಹೇಳಿದನು: ನಿನಗೆ ಸತ್ಯವಾಗಿ ಹೇಳುತ್ತೇನೆ. ಇದೇ ರಾತ್ರಿಯಲ್ಲಿ ಕೋಳಿ ಕೂಗುವುದಕ್ಕಿಂತ ಮುಂಚೆ ನೀನು ನನ್ನ ವಿಷಯದಲ್ಲಿ ಅವನನ್ನು ಅರಿಯೆನೆಂಬುದಾಗಿ ಮೂರು ಸಾರಿ ಹೇಳುವಿ ಅಂದನು.'**

ಕಿಟ್ಟಲೆಯ ನೀರು ಸ್ವರಮಾಡುತಿತ್ತು. ವಾಸ್ಸಿಲಿ ಉಪಾಯವಾಗಿ 'ಯಾದವೀ ಯುದ್ಧದಲ್ಲಿ ಭಾಗವಹಿಸಿದವರೂ ಸಹಿಮಾಡಬೇಕೆ?' ಎಂದು ಕೇಳಿದನು.

'ಯಾರೂ ಮಾಡಬೇಕೆಂಬ ಒತ್ತಾಯವಿಲ್ಲ. ಆದರೆ ಕಾರ್ಖಾನೆಯವರಿಗೆ ಆರೋಪಿಯು ಒಂದಾನೊಂದು ಕಾಲದಲ್ಲಿ ಇಲ್ಲಿ ವಾಸವಾಗಿದ್ದನೆಂಬುದು ತಿಳಿದಿದೆ. ಸಭೆ ಮುಗಿದ ಮೇಲೆ ಕಾರ್ಯದರ್ಶಿಯು ನನ್ನನ್ನು ಕರೆದು ನಿನ್ನ ತಂದೆ ಮತ್ತು ಆರೋಪಿ ಭಾರೀ ಮಿತ್ರರಾಗಿದ್ದರೋ ಹೇಗೆ ಎಂದು ವಿಚಾರಿಸಿದನು' ಎಂದು ಆಕೆ ನುಡಿದಳು.

ವಾಸ್ಸಿಲಿ ಸಟಕ್ಕನೆ ಹಾಸಿಗೆಯಲ್ಲಿ ಎದ್ದು ಕೂತನು. ಕೂತ ರಭಸಕ್ಕೆ ಅವನಿಗೆ ಕೆಮ್ಮಲು ಬರಹತ್ತಿತು. ಚಹದ ಪುಡಿಯನ್ನು ಎರಡು ಬಟ್ಟಲುಗಳಿಗೆ ತುಸು ತುಸುವೇ ಸುರಿಯುತ್ತಿದ್ದ. ವಾಸಿಲೊವ್ನಾ 'ಅದೇನು ವಟಗುಟ್ಟುತ್ತಿದ್ದೀ' ಎಂದು ಪ್ರಶ್ನಿಸಿದಳು.

'ಆ ಪೇಪರು ಇಲ್ಲಿ ತಾ' ಎಂದನು ತಂದೆ.

ಮಗಳು ವರ್ತಮಾನ ಪತ್ರವನ್ನಾತನ ಕೈಗೆ ಕೊಡುತ್ತಾ 'ಅದರಲ್ಲಿರುವುದೆಲ್ಲ ನಿನಗೆ ತಿಳಿಯುವಂತೆ ಓದಿ ಹೇಳಲೆ?' ಎಂದು ಕೇಳಿದಳು.

ಆತ 'ಬೇಡ, ನನಗೆ ನೀನು ಓದಿ ಹೇಳುವುದೇ ಬೇಡ. ನನಗೆ ಸಾಕಾಯಿತು. ಚಹವನ್ನಿಲ್ಲಿ ತಾ' ಎಂದನು.

ಒಂದು ಬಟ್ಟಲು ಚಹವನ್ನು ಮಗಳು ಅವನಿಗೆ ಕೊಟ್ಟ ಮೇಲೆ ಅವನು ಏನೇನೋ ವಟಗುಟ್ಟುತ್ತಾ ಅದನ್ನು ತುಸು ತುಸುವಾಗಿ ಹೀರಿದನು.

ಚಹ ಕುಡಿದ ಮೇಲೆ ಮಗಳು ಮರಳಿ ವರ್ತಮಾನ ಪತ್ರವನ್ನು ಗಟ್ಟಿಯಾಗಿ ಓದಿದಳು. ಆರೋಪಿ ರುಬಷೊವ ಮತ್ತು ಕೀಫರನ ವಿಚಾರಣೆ ಮುಗಿಯುತ್ತ ಬಂದಿತು. ಪಾರ್ಟಿಯ ನಾಯಕನ ಕೊಲೆ ಮಾಡುವ ಯೋಜನೆಯ ವಿವರಗಳು ವಿದಿತವಾದಂತೆ 'ಹುಚ್ಚುನಾಯಿಗಳನ್ನು ಕೊಂದು ಹಾಕಿ' ಎಂದು ನ್ಯಾಯಾಲಯದಲ್ಲಿ ರೇಗಾಟ ಆರಂಭವಾಯಿತು. ಸರಕಾರಿ ವಕೀಲರು ಆರೋಪಗಳನ್ನೊಪ್ಪಿದಿಯಾ ಎಂದು ಆರೋಪಿ ರುಬಷೊವನನ್ನು ಕೇಳಿದಾಗ ಆತ ಕ್ಷೀಣ ಸ್ವರದಲ್ಲಿ 'ರಾಷ್ಟ್ರದ ಸರಕಾರವನ್ನು ಕಿತ್ತೊಗೆಯುವ ಉದ್ದೇಶವನ್ನು ನಾವು ಯಾವಾಗ ಇಟ್ಟುಕೊಂಡೆವೋ ಆ ಮೇಲೆ ಆ ನೀಚ ಉದ್ದೇಶಕ್ಕನುಗುಣವಾದ ನೀಚತರ ಉಪಾಯಗಳನ್ನುಪಯೋಗಿಸಲು ಎಳ್ಳಷ್ಟಾದರೂ ಸಂಕೋಚಪಡಲಿಲ್ಲವೆಂದಿಷ್ಟೇ ನಾನು ಹೇಳಬಲ್ಲೆ' ಎಂದನು.

ವೇರಾ ವಾಸ್ಸಿಲೊವ್ನಾ ಕುರ್ಚಿಯನ್ನು ಹಿಂದೆ ಸರಿಸಿ 'ಅವನು ಶರಣಾಗತನಾಗುವ ಅವನತಿಯನ್ನು ನೋಡಿದರೆ ಓಕರಿಕೆ ಬರುತ್ತದೆ.' ಎಂದು ಚಹದ ಪಾತ್ರೆಗಳನ್ನೂ ಸ್ಟೋವನ್ನೂ ಸರಿಪಡಿಸಲು ತೆರಳಿದಳು. ವಾಸ್ಸಿಲಿ ಎದ್ದು ಕೂತು. 'ನಿನಗಿದು ಅರ್ಥವಾಯಿತೆಂದು ಎಣಿಸಬೇಡ. ಅವನ ಮನಸ್ಸಿನಲ್ಲಿ ಇದನ್ನು ಹೇಳಿದಾಗ ಏನಿತ್ತೋ ದೇವರೊಬ್ಬನೇ ಬಲ್ಲ. ಪಾರ್ಟಿಯು ನಿಮ್ಮನ್ನೆಲ್ಲ ಉಪಾಯಗಾರರಾಗುವಂತೆ ಪ್ರೇರಿಸುವುದಿಲ್ಲವೆ? ಉಪಾಯಗಾರರಲ್ಲಿ ಉತ್ತಮನಾದವನಿಗೆ ನಾಚಿಕೆ ಎಲ್ಲಿದೆ? ಉಪಾಯಗಾರಿಕೆ ಮತ್ತು ಶೀಲ ಇವು ಈಗಿನ ಪ್ರಪಂಚದಲ್ಲಿ ಒಂದಕ್ಕೊಂದು ವಿರೋಧ. ಅದು ಇದ್ದರೆ ಇದಿಲ್ಲ, ಇದು ಇರುವಾಗ ಅದಿಲ್ಲ. ಮನುಷ್ಯನಾದವನು ಒಂದನ್ನೇ ಪಟ್ಟುಹಿಡಿದು ಕೆಲಸ ಮಾಡಿದರೆ ಆಗಲಿಲ್ಲ. ಅದಕ್ಕೆ ಬೈಬಲಿನಲ್ಲಿ 'ಹೌದೋ ಹೌದು, ಅಲ್ಲವೋ ಅಲ್ಲ' ಎಂಬು

ದಿಷ್ಟೇ ನಿನ್ನ ಮಾತಾಗಲಿ. ಏಕೆಂದರೆ ಇದಕ್ಕಿಂತ ಹೆಚ್ಚಿನದೆಲ್ಲವೂ ಕೆಟ್ಟದ್ದು"ಎಂದು ಹೇಳಿರುವುದು' ಎಂದನು.

ಮಗಳು ಈ ಮಾತನ್ನು ಕೇಳಿ ತೋರುವ ಮುಖಭಂಗಿಯನ್ನು ನೋಡಲಾರದೆ ಮುದುಕ ಕೂತಲ್ಲಿಂದಲೆ ಹಾಸಿಗೆಯ ಮೇಲೆ ಒರಗಿದನು. ಆತ ಇಷ್ಟು ಧೈರ್ಯವಾಗಿ ಮಗಳನ್ನು ಖಂಡಿಸಿ ಬಹಳ ದಿನವಾಗಿತ್ತು. ತನಗೂ ಗಂಡನಿಗೂ ಮನೆ ಬೇಕೆಂದು ಆಕೆ ಹಠ ಮಾಡಿದರೆ ವಾಸ್ಸಿಲಿಯ ಗತಿ ಏನಾದೀತೆಂದು ಊಹಿಸ ಬರುವಂತಿದ್ದಿಲ್ಲ: ಈ ಜೀವಿತದಲ್ಲಿ ಬದುಕಬೇಕೆಂದಿರುವವರು, ಮುದಿವಯಸ್ಸಿನಲ್ಲಿ ಸೆರೆಮನೆಯ ರುಚಿ ಏತಕ್ಕೆ ಎನ್ನುವವರು, ಸೇತುವೆಯ ಕೆಳಗಡೆ ವಸತಿ ಹೂಡುವ ದೌರ್ಭಾಗ್ಯ ಬರದಿರಲಿ ಎಂದು ಹಾರೈಸುವವರು ಉಪಾಯಗಾರರಾಗಿರ ಬೇಕಾದ್ದು ಅಗತ್ಯ. ಒಂದೋ ಬುದ್ಧಿವಂತಿಕೆ ಅಥವಾ ಸಜ್ಜನಿಕೆ—ಎರಡರಲ್ಲೊಂದನ್ನು ಆಯಬೇಕಾದ್ದು ಅನಿವಾರ್ಯ.

'ಕೊನೆಯಲ್ಲಿ ನಡೆದದ್ದನ್ನು ಓದುತ್ತೇನೆ' ಎಂದಳು ವಾಸ್ಸಿಲಿಯ ಮಗಳು. ಸರಕಾರಿ ವಕೀಲರು ಅವರ ಸವಾಲುಗಳನ್ನು ಕೇಳಿ ಮುಗಿಸಿದರು. ತರುವಾಯ ಆರೋಪಿ ಕೀಫರನ ವಿಚಾರಣೆ ಆರಂಭವಾಯಿತು. ಅವನು ಕೊಲೆಯ ಪ್ರಯತ್ನದ ವಿವರಗಳನ್ನು ಹೇಳಿಕೆಯಲ್ಲಿದ್ದ ಹಾಗೆಯೆ ಮತ್ತೊಮ್ಮೆ ವರದಿ ಮಾಡಿದನು. ಕೀಫರನ ಹತ್ತಿರ ಏನಾದರೂ ಪ್ರಶ್ನೆ ಕೇಳಬೇಕಾಗಿದ್ದರೆ ಕೇಳು ಎಂದು ನ್ಯಾಯಾಲಯದ ಅಧ್ಯಕ್ಷರು ಆರೋಪಿ ರುಬಷೊವಗೆ ಹೇಳಿದಾಗ ಆರೋಪಿಯು ಆ ಸವಲತ್ತನ್ನು ನಿರಾಕರಿಸಿದನು: ವಿರಾಮಕಾಲದ ಬಳಿಕ ಸರಕಾರಿ ವಕೀಲರು ತಕ್ಷೀರನ್ನು ಸಮಾರೋಪಗೊಳಿಸುವ ಭಾಷಣವನ್ನು ಆರಂಭಿಸಿದರು.

ವಾಸ್ಸಿಲಿ ಗೋಡೆಗೆ ತಿರುಗಿ ನಿದ್ದೆಹೋದನು. ಮಗಳು ಎಷ್ಟು ಸಲ ದೀಪಕ್ಕೆ ಎಣ್ಣೆ ತುಂಬಿಸಿ ವರ್ತಮಾನ ಪತ್ರದ ಕಲಮಿನ ಮೇಲೆ ಕಲಮನ್ನು ಓದಿದಳೋ ಅದೊಂದೂ ಅವನಿಗೆ ತಿಳಿಯದು. ಎಚ್ಚರವಾಗುವ ಹೊತ್ತಿಗೆ'ಮರಣವೊಂದೇ ಈ ದ್ರೋಹಕ್ಕೆ ತಕ್ಕ ಸಜೆ' ಎಂದು ಸರಕಾರಿ ವಕೀಲರು ವಾದ ಮಾಡುವುದು ಆತನ ಕಿವಿಗೆ ಬಿದ್ದಿತು.

'ಎಲ್ಲ ಹುಚ್ಚು ನಾಯಿಗಳನ್ನೂ ಗುಂಡಿಟ್ಟು ಕೊಲ್ಲಬೇಕೆಂದು ನನ್ನ ಅಪೇಕ್ಷೆ' ಎಂಬುದಾಗಿ ವಕೀಲರು ಗರ್ಜಿಸಿದರು.

ಅನಂತರ ಆರೋಪಿಗಳಿಗೆ ಅವರ ಕೊನೆಯ ಮಾತನ್ನು ಹೇಳಲು ಅವಕಾಶವನ್ನು ಕೊಡಲಾಯಿತು. ಆರೋಪಿ ಕೀಫರ ತಾನು ಇನ್ನೂ ಹರೆಯದವನಾದ್ದರಿಂದ ತನಗೆ ಜೀವದಾನ ಮಾಡಬೇಕೆಂದು ನ್ಯಾಯಮೂರ್ತಿಗಳನ್ನು ಅಂಗಲಾಚಿದನು. ಕೊಲೆಯ ಎಲ್ಲ ಜವಾಬುದಾರಿಯನ್ನೂ ಅವನು ಆರೋಪಿ ರುಬಷೊವನ ಮೇಲೆ ಹೊರಿಸಿದನು. ಮಾತನಾಡುವಾಗ ಅವನಿಗೆ ಉಗ್ಗಲು ಬಂದುದ ರಿಂದ ಶ್ರಾವಕರು ಗಟ್ಟಿಯಾಗಿ ನಗತೊಡಗಿದರು. ಆದರೆ ನ್ಯಾಯಾ ಲಯದ ಅಧ್ಯಕ್ಷರು ಕ್ಷಿಪ್ರದಲ್ಲಿ ಸಭೆಯಲ್ಲಿ ಶಿಸ್ತನ್ನು ಕೂಡಿಸಿದರು. ರುಬಷೊವಗೆ ಮಾತನಾಡುವ ಅವಕಾಶವನ್ನು ಕೊಡಲಾಯಿತು: 'ಅಧ್ಯಕ್ಷ ಮಹಾಶಯರೇ, ಇದು ನನ್ನ ಜೀವನದ ಕೊನೆಯ ಭಾಷಣ. ವಿರೋಧ ಪಕ್ಷವು ಸೋತು ಮಣ್ಣುಮುಕ್ಕಿದೆ. ಇವತ್ತು 'ನಾನೇಕೆ ಸಾವಿಗೆ ಗುರಿಯಾದೆ?' ನೆಂದು ನನಗೇ ನಾನು ಪ್ರಶ್ನೆ ಕೇಳಿದರೆ ಯಾವ ಉತ್ತರವೂ ಸಿಗಲೊಲ್ಲದು. ಪಾರ್ಟಿ ಮತ್ತು ಚಳವಳದೊಡನೆ ಸಂಧಾನ ಮಾಡಿಕೊಳ್ಳದೆ ಮತ್ತು ತನ್ನ ಕುಕೃತ್ಯಗಳಿಗೆ ಪಶ್ಚಾತ್ತಾಪಡದೆ ಸತ್ತರೆ ಯಾವುದಕ್ಕೋಸ್ಕರ ಸಾಯಬೇಕೆಂಬುದೇ ತೋಚಲೊಲ್ಲದು. ನನ್ನ ಕೊನೆಗಳಿಗೆಯ ಹೊಸಲಲ್ಲಿ ನಿಂತು ನಾನು ನನ್ನ ದೇಶಕ್ಕೂ, ಜನತೆಗೂ ನನ್ನ ವಿನೀತ ವಂದನೆಗಳನ್ನು ಸಲ್ಲಿಸುತ್ತೇನೆ. ಚರ್ಚೆ ಮತ್ತು ಒಳಸಂಚಿನ ಅಂಕಗಳನ್ನೊಳಗೊಂಡ ರಾಜಕೀಯ ಪ್ರಹಸನವು ಈಗ ಮುಕ್ತಾಯ ವಾಯಿತು. ಸರಕಾರಿ ವಕೀಲರು ನಮ್ಮ ತಲೆಯಮೇಲೆ ಕಣ್ಣಿಡುವ ಮೊದಲೆ ನಾವು ರಾಜಕೀಯ ದೃಷ್ಟಿಯಿಂದ ಸತ್ತುಹೋಗಿದ್ದೆವು. ಇತಿ ಹಾಸವು ಸೋತವನನ್ನು ಕಾಲಕೆಳಗೆ ಹಾಕಿ ತುಳಿಯುತ್ತದೆಂಬುದು ನಿಜ. ನ್ಯಾಯಮೂರ್ತಿಗಳೇ, ನನಗೊಂದೇ ಒಂದು ಕೊರಗು: ಸುಲಭವಲ್ಲಿ ಸಾಯಬಹುದಾಗಿತ್ತು ಎಂದು. ನನ್ನ ದರ್ಪ ಮತ್ತು ಅಹಂಕಾರವು ನನ್ನ ಕಿವಿಯಲ್ಲಿ 'ಮಾತೆತ್ತಬೇಡ, ಮೌನವಾಗಿ ಸಾಯು: ಅಥವಾ ಧೀರನಂತೆ ಸಾಯು, ಆರೋಪಹೊರಿಸಿದವರ ಮೇಲೆ ಪ್ರತ್ಯಾರೋಪ

ಗಳನ್ನು ಹೊರಿಸಿ ಮಹಾ ಸಾಹಸಿಯಾಗಿ ಸಾಯು' ಎಂದು ಪದೇ ಪದೇ ಹೇಳಿದುವು. ಕ್ರಾಂತಿಕಾರರಲ್ಲಿ ನನಗಿಂತ ಹಳೆಯವರು ಹಾಗೆ ಮಾಡುತ್ತಿದ್ದರು. ನಾನು ಆ ಪ್ರಲೋಭನಕ್ಕೆ ತುತ್ತಾಗಲಿಲ್ಲ. ನನ್ನ ಕೆಲಸ ಮುಗಿಯಿತು. ನಾನು ಸುಂಕವನ್ನು ಕೊಟ್ಟಾಯಿತು, ಋಣ ಸಂದಾಯ ಮಾಡಿ ಆಯಿತು. ಇತಿಹಾಸದ ಹತ್ತಿರ ನನ್ನ ಯಾವ ಲೆಕ್ಕವೂ ಬಾಕಿ ಉಳಿದಿಲ್ಲ! ನಿಮ್ಮ ಹತ್ತಿರ ಕ್ಷಮಾಯಾಚನೆ ಮಾಡಿದರೆ ಅದು ನಗೆಪಾಟಲೆನಿಸೀತು. ಇಲ್ಲಿಗೆ ನಾನು ಹೇಳುವುದು ಮುಗಿಯಿತು.'

'......ನ್ಯಾಯಮೂರ್ತಿಗಳೊಳಗೆ ಸ್ವಲ್ಪ ಹೊತ್ತು ವಿಚಾರವಿನಿಮಯವು ನಡೆದ ಬಳಿಕ ಅಧ್ಯಕ್ಷರು ಆರೋಪಿಯ ಮೇಲಿನ ಪ್ರತಿಯೊಂದು ಆರೋಪಕ್ಕೂ ಪರಮಾವಧಿ ಶಿಕ್ಷೆ (ಮರಣ)ಯನ್ನು ವಿಧಿಸಿದರು.'

ಮುದುಕ ವಾಸ್ಸಿಲಿ ತನ್ನ ತಲೆಯ ಮೇಲ್ಗಡೆಯ ಮೊಳೆಯನ್ನು ನೋಡಿ 'ಭಗವಂತಾ ನಿನ್ನ ಸಂಕಲ್ಪದಂತಾಗಲಿ, ತಥಾಸ್ತು' ಎಂದು ವಟಗುಟ್ಟಿ ಗೋಡೆಗೆ ಮುಖತಿರುಗಿಸಿದನು.

## ೨

ಅಂತೂ ಎಲ್ಲವೂ ಮುಗಿಯಿತು. ಇನ್ನೇನು ನಡುರಾತ್ರಿಯೊಳಗೆ ಈ ಜೀವ ಅಂತ್ಯವಾಗುತ್ತದೆ ಎಂದುಕೊಂಡನು ರುಬಷೊವ.

ಕೋಣೆಯೊಳಗೆ ಆರೂವರೆ ಹೆಜ್ಜೆ ಮುಂದೆ, ಆರೂವರೆ ಹೆಜ್ಜೆ ಹಿಂದೆ ಸುತ್ತುವಾಗ ಮೂರನೆಯ ಕರಿ ಇಟ್ಟಿಗೆಯ ಮೇಲೆ ನಿಂತರೆ ಸುತ್ತಲ ಗೋಡೆಯ ಮೌನವು ಆಳವಾದ ಬಾವಿಯಿಂದ ಬರುವ ಮೌನದಂತೆ ಅವನನ್ನು ಸಮೀಪಿಸುವ ಹಾಗಿತ್ತು. ಅದೇಕೆ ಕೋಣೆಯ ಒಳಗೂ ಹೊರಗೂ ಇಷ್ಟೊಂದು ಮೌನವು ಒಮ್ಮೆಂದೊಮ್ಮೆ ಪಸರಿಸಿತೆಂದು ಅವನಿಗೆ ಅರ್ಥವಾಗುತ್ತಿರಲಿಲ್ಲ. ಆದರೆ ಈ ಶಾಂತತೆಯು ಇನ್ನು ಏತರಿಂದಲೂ ಭಂಗವಾಗದೆಂದು ಅವನಿಗೆ ತಿಳಿದಿತ್ತು.

ಯೋಚನೆ ಮಾಡಿದರೆ ಅವನಿಗೆ ಈ ಮೌನವು ಮೊದಲ ಬಾರಿ ಅನುಭವವಾದದ್ದೆಲ್ಲಿ ಎಂಬುದೂ ಹೊಳೆಯುತಿತ್ತು. ಬಹಿರಂಗ ವಿಚಾರ

ಣೆಯ ಸಮಯದಲ್ಲಿ ಕೊನೆಯ ಮಾತನ್ನು ಹೇಳುವ ಸ್ವಲ್ಪ ಮುಂಚೆ ಅದೇನೋ ಒಂದು ವಿಶಿಷ್ಟ ರೀತಿಯ ಶೂನ್ಯತೆ ಅವನ ಮೈಯೊಳಗೆ ಸೇರಿಕೊಂಡಿತ್ತು. ತನ್ನ ಚೇತನದಲ್ಲಿ ಮನೆಮಾಡಿದ ಸ್ವಾರ್ಥ ಮತ್ತು ಅಹಂಕಾರದ ಅವಶೇಷಗಳನ್ನು ತಾನು ಸುಟ್ಟುಹಾಕಿರುವೆನೆಂದು ಅವನು ನಂಬಿದರೂ ಆ ಕೊನೆಗಳಿಗೆಯಲ್ಲಿ ಅವನಿಗೆ ಶ್ರಾವಕ ಸಭಾಸದರ ಕಣ್ಣುಗಳಲ್ಲಿ ಸ್ಫುಟವಾಗುತ್ತಿದ್ದ ತಿರಸ್ಕಾರ ಮತ್ತು ಔದಾಸೀನ್ಯದ ಭಾವವನ್ನು ನೋಡಿ ಯಾರಿಗೂ ಕರುಣೆಯಿಲ್ಲವಲ್ಲಾ ಎಂಬ ಕೊರಗು ಹಠಾತ್ತಾಗಿ ಬಾಧಿಸಿತು. ಆ ಕೊರಗಿನಿಂದ ಅವನ ಮನಸ್ಸು ಹೆಪ್ಪುಗಟ್ಟಿರುವಾಗ ಮಾತಿನಿಂದಲಾದರೂ ಚಳಕಾಯಿಸಬೇಕೆಂದು ಬಗೆದು ಆತ ಕೊನೆಯ ನಾಲ್ಕು ಮಾತು ನುಡಿದಿದ್ದನು. ತನ್ನ ಗತಕಾಲವನ್ನು ಎತ್ತಿ ಹಿಡಿದು, ಐವನೊವ ಮತ್ತು ಗ್ಲೆಟ್‌ಕಿನ್ ಏರ್ಪಡಿಸಿದ ಬಲೆಯಿಂದ ತಪ್ಪಿಸಿಕೊಂಡು, ಆರೋಪ ಹೊರಿಸಿದವರಿಗೆ 'ನನ್ನ ಇಡಿ ಜೀವನದ ಮೇಲೆ ನೀವು ಕೈಮಾಡಿದ್ದೀರಿ. ಅದೇ ಮೇಲಕ್ಕೆದ್ದು ನಿಮ್ಮೆದಿರು ಹೆಡೆ ಆಡಿಸುವುದನ್ನು ನೋಡುವಿರಂತೆ' ಎಂದು ಫ್ರೆಂಚ ಕ್ರಾಂತಿವೀರ ಡಾಂಟನನ ಹಾಗೆ ಎಚ್ಚರಿಕೆಯನ್ನು ಕೊಡಬೇಕೆಂಬ ಪ್ರಲೋಭನವು ಆಗ ಅವನನ್ನು ಬಲವಾಗಿ ಬಾಧಿಸಿತ್ತು. ಡಾಂಟನನ ಭಾಷಣದ ಪ್ರತಿಯೊಂದು ಸಾಲೂ ಅವನಿಗಾಗ ನೆನಪಿಗೆ ಬಂದಿತು: 'ಈ ಪ್ರಜಾರಾಜ್ಯವನ್ನು ರಕ್ತದಿಂದ ಮೀಯಿಸಬೇಕೆಂದು ನೀವು ಹೊರಟಿದ್ದೀರಾ. ಎಷ್ಟು ಕಾಲ ಹೀಗೆ ಸ್ವಾತಂತ್ರ್ಯವು ಸಮಾಧಿಶಿಲೆಯ ಮೇಲೆ ಹೆಜ್ಜೆ ಇಡುತ್ತ ಸಾಗಬೇಕೊ? ನಿರಂಕುಶ ಪ್ರಭುತ್ವದ ಕಾಲ ಸನ್ನಿಹಿತವಾಗಿದೆ. ಅವಗುಂಠನವನ್ನು ಕಿತ್ತೊಗೆದು ತಲೆ ಎತ್ತಿ ನಮ್ಮ ಹೆಣಗಳ ಮೇಲೆ ಸವಾರಿ ಮಾಡುತ್ತಿದೆ ಸ್ವಚ್ಛಂದ ಪ್ರಭುತ್ವದ ಪೆಡಂಭೂತ.'

ಆದರೆ ಇಂಥ ವೀರ ಭಾಷಣದ ಸ್ಥಾನದಲ್ಲಿ ಮೌನವು ನೆಲೆಯೂರಿತ್ತು. ಅಂಥ ಭಾಷಣಕ್ಕೆ ಇದು ಸಮಯವಲ್ಲ. ತನ್ನ ಗತಕಾಲದ ಗುರುತಿನ ಸಮಾಧಿಯೊಳಕ್ಕೆ ಹೊಗುವುದು ಇನ್ನು ಸಾಧ್ಯವಾಗದು. ನಡೆದದ್ದನ್ನು ಶಬ್ದಗಳು ಅಳಿಸಲಾರವು.

ಪ್ರಪಂಚಕ್ಕೆ ಕೊನೆಯ ದರ್ಶನವನ್ನು ಕೊಡುವಾಗ ಪಿಂಜರಿಯನ್ನೇ ವೇದಿಕೆಯಾಗಿ ಪರಿಗಣಿಸಿ ಆರೋಪ ಹೊರಿಸಿದವರ ಮೇಲೆಯೇ ಪ್ರತ್ಯಾರೋಪಗಳನ್ನು ವರ್ಷಿಸಿ ಸತ್ಯದ ಅವಗುಂಠನವನ್ನು ತೆರೆದು ತೋರಿಸಿದವರು ಡಾಂಟನ್ ಒಬ್ಬನ ಹೊರತು ಬೇರೆ ಇರಲಿಲ್ಲ.

ಕೆಲವರಿಗೆ ತಮ್ಮ ದೇಹದ ಅಂಜಿಕೆ, ಉದಾ: ಸೀಳ್ಬಾಯಿಯವನು; ಇನ್ನು ಕೆಲವರಿಗೆ ತಮ್ಮ ತಲೆಯುಳಿಸಿಕೊಳ್ಳುವ ಹವಣಿಕೆ; ಉಳಿದವರಿಗೆ ಗ್ಲೆಟ್‌ಕಿನನಂಥವರ ಕೈಯಿಂದ ತಮ್ಮ ಹೆಂಡಿರುಮಕ್ಕಳನ್ನು ಪಾರುಗೊಳಿಸಬೇಕೆಂಬ ಚಿಂತೆ. ಪಾರ್ಟಿಯ ಕೊನೆಯ ಸೇವೆಗಾಗಿ ತಮ್ಮ ಜೀವವನ್ನು ಮೌನವಾಗಿ ಬಲಿಕೊಟ್ಟವರು ಇವರಲ್ಲಿ ಉತ್ತಮರು. ಆದರೇನು, ಉತ್ತಮರಿಗೂ ಅರ್ಲೋವಾಳಂಥ ಏನಾದರೂ ಒಂದು ವಿಷಯವು ಆತ್ಮಸಾಕ್ಷಿಯನ್ನು ಕೆಣಕಲು ಇಲ್ಲದಿರಲಿಲ್ಲ. ವಿಕೃತ ನೀತಿ ಮತ್ತು ವಿಕೃತತರ್ಕದಿಂದ ತಾವೇ ತಮ್ಮ ಸುತ್ತ ಹೆಣೆದ ಬಲೆಯಲ್ಲಿಯೋ ಅಥವಾ ಗತಕಾಲವೆಂಬ ಕೆಸರುಮುಜ್ಜಿಯಲ್ಲಿಯೋ ಸಿಲುಕಿದ ಈ ಜನ ಅಪರಾಧಿಗಳೇನೋ ನಿಜವೆ; ಆದರೆ ಅವರು ತಾವು ಎಣಿಸಿಕೊಂಡ ಆರೋಪಗಳ ದೆಸೆಯಿಂದ ಅಪರಾಧಿಗಳಲ್ಲ. ಹಿಂದೆ ಹೋಗಲು ಅವರಿಗೆ ದಾರಿ ಇಲ್ಲವಾದ್ದರಿಂದ ನಿಯಮಾನುಸಾರವೇ ಅವರು ಪ್ರಪಂಚದಿಂದ ನಿರ್ಗಮಿಸಬೇಕಾಗಿತ್ತು. ಸಾರ್ವಜನಿಕರಿಗೆ ಅವರ ಮೃತ್ಯುಗೀತ ಬೇಕಾಗಿರಲಿಲ್ಲ. ಪಠ್ಯಪುಸ್ತಕದಲ್ಲಿ ಬರೆದಂತೆಯೇ ಅವರು ಇಲ್ಲಿಂದ ತೆರಳುವುದು ವಿಹಿತ.

ಅಂತೂ ಮುಗಿಯಿತು. ಆ ಕಥೆಯೇ ಕೊನೆಗೊಂಡಿತು. ಬೇರೆ ತೋಳಗಳು ಕೂಗುತ್ತವೆಂದು ನಾನೂ ಕೂಗುವ ಅಗತ್ಯವಿಲ್ಲ. ಸುಂಕ ತೆತ್ತಾಯಿತು, ಲೆಕ್ಕಾಚಾರ ಮುಗಿದು ಹೋಯಿತು. ಪ್ರತಿಯೊಂದು ವಿಚಾರವನ್ನು ಕೊನೆತನಕ ಯೋಚಿಸಿ ಅದಕ್ಕನುಗುಣವಾಗಿ ಕೊನೆತನಕ ಆಚರಿಸಿದ್ದಾಯಿತು. ಇನ್ನುಳಿದ ಸಮಯವನ್ನು ನ್ಯಾಯವಾಗಿ ನನ್ನ ಅಂತರಂಗದ ಮೌನಸಹಭಾಗಿಗೆ ಬಿಟ್ಟುಕೊಡತಕ್ಕದ್ದು. ತಾರ್ಕಿಕ ವಿಚಾರವು ಮುಗಿದಲ್ಲಿಂದ ಮೌನಿಯ ರಾಜ್ಯದ ಗಡಿಯು ಆರಂಭವಾಗು

ವುದು. ರುಬಶೊವ 'ವ್ಯಾಕರಣಬದ್ಧ ಕಾದಂಬರಿ' ಎಂದು ನಾಮಕರಣ ಮಾಡಿದುದು ಇದೇ ರಾಜ್ಯಕ್ಕೆ.

೪೦೬ನೆಯ ಕೋಣೆಯ ಗೋಡೆಯ ಬಳಿ ನಿಂತು ರುಬಶೊವ ೨-೪, ೨-೪; ಎಂದು ಬಡಿದನು. ಆದರೆ ಗೋಡೆಯಿಂದ ಪ್ರತ್ಯುತ್ತರ ಬರಲಿಲ್ಲ. ೨-೪ ಎಂದರೆ 'ನಾನು' ಎಂಬುದರ ಸಂಕೇತವಾಗಿತ್ತು. ಆದರೆ ಇದನ್ನು ಬಡಿಯುವಾಗಲೂ 'ನಾನು' ಎಂಬ ಎಚ್ಚರ ರುಬಶೊವನಿಗೆ ಆದಂತೆ ತೋರಲಿಲ್ಲ.

ಆತ ಕೋಣೆಯಲ್ಲಿ ಹೆಜ್ಜೆಹಾಕಲು ಮರಳಿ ಆರಂಭಿಸಿದನು. ಮೌನದ ಪ್ರಭಾವಕ್ಕೆ ಒಳಗಾದ ಬಳಿಕ ಅವನನ್ನು ಕೆಲವು ಪ್ರಶ್ನೆಗಳು ಕಾಡಿಸುತ್ತಿದ್ದುವು; ಹೊತ್ತು ಮೀರುವ ಮೊದಲೇ ಅವುಗಳಿಗೆ ಉತ್ತರವನ್ನು ಹುಡುಕಬೇಕೆಂದು ಅವನಿಗೆ ಉತ್ಕಟ ಅಭಿಲಾಷೆ ಇತ್ತು. ಚರ್ವಿತ ಚರ್ವಣವಾದ ಪ್ರಶ್ನೆಗಳವು. ವೇದನೆಯ ಅರ್ಥವೇನು, ಅರ್ಥಯುಕ್ತ ವೇದನೆಗೂ, ಅರ್ಥಹೀನ ವೇದನೆಗೂ ಭೇದವೇನು? ಅನಿವಾರ್ಯ ವಾದುದು, ಜೈವಿಕ ಅನಿವಾರ್ಯತೆಯ ಮೂಲದಲ್ಲಿ ಸ್ಥಿರವಾದುದು ಮಾತ್ರ ಅರ್ಥಯುಕ್ತ ವೇದನೆಯೆ? ಸಮಾಜದಿಂದ ಉತ್ಪನ್ನವಾಗುವ ವೇದನೆ ಅನಿವಾರ್ಯವಲ್ಲ, ಅಕಸ್ಮಾತ್–ಸಂಭವನೀಯ, ಆದ್ದರಿಂದ ಅದು ಅರ್ಥಹೀನ ವೇದನೆ. ಅರ್ಥಹೀನ ವೇದನೆಯನ್ನು ಹೋಗಲಾಡಿಸು ವುದಷ್ಟೇ ಕ್ರಾಂತಿಯ ಏಕಮೇವ ಉದ್ದೇಶ ತಾನೇ. ಆದರೆ ಎರಡನೆಯ ಬಗೆಯ ವೇದನೆಯನ್ನು ನಿರ್ಮೂಲ ಮಾಡುವ ಪ್ರಯತ್ನದಲ್ಲಿ ಒಂದ ನೆಯ ತರದ ವೇದನೆಯ ಮೊತ್ತವು ಪರ್ವತಾಕಾರವಾಗಿ ಬೆಳೆಯುತಿತ್ತು. ಆದ್ದರಿಂದ ಕ್ರಾಂತಿಯೆಂಬ ಶಸ್ತ್ರಕ್ರಿಯೆಯಿಂದ ಪ್ರಯೋಜನವಿದೆಯೆ ಎಂಬುದು ಮುಂದಿನ ಪ್ರಶ್ನೆ. 'ಮನುಷ್ಯ ಜಾತಿ" ಎಂಬ ಸಮೂಹ ವನ್ನು ತೆಗೆದುಕೊಂಡರೆ ಪ್ರಯೋಜನವಿರುವುದು ಕಂಡುಬರುತ್ತದೆ. ಆದರೆ 'ಮನುಷ್ಯ' ಎಂಬ ಏಕವಚನದಲ್ಲಿ, ೨-೪ ಸಂಕೇತದಲ್ಲಿ, ಇಂತಿಷ್ಟು ನೆತ್ತರು ಮಾಂಸ ಚರ್ಮದ ಒಂದು ಜೀವವೆಂಬರ್ಥದಲ್ಲಿ; ಈ ಸೂತ್ರದ ಅನ್ವಯವು ಅಸಂಬದ್ಧವೆನ್ನದೆ ಉಪಾಯವಿರಲಿಲ್ಲ. ಹುಡುಗನಾಗಿ ದ್ದಾಗ ಪಾರ್ಟಿಗೆ ಸೇರಿದರೆ ಇಂಥ ಎಲ್ಲ ಪ್ರಶ್ನೆಗಳಿಗೂ ಸಮಾಧಾನ

ದೊರೆಯುವುದೆಂದು ರುಬಷೊವ ಭಾವಿಸಿದ್ದನು. ನಲ್ವತ್ತು ವರ್ಷ ಸಂದ ಮೇಲೆ ಅವನಿಗೆ ತನ್ನ ಪ್ರಶ್ನೆ ಯಾವುದೆಂಬುದೇ ಮರೆತು ಹೋಗಿತ್ತು. ನಲ್ವತ್ತು ವರ್ಷ ಕಳೆದರೂ ಅವನ ಬಾಲ್ಯದ ಸಂದೇಹಗಳು ತೊಲ ಗಿರಲಿಲ್ಲ. ಅವನ ಜೀವವನ್ನೆಲ್ಲ ಹಿಂಡಿ ಹಿಪ್ಪೆ ಮಾಡಿದರೂ ಪಾರ್ಟಿ ಅವನ ಪ್ರಶ್ನೆಗೆ ಉತ್ತರ ಕೊಡಲಿಲ್ಲ. ಅಂತರಂಗದ ಮೌನಿಯು ಹೆಸ ರನ್ನು ಗೋಡೆಗೆ ಬಡಿದರೂ ಅವನಿಂದ ಉತ್ತರವಿಲ್ಲ. ನೇರವಾದ ಪ್ರಶ್ನೆ ಗಳಿಗೆ ಎಲ್ಲಿಯೂ ಉತ್ತರವಿಲ್ಲ.

ಆದರೂ ಒಮ್ಮೊಮ್ಮೆ, – 'ಪೇತಾ' ಚಿತ್ರದ ಕ್ಷೀಣ ಹಸ್ತಗಳ ದೃಶ್ಯದಲ್ಲಿ, ಬಾಲ್ಯಕಾಲದ ಕೆಲವು ನೋಟಗಳಲ್ಲಿ, ಹಾಡಿನ ಒಂದು ಸೊಲ್ಲಿನಲ್ಲಿ, ಅಂತರಂಗದ ಮೌನಿ ಉತ್ತರ ಕೊಡಲು ಹವಣಿಸುವ ಹಾಗೆ ಅನಿಸುತಿತ್ತು. ವೀಣೆಯ ತಂತಿಯನ್ನು ಮಿಡಿದಾಗ ಹೊರಡುವ ನಾದದ ಅಲೆಯಂತೆ ಉತ್ತರತರಂಗವು ಆತ್ಮವನ್ನೆಲ್ಲ ವ್ಯಾಪಿಸುವುದು. ರಹಸ್ಯ ವಾದಿಗಳು 'ಆನಂದ'ವೆಂದೂ, ಸಂತರು 'ಏಕಾಗ್ರತೆ' ಎಂದೂ ಕರೆವ ಸ್ಥಿತಿ ಇದೇ ಇರಬೇಕು. ಆಧುನಿಕ ಮನೋವಿಜ್ಞಾನಿಗಳು ಇದಕ್ಕೆ 'ಸಾಗರ ಭಾವ'ವೆಂದು ಹೆಸರಿಟ್ಟದ್ದಾರೆ. ಉಪ್ಪಿನ ಹರಳನ್ನು ಸಾಗರದಲ್ಲಿ ಹಾಕಿ ದರೆ ಅದು ಕರಗಿ ಹೋಗುವಂತೆ ನಮ್ಮ ವ್ಯಕ್ತಿತ್ವವು ಅದರಲ್ಲಿ ಲೀನವಾ ಗುವುದು; ಆದರೆ ಲೀನವಾಗುವಾಗಲೇ ಅಪಾರ ಸಾಗರವೆಲ್ಲವೂ ಅದ ರಲ್ಲಿ ಅಡಕವಾಗುವುದು. ಉಪ್ಪಿನ ಹರಳೆಲ್ಲಿ ಎಂದು ಆ ಮೇಲೆ ಹುಡುಕಿ ದರೆ ಕಾಲದೇಶಗಳೆರಡರಲ್ಲೂ ಅದು ಕಾಣಸಿಗಲೊಲ್ಲದು. ಧ್ರುವ ಪ್ರದೇಶದಲ್ಲಿ ದಿಕ್ಚಕ್ರದ ಮುಳ್ಳು ತಿರುಗುವ ರೀತಿಯಲ್ಲಿ ಆಲೋಚನೆಯು ನಿಶ್ಚಿತ ಗುರಿ ಇಲ್ಲದೆ ವರ್ತುಲ ವರ್ತುಲವಾಗಿ ಸುತ್ತುವ ಸ್ಥಿತಿಯದು. ಸುತ್ತಿ ಸುತ್ತಿ ಅಕ್ಷದಿಂದ ಬೇರಾಗಿ ಉಲ್ಕೆಯಂತೆ ಆಕಾಶದಲ್ಲಿ ಸ್ವತಂತ್ರ ವಾಗಿ ಹಾರಿ ಹೋಗುವ ಮಾನಸಿಕ ಸ್ಥಿತಿ: ವೇದನೆ, ಆನಂದ ಮುಂತಾದ ಭಾವನೆಗಳ ಅಶ್ರಗದ ಮೂಲಕ ಹಾದು ಹೋಗುವಾಗ ವಿಕೀರ್ಣವಾ ಗುವ ಪ್ರಕಾಶರೇಖೆಗಳಂತೆ ಚದರಿ ಹೋಗುವ ಸ್ಥಿತಿ.

ರುಬಷೊವ ಕೋಣೆಯೊಳಗೆ ಅಡ್ಡಾಡುತ್ತ ಹಿಂದಿನ ಕಾಲವೆಲ್ಲಾ ದರೆ ತಾನು ಈ ರೀತಿ ವಿಚಿತ್ರವಾಗಿ ಕಲ್ಪನೆಯ ಗಾಳಿಗುಮುರಿಯ ಸವಾರಿ

ಮಾಡಲು ಸಾಧ್ಯತವಿರಲಿಲ್ಲವೇ ಎಂದು ಭಾವಿಸಿದನು. ಮರಣವು ಸಮೀಪಿಸಿದಾಗ ಅತಿಭೌತಿಕವಾದುದು ವಾಸ್ತವವೆಂದು ತೋರುವುದು. ಕಿಟಕಿಯ ಬಳಿಗೆ ಹೋಗಿ ಗಾಜಿಗೆ ಹಣೆಹಚ್ಚಿ ತೋಪಖಾನೆಯ ಮೇಲಿನ ನೀಲ ವರ್ಣದ ಆಗಸವನ್ನು ನೋಡುತ್ತಿದ್ದಂತೆ ರುಬಷೊವಗೆ ಬಾಲ್ಯದಲ್ಲಿ ತಂದೆಯ ತೋಟದ ಹುಲ್ಲಿನ ಮೇಲೆ ಮಲಗಿರುವಾಗ ಕಂಡಿದ್ದ ಮೋಡಗಳ ಮರೆಯ ನೀಲಾಕಾಶದ ನೆನಪಾಯಿತು. ನೀಲಾಕಾಶದ ಒಂದು ತುಣುಕಿದ್ದರೂ ಸಾಕು 'ಸಾಗರಭಾವ'ವು ಉಮ್ಮಳಿಸುವುದೆಂದು ತೋರುತ್ತದೆ. ಆಕಾಶಕ್ಕೆ ಮಿತಿ ಇಲ್ಲವಾದರೂ ವಿಶ್ವದ ಗಾತ್ರಕ್ಕೆ ಮಿತಿಯುಂಟೆಂದು ಖಗೋಳ ಶಾಸ್ತ್ರದ ಇತ್ತೀಚೆಗಿನ ಸಂಶೋಧನೆಯನ್ನು ಎಲ್ಲಿಯೋ ಓದಿದ ನೆನಪಾಯಿತು. ಇದರರ್ಥವೇನೆಂದು ಅವನಿಗೆ ಓದಿದಾಗ ಅರ್ಥವಾಗಿರಲಿಲ್ಲ, ಅರ್ಥಮಾಡಿಕೊಳ್ಳುವ ಪ್ರಯಾಸವನ್ನೂ ಅವನು ಮಾಡಿದ್ದಿಲ್ಲ. ಆದರೆ ಈಗ ಒಮ್ಮಿಂದೊಮ್ಮೆ ಅದರ ಅರ್ಥ ಕಂಡು ಹಿಡಿಯಬೇಕೆಂಬ ಕುತೂಹಲವು ಅವನಲ್ಲಿ ಕೆರಳಿತು. ಈ ಸಂಶೋಧನೆಯನ್ನು ಓದಿದ್ದೆಲ್ಲೆಂಬುದೂ ಅವನಿಗೆ ನೆನಪಾಯಿತು. ಜರ್ಮನಿಯಲ್ಲಿ ಸೆರೆಮನೆಯಲ್ಲಿದ್ದಾಗ ಸಂಗಾತಿಗಳು ಜೈಲಿನೊಳಕ್ಕೆ ಉಪಾಯದಿಂದ ಕಳಿಸಿದ ಒಂದು ಪತ್ರಿಕೆಯಲ್ಲಿ ಅವನು ಖಗೋಲದ ಈ ಹೊಸ ಸಂಶೋಧನೆಯ ಕುರಿತು ಓದಿದ್ದನು. ಪತ್ರಿಕೆಯು ಹರಿದ ಒಂದು ಭಾಗದ ಕೊನೆಯ ಸಾಲಿನಲ್ಲಿ ಈ ವಾಕ್ಯವನ್ನು ಬರೆದಿತ್ತು. ಅದರ ಮೇಲಿನದು ಹರಿದು ಹೋಗಿತ್ತು.

ರುಬಷೊವ ಚಿಕ್ಕವನಾಗಿದ್ದಾಗ ಖಗೋಳ ಶಾಸ್ತ್ರವನ್ನು ಅಭ್ಯಾಸ ಮಾಡಬೇಕೆಂದು ಬಗೆದಿದ್ದನು. ಆದರೆ ನಲ್ವತ್ತು ವರ್ಷಗಳ ಕಾಲ ಆತ ಅಭ್ಯಾಸಮಾಡಿದ ವಿಷಯ ಬೇರೆಯೆ ಆಯಿತು: 'ರುಬಷೊವ, ಅನಂತವಾದ್ದೆಂದರೆ ಏನು? ಆಕಾಶವೆಂದರೆ ಏನು?' ಎಂದು ವಿಚಾರಣೆಯ ಸಮಯ ಸರಕಾರಿ ವಕೀಲರು ಎಲ್ಲಾದರೂ ಪ್ರಶ್ನಿಸಿದ್ದರೆ ಅವನು ಯಾವ ಉತ್ತರವನ್ನು ಕೊಡಲಿ? ಅವನ ಅಪರಾಧದ ನಿಜವಾದ ಮೂಲ ಇಲ್ಲಿದೆ. ಇದಕ್ಕಿಂತ ದೊಡ್ಡ ಅಪರಾಧವಾದರೂ ಯಾವುದು?

ಜರ್ಮನ್ ಸೆರೆಮನೆಯಲ್ಲಿ ಹರಿದ ಪತ್ರಿಕೆಯನ್ನೋದಿದಾಗ ಚಿತ್ರ ಹಿಂಸೆಯಿಂದ ಅವನ ಗಂಟುಗಳೆಲ್ಲ ನೊಂದು ಅವನು 'ಸಾಗರಭಾವ' ದಲ್ಲಿ ಎಷ್ಟೋ ಹೊತ್ತು ಬಿದ್ದಿದ್ದನು. ಈ ರೀತಿ ಸದಸ್ಯರು ಅಚೇತನಾ ವಸ್ಥೆಯಲ್ಲಿ ಬೀಳುವುದು ಪಾರ್ಟಿಗೆ ಸಮ್ಮತವಾಗಿರಲಿಲ್ಲ. ಪಾರ್ಟಿಯ ದೃಷ್ಟಿಯಲ್ಲಿ ಇದೊಂದು 'ಬೂರ್ಜ್ವಾ ಕಪಟನಾಟಕ', 'ಕರ್ತವ್ಯ ಲೋಪದ ಪರಮ ನಿದರ್ಶನ.' ಒಟ್ಟಿನಲ್ಲಿ ಸಾಗರಭಾವವು ಪ್ರತಿಗಾಮಿ, ಕ್ರಾಂತಿ ವಿರೋಧಿ.

ಹೋರಾಟದ ಸಮಯ ಇದ್ದೆರಡು ಕಾಲುಗಳು ಭೂಮಿಯ ಮೇಲೆ ಸ್ಥಿರವಾಗಿ ಊರಿಕೊಂಡಿರಬೇಕಾದ್ದು ಅಗತ್ಯ. ಕಾಲುಗಳನ್ನಿಡುವುದು ಹೇಗೆಂಬುದನ್ನು ಪಾರ್ಟಿಯು ಬೇಕಾದವರಿಗೆ ಕಲಿಸಿಕೊಡುತಿತ್ತು. ಅನಂತವಾದ್ದು ಅಪ್ರಮೇಯವಾದ್ದು, ಅಳತೆಗೆ ಸಿಗಲಾರದ್ದು–ಇದು ರಾಜಕೀಯ ಗುಮಾನಿಗೆ ಸಿಕ್ಕಿದ ಪರಿಮಾಣ. 'ನಾನು' ಎಂಬುದು ಗುಮಾನಿಯಲ್ಲಿರುವ ಗುಣ. ವ್ಯಕ್ತಿ ಎಂದರೆ: ಒಂದು ಕೋಟಿಯ ಜನಸಮುದಾಯಕ್ಕೆ ಒಂದು ಕೋಟಿಯಿಂದ ಭಾಗಿಸಿದರೆ ಬರತಕ್ಕ ಲಬ್ಧ.

ವ್ಯಕ್ತಿಗೆ ಸ್ವತಂತ್ರ ಸಂಕಲ್ಪದ ಸಾಮರ್ಥ್ಯವಿರುವುದನ್ನು ಪಾರ್ಟಿಯು ಅಲ್ಲಗಳೆಯಿತು; ಆದರೆ ಅವನ ಬಲಿದಾನವು ಸ್ವಸಂಕಲ್ಪಿತ ವಾದ್ದೇ ಆಗಿರಬೇಕಂತೆ, ಸ್ವಯಂಸ್ಫೂರ್ತವಾಗಿರಬೇಕಂತೆ. ಎರಡು ದಾರಿಗಳಲ್ಲಿ ಯಾವುದಾದರೊಂದನ್ನು ಆರಿಸುವ ಸಾಮರ್ಥ್ಯವು ವ್ಯಕ್ತಿ ಗಿರುವುದನ್ನಲ್ಲಗಳೆದೂ ಪಾರ್ಟಿ ಅವನು ಸರಿಯಾದ ದಾರಿಯನ್ನೇ ಬಳಸ ಬೇಕೆಂದು ವಿಧಿಸುತಿತ್ತು. ಒಳ್ಳೆಯದು ಕೆಟ್ಟದು ಎಂಬುದರ ವಿವೇಕ ಮನುಷ್ಯನಿಗಿಲ್ಲವೆಂದು ಹೇಳಿಯೂ ಪಾರ್ಟಿಯು ಅವನ ಅಪರಾಧ ಮತ್ತು ವಿದ್ರೋಹಗಳ ಮಾತನ್ನಾಡುತಿತ್ತು. ವ್ಯಕ್ತಿಯು ಅನಂತಕಾಲದವರೆಗೂ ಸಾಲುವನಿತು ತಿರುಗಿಸಿಟ್ಟ ಒಂದು ಗಡಿಯಾರದ ಚಕ್ರವಾದುದರಿಂದ ಗಡಿಯಾರವನ್ನು ನಿಲ್ಲಿಸುವುದಾಗಲಿ, ಅದನ್ನು ಯಾವುದೇ ರೀತಿಯಿಂದ ತಿದ್ದುವುದಾಗಲಿ ನಮ್ಮಿಂದ ಸಾಧ್ಯವಿಲ್ಲವೆಂಬುವನ್ನು ಸಾರಿದ ಪಾರ್ಟಿಯೇ ಚಕ್ರವು ಗಡಿಯಾರದ ವಿರುದ್ಧ ಬಂಡಾಯವೇಳಬೇಕೆಂದು ಪ್ರಚೋದಿಸು

ತಿತ್ತು. ಎಲ್ಲಿಯೋ ಲೆಕ್ಕ ತಪ್ಪಿದೆ, ಸಮೀಕರಣವು ತೋಲ ಬಿಟ್ಟಿದೆ
ಎಂಬುದು ಖಂಡಿತ.

ನಲ್ವತ್ತು ವರ್ಷಗಳ ಕಾಲ ಅವನು ಆರ್ಥಿಕವಿಧಿಯ ವಿರುದ್ಧ
ಹೋರಾಡಿದನು. ಮನುಷ್ಯ ಜನಾಂಗದ ಕರುಳನ್ನು ಕೊರೆಯುವ ಈ
ಮುಖ್ಯ ಜಾಡ್ಯವನ್ನು ಪರಿಹರಿಸಲು ಶಕ್ತಿಮೀರಿ ದುಡಿದನು. ಆರ್ಥಿಕ
ಕೇಂದ್ರದಲ್ಲಿ ಶಸ್ತ್ರಚಿಕಿತ್ಸೆ ನಡೆದರೆ ಸಮಾಜದಲ್ಲಿ ಆರೋಗ್ಯವು ಹರಡುವು
ದೆಂದು ಅವನು ಭಾವಿಸಿದನು. ಭೀಕರ ರೋಗದಿಂದ ಹೊರಳಾಡುವ
ಮನುಷ್ಯನಿಗೆ ಉನ್ನತ ಉಪದೇಶದಿಂದ ಫಲವೇನು? ಅವನಿಗೆ ಬೇಕಾದ್ದು
ವೈದ್ಯನ ಶಸ್ತ್ರ. ಆದರೆ ವೈದ್ಯನ ಕತ್ತಿ ಮುಟ್ಟಿದಲ್ಲೇ ಹೊಸದಾಗಿ
ಬೊಕ್ಕೆ ಏಳಲು ಕಾರಣವೇನು? ಸರಿ, ಇಲ್ಲಿಯೂ ಸಮೀಕರಣವು ಸರಿ
ಹೋಗುವುದಿಲ್ಲ.

ನಲ್ವತ್ತು ವರ್ಷಗಳ ಕಾಲ ಅವನು ಪಾರ್ಟಿಯ ನಿಯಮಗಳನ್ನು
ಬಿಡದೆ ಪಾಲಿಸಿದ್ದಾಯಿತು; ತರ್ಕದ ಬಲದಿಂದ ಪಾರ್ಟಿಯ ಶಿಸ್ತಿಗೆ
ಅಂಟಿಕೊಂಡದ್ದಾಯಿತು. ಚೇತನದಲ್ಲಿರಬಹುದಾಗಿದ್ದ ಪ್ರಾಚೀನ
ಪರಂಪರೆಯ ನೈತಿಕ ಅವಶೇಷಗಳನ್ನು ತರ್ಕವೆಂಬ ದ್ರಾವಕದ ಸಹಾಯ
ದಿಂದ ಸುಟ್ಟು ಭಸ್ಮಗೊಳಿಸಿದ್ದಾಯಿತು. ಅಂತರಂಗದೊಳಗಿನ ಮೌನ
ಸಹಯೋಗಿಯೊಡನೆಯೂ, ಸಾಗರಭಾವದೊಡನೆಯೂ ಅವಿಶ್ರಾಂತ
ವಾಗಿ ಗುದ್ದಾಟ ನಡೆಸಿದ್ದಾಯಿತು. ಈ ಎಲ್ಲದರ ಪರಿಣಾಮವೇನಾ
ಯಿತು? ಅಜರಾಮರ ಸತ್ಯದ ಸೂತ್ರಗಳನ್ನು ನಂಬಿ ನಡೆದು ನಾವು
ಮುಟ್ಟಿರುವ ಗುರಿ ಯಾವುದು? ಬಹಿರಂಗ ವಿಚಾರಣೆಯ ಭೂತದೃಶ್ಯ
ದಲ್ಲಿ ಈ ಪ್ರಯತ್ನಗಳೆಲ್ಲ ಪರ್ಯವಸಾನಗೊಳ್ಳಬೇಕೆ? ಪ್ರತಿ ಆಲೋಚನೆ
ಯನ್ನು ಮನುಷ್ಯನು ಕೊನೆ ತನಕ ಮುಂದುವರಿಸಬಾರದೋ ಏನೋ.

ನಲ್ವತ್ತು ವರ್ಷಗಳ ಕಾಲವೂ ರುಬಶೋವ ಮಾಡಿದ್ದೇನು? ಶುದ್ಧ
ತರ್ಕವನ್ನು ಮದ್ದಾನೆಯಂತೆ ಬೀದಿವರಿಯಲು ಬಿಟ್ಟದ್ದಲ್ಲವೆ? 'ಹಾಗೆ
ಮಾಡಬೇಡ' 'ಇದನ್ನು ನೀನು ಮಾಡದಿದ್ದರೆ ಒಳ್ಳೆಯದು' ಎಂದು
ಎಚ್ಚರಿಸುವ ಪರಂಪರೆಯನ್ನು ಆಮೂಲಾಗ್ರ ಕಿತ್ತೊಗೆದು ನೇರವಾಗಿ

ಲಕ್ಷ್ಯದ ಕಡೆಗೆ ಧಾವಿಸುವುದರಿಂದ ಮನುಷ್ಯನಿಗೆ ಕೇಡು ಕಟ್ಟಿಟ್ಟದ್ದು ಎಂದು ಇದರ ಅರ್ಥವೆ?

ಆಕಾಶದ ನೀಲಿ ಕೆಂಬಣ್ಣಕ್ಕೆ ತಿರುಗಿತು, ಬೈಗಿನ ಹೊತ್ತು ಕವಿಯುತ್ತಿತ್ತು. ಹಕ್ಕಿಗಳು ಬೈಗುಗೆಂಪಿನಲ್ಲಿ ವರ್ತುಲ ವರ್ತುಲವಾಗಿ ತೋಫಖಾನೆಯ ಮೇಲ್ಗಡೆ ಸುತ್ತುತ್ತಿದ್ದುವು. ಇಲ್ಲ, ಸಮೀಕರಣವು ಸರಿಹೋಗುವುದೇ ಇಲ್ಲ. ಮನುಷ್ಯನ ಕಣ್ಣನ್ನು ನಿರ್ದಿಷ್ಟವಾದ ಲಕ್ಷ್ಯದ ಮೇಲಿರಿಸಿ, ಕೈಯಲ್ಲೊಂದು ಚಿಕಿತ್ಸಕ ಶಸ್ತ್ರವನ್ನು ಕೊಟ್ಟರೆ ಸಾಲದು. ಶಸ್ತ್ರದ ಪ್ರಯೋಗ ನಡೆಸಲು ಮನುಷ್ಯನು ಅರ್ಹನಲ್ಲ. ಈಗಂತೂ ಅಲ್ಲ, ಬಹಳ ಕಾಲ ಕಳೆದ ಮೇಲೆ ಅವನಿಗೆ ಅರ್ಹತೆ ಬರಲಿಕ್ಕೂ ಸಾಕು- ಈಗಿಲ್ಲ, ಕ್ರಾಂತಿಯ ಪುಣ್ಯ ಕ್ಷೇತ್ರ, ಸ್ವಾತಂತ್ರ್ಯದ ಮಹಾ ದುರ್ಗ, ಮತ್ತು ಜಗತ್ತಿನ ನಿಸ್ಸೀಮ ಪ್ರಯೋಗಶಾಲೆಯಲ್ಲಿ ನಲ್ವತ್ತು ವರ್ಷ ಅವನು ಆರ್ಭಟ ಮಾಡಿದ್ದೇ ಬಂತು. ಕೋಟೆಯನ್ನುಳಿಸುವುದು ಪರಮ ಕರ್ತವ್ಯವೆಂಬ ಸೂತ್ರವನ್ನು ಹಿಡಿದು ಗ್ಲೆಟ್‌ಕಿನ್ ನಡೆಯುವುದನ್ನೆಲ್ಲ ಸಮರ್ಥಿಸಬಲ್ಲನು. ಆದರೆ ಕೋಟೆಯೊಳಗಿನವರಿಗೆ ಹೇಗೆ ಕಾಣಿಸುತ್ತಿದೆ ಈ ಧೋರಣೆ? ಇಲ್ಲ, ಸಿಮೆಂಟ ಕಾಂಕ್ರೀಟಿನಿಂದ ಸ್ವರ್ಗಲೋಕದ ಅರಮನೆಗಳನ್ನು ನಿರ್ಮಿಸುತ್ತೇವೆಂದರೆ ಆಗದು. ಕೋಟೆ ಉಳಿಯಬಹುದು, ಆದರೆ ಅದರ ಸಂದೇಶ ಉಳಿಯಲಾರದು. ಕ್ರೈಸ್ತ ಸಾಮ್ರಾಜ್ಯದ ಮಹಾದರ್ಶನವನ್ನು ಮಧ್ಯಯುಗದ ಕೆಲವು ಪೋಪ ಗುರುಗಳ ಕಲುಷಿತಗೊಳಿಸಿದಂತೆ, ಸಮಾಜವಾದಿ ರಾಷ್ಟ್ರದ ಮಹೋನ್ನತ ಕಲ್ಪನೆಗೆ ಒಂದನೆಯ ನಂಬರಿನವನ ಧೋರಣೆಯು ಮಸಿ ಬಳಿದಿದೆ. ಕ್ರಾಂತಿಯ ಧ್ವಜವು ಶೋಕದಲ್ಲಿರುವಂತೆ ಅರ್ಧದಷ್ಟು ಇಳಿಸಲ್ಪಟ್ಟಿದೆ.

ರುಬಶೋವ ಕೋಣೆಯಲ್ಲಿ ನಡೆಯುತ್ತಲೇ ಇದ್ದನು. ಇನ್ನೇನು ಅವರು ಬರುವ ಹೊತ್ತಾಯಿತು ಎಂದುಕೊಂಡನು. ತಪ್ಪು ಸಮೀಕರಣದಲ್ಲಿ ಮಾತ್ರವೇ ಅಲ್ಲ, ಗಣಿತಶಾಸ್ತ್ರದ ಪದ್ಧತಿಯಲ್ಲೇ ಇರುವಂತೆ ಅವನಿಗೆ ಭಾಸವಾಯಿತು. ರಿಚರ್ಡ ಮತ್ತು 'ಪೇತಾ' ಚಿತ್ರದ ಕಥೆ ತಿಳಿದಂದಿನಿಂದಲೂ ಅವನಿಗೊಂದು ಸಂದೇಹ ಬರುತ್ತಿತ್ತು: ಆದರೆ ಅವನದನ್ನು ಒಪ್ಪಲು ಹಿಂಜರಿಯುತ್ತಿದ್ದನು. ಕ್ರಾಂತಿಯು ಬಂದುದು

ಅಕಾಲದಲ್ಲಿ ಗರ್ಭಪಾತವಾದಂತೆ, ವಿಕೃತಶಿಶುವಿನ ಜನನದಂತೆ, ಎಂದು ಅವನ ಎಣಿಕೆ. ಹೌದು, ಸಮಯವೇ ಸರಿಯಾಗಲಿಲ್ಲ. ರೋಮನ್ ನಾಗರಿಕತೆಯಲ್ಲಿಯೂ ಇದೇ ರೀತಿ ಕ್ರಿಸ್ತಶಕ ಒಂದನೆಯ ಶತಮಾನದ ಹೊತ್ತಿಗಾಗಲೇ ಟೊಳ್ಳು ಬಿದ್ದಿತ್ತು. ಬುದ್ಧಿವಂತರಾದವರು ಇನ್ನೇನು ಮಹಾ ಪರಿವರ್ತನೆ ಬಂದೇ ಬರುತ್ತದೆ, ಆಗಲೇ ಬಂತು ಎಂದು ಕೊಂಡಿದ್ದರು. ಆದರೆ ಜೀರ್ಣಶೀರ್ಣ ರೋಮನ್ ಸಾಮ್ರಾಜ್ಯ ಪದ್ಧತಿ ಮತ್ತೆ ಐನೂರು ವರ್ಷ ಕಾಲಹರಣಮಾಡಿತು. ಇತಿಹಾಸದ ನಾಡಿ ಮಂದವಾಗಿ ಬಡಿಯುತ್ತದೆ; ಮನುಷ್ಯನು ವರ್ಷಗಳಲ್ಲಿ ಲೆಕ್ಕವಿಟ್ಟರೆ ಅದು ತಲೆಮಾರುಗಳ ಲೆಕ್ಕ ಹಾಕುತ್ತದೆ. ಜಗತ್ತು ಸೃಷ್ಟಿಯಾದ್ದು ನಿನ್ನೆ; ಇವತ್ತು ಎರಡನೆಯ ದಿನ. ಬದುಕಿ ಉಳಿದಿದ್ದರೆ 'ಜನತೆಯ ಸಾಪೇಕ್ಷ ಪ್ರಬುದ್ಧತೆಯ ಸೂತ್ರವನ್ನು' ಎಷ್ಟು ಚೆನ್ನಾಗಿ ವಿಸ್ತರಿಸ ಬಹುದಾಗಿತ್ತು ಎಂದು ರುಬಶೊವಗೆ ಆಸೆಯಾಯಿತು.

ಕೋಣೆಯಲ್ಲಿ ನೀರವತೆ ತುಂಬಿತ್ತು. ಅವನ ಹೆಜ್ಜೆಯ ಸಪ್ಪಳದ ಹೊರತು ಯಾವ ಶಬ್ದವೂ ಕೇಳಿಸುತ್ತಿರಲಿಲ್ಲ. ಆರೂವರೆ ಹೆಜ್ಜೆ ಬಾಗಿಲಿಗೆ, ಅವನನ್ನೊಯ್ದೊಯ್ಯುವ ದೂತರಿಗೆ, ಆರೂವರೆ ಹೆಜ್ಜೆ ಕಿಟಕಿಗೆ, ಹೊರಗಿನ ಅನಂತ ಅಂಧಕಾರಕ್ಕೆ. ಅವನಿಗೂ ಅನಂತತೆಗೂ ಆರೂವರೆ ಹೆಜ್ಜೆ ದೂರ. 'ನೀನು ಸಾಯುವುದು ಏತಕ್ಕೋಸ್ಕರ? ಎಂಬ ಪ್ರಶ್ನೆಗೆ ಮಾತ್ರ ಅವನ ಹತ್ತಿರ ಉತ್ತರವಿಲ್ಲ.

ಇದು ಪದ್ಧತಿಯಲ್ಲೇ ಇರುವ ಹುಳುಕೆಂದು ತೋರುತ್ತದೆ. 'ದಾರಿ ಹೇಗಿದ್ದರೂ ಗುರಿ ಚೆನ್ನಾಗಿದ್ದರೆ ಸರಿ' ಎನ್ನುವ ಸೂತ್ರವೇ ದೋಷ ಪೂರ್ಣವಾದ್ದೆಂದು ತೋರುತ್ತದೆ. ಕ್ರಾಂತಿಯ ಹಿರಿಹುದ್ದರಿಗಳನ್ನು ಮಣ್ಣು ಮುಕ್ಕಿಸಿದ ಸೂತ್ರ ಇದು. ಅವರಿಗೆ ಹುಚ್ಚು ಹಿಡಿಸಿ ಅವರು ಜೀವಿಯಲ್ಲಿ ಅಂಡಲೆಯುವಂತೆ ಮಾಡಿದ ಸೂತ್ರ ಇದು. 'ಎಲ್ಲ ಪರಂ ಪರೆಗಳನ್ನು ಬಿಸುಟು ಪರಿಣಾಮವಾದವನ್ನು ನಂಬಿದವರು ನಾವು; ನೈತಿಕ ಬೆಂಬಲವಿಲ್ಲದೆ ನಾವು ನಮ್ಮ ನೌಕೆಯನ್ನು ಹರಿಯ ಬಿಟ್ಟಿದ್ದೇವೆ' ಎಂದು ನಾನೇ ಬರೆಯಲಿಲ್ಲವೆ?

ನೈತಿಕ ನಿಲು ಭಾರವಿಲ್ಲದೆ ಮನುಷ್ಯ ಜನಾಂಗದ ನೌಕೆ ನೀರಿನಲ್ಲಿ ತೇಲಲಾರದು. ಶುದ್ಧ ತರ್ಕವೆಂಬ ದಿಕ್ಚಕ್ರವನ್ನು ನಂಬಿದರೆ ದಾರಿಯು ಅಂಕುಡೊಂಕಾಗಿ ಕೊನೆಗೆ ಗುರಿಯೇ ತಪ್ಪಿ ಹೋಗಿ ಅಂಡಲೆಯುವ ದುರ್ಭಾಗ್ಯ ಉಂಟಾಗದಿರದು.

ಅನಂತ ಅಂಧಕಾರದ ಮುಹೂರ್ತ ಸಮೀಪಿಸಿತೆಂದು ಕಾಣುತ್ತದೆ.

ಬಹಳಕಾಲ, ಇನ್ನೆಷ್ಟೋ ಕಾಲ ಕಳೆದ ಮೇಲೆ ಹೊಸ ಬಾವುಟ, ಮತ್ತು ಹೊಸ ತಿಳಿವಳಿಕೆಯ ಸ್ಫೂರ್ತಿಯಿಂದ, ಆರ್ಥಿಕ ವಿಧಿ ಮತ್ತು 'ಸಾಗರಭಾವ'ಗಳೆರಡನ್ನೂ ಸಮನ್ವಯ ಮಾಡಿಕೊಂಡ ಹೊಸ ಚಳ ವಳ ಆರಂಭವಾಗಬಹುದು. ಈ ಹೊಸ ಪಾರ್ಟಿಯ ಸದಸ್ಯರು ಸನ್ಯಾಸಿ ಗಳ ಕಾಷಾಯವನ್ನು ಧರಿಸಿ ದಾರಿಯು ಪರಿಶುದ್ಧವಾಗದೆ ಲಕ್ಷ್ಯದ ಶುದ್ಧಿ ಸಾಧ್ಯವಿಲ್ಲವೆಂದು ಸಾರುವರೇನೊ. ಮನುಷ್ಯನೆಂದರೆ ಒಂದು ಕೋಟಿ ಜನ ಸಮುದಾಯಕ್ಕೆ ಒಂದು ಕೋಟಿಯಿಂದ ಭಾಗಿ ಸಿದರೆ ಬರುವ ಬಾಗಲಬ್ಧವೆಂಬ ಗಣಿತವನ್ನು ಖಂಡಿಸಿ ಅದರ ಸ್ಥಾನದಲ್ಲಿ, ಕೋಟಿ ಜನರಲ್ಲಿ ಒಬ್ಬೊಬ್ಬರನ್ನು ಒಬ್ಬೊಬ್ಬರಿಗೆ ಸೇರಿಸಿ ಒಟ್ಟು ಜನಕೋಟಿಗೆ ವಿಶಿಷ್ಟ ಚೇತನವೂ, ವಿಶಿಷ್ಟ ವ್ಯಕ್ತಿತ್ವವೂ, ಸಾಗರ ಭಾವಕ್ಕೆ ಕೋಟಿಕೋಟಿಯಿಂದ ಗುಣಾಕಾರವಾಡಿ ಅನಂತತೆ ಯೊಳಗೆ ಸ್ವಯಂ ಸಂಪೂರ್ಣವಾದ ವಿಶ್ವವನ್ನು ನಿರ್ಮಿಸಿ ನಿಲ್ಲಿಸುವ ಪುಣ್ಯಾತ್ಮರು ಜಗತ್ತಿನಲ್ಲಿ ಉದಿಸಬಹುದು. ಅದಕ್ಕೆ ಬಹಳ ಕಾಲ ಸರಿಯ ಬೇಕು, ಬಹಳಕಾಲ.

ರುಬಷೊವ ನಡೆಯುವುದನ್ನು ನಿಲ್ಲಿಸಿ ಆಲಿಸಿದನು. ನಡವೆಯಲ್ಲಿ ಬ್ಯಾಂಡಿನ ಸದ್ದು ದೂರದ ತರಂಗದಂತೆ ಕೇಳಿಸ ಹತ್ತಿತು.

## ೩

ಬ್ಯಾಂಡಿನ ಸದ್ದು ದೂರದಲ್ಲಿತ್ತು. ಆದರೆ ಸಮೀಪಕ್ಕೆ ಬರುತ್ತಿತ್ತು. ರುಬಷೊವನ ಕಾಲುಗಳಲ್ಲಿ ಭೂಮಿಯ ಗುರುತ್ವಾಕರ್ಷಣ ಶಕ್ತಿಯು ಹರಿಯುತ್ತಿರುವಂತೆ ಅವನಿಗೆ ಭಾಸವಾಯಿತು. ಬಾಗಿಲತೂತಿನಿಂದ

ಕಣ್ಣು ತೆಗೆಯುದೆಯೆ: ಆತ ಕಿಟಕಿಯ ಬಳಿ ಮೂರು ಹೆಜ್ಜೆ ಮುಂದುವರಿದನು. ನೀಳವಾದ ಉಸಿರನ್ನು ಬಿಟ್ಟು ಸಿಗರೇಟ ಹಚ್ಚಿದನು. ಮಂಚದ ಪಕ್ಕದ ಗೋಡೆಯಲ್ಲಿ ಬಡಿಯುವುದು ಆರಂಭವಾಗಿತ್ತು.

'ಸೀಳ್ಬಾಯಿಯವನನ್ನು ಒಯ್ಯುತ್ತಿದ್ದಾರೆ. ನಿನಗೆ ಅವನು ಶುಭಾಶಯ ಕಳಿಸುತ್ತಿದ್ದಾನೆ.'

ಇದನ್ನು ಕೇಳಿದೊಡನೆ ರುಬಷೊವನ ಕಾಲಿನ ಭಾರ ಒಮ್ಮೆಲೆ ಇಳಿದಂತಾಯಿತು. ಅವನು ಬಾಗಿಲತೂತಿಗೆ ಕಣ್ಣಿಟ್ಟು ಬಾಗಿಲಿನ ಮೇಲೆ ತಾಳಬದ್ಧವಾಗಿ ಬಡೆಯ ತೊಡಗಿದನು. ೪೦೬ರ ಕೋಣೆ ಖಾಲಿಯಾಗಿದ್ದುದರಿಂದ ಸುದ್ದಿಯನ್ನು ದಾಟಿಸಿ ಪ್ರಯೋಜನವಿರಲಿಲ್ಲ.

ಬ್ಯಾಂಡಿನ ಸದ್ದು ಬಲವಾಗುತಿತ್ತು: ಬಾಗಿಲ ತೂತಿನ ದೃಷ್ಟಿಪಥಕ್ಕೆ ಹೆಜ್ಜೆಗಳ ಸಪ್ಪಳ ಮುಟ್ಟಿತು. ಅಗೋ, ಸೀಳ್ಬಾಯಿಯವನು ಕಣ್ಣಿಗೆ ಬಿದ್ದನು. ಬೇಡಿ ಹಾಕಿದ ಅವನ ಕೈ ಅದೇಕೊ ಮುರುಕಲು ಭಂಗಿಯಲ್ಲಿ ಅವನ ಹಿಂದೆ ಜೋಲುತಿತ್ತು. ರುಬಷೊವನ ಕೋಣೆಯ ಬಾಗಿಲ ತೂತಿನ ಹಿಂದುಗಡೆ ಸ್ವರ್ಗವಿತ್ತೇನೋ ಎಂದು ಭಾವಿಸುವ ರೀತಿಯಲ್ಲಿ ಸೀಳ್ಬಾಯಿಯವನು ಒಂದು ಸಲ ಅದರ ಮೇಲೆ ನೋಟವನ್ನಿಟ್ಟನು. ಕೂಡಲೇ ಒಂದು ಅಪ್ಪಣೆ ಜಾರಿಯಾದುದರಿಂದ ಅವನು ನಿಂತ ಸ್ಥಳವನ್ನೆ ಬಿಟ್ಟು ಕದಲಬೇಕಾಯಿತು.

ಬ್ಯಾಂಡಿನ ಸದ್ದು ಕ್ರಮಶಃ ಮಾಯವಾಯಿತು. ಎಲ್ಲವೂ ಮತ್ತೆ ಮೌನವಾಯಿತು. ಮಂಚದ ಆಚೆಗಿನ ಗೋಡೆಯಿಂದ ಸುದ್ದಿ ಹೊರಟಿತು:

'ಅವನ' ನಡತೆ ಸರಿಯಾಗಿತ್ತಲ್ಲವೆ?...........'

ಶರಣಾಗತನಾಗುತ್ತೇನೆ ಎಂದ ದಿವಸದಿಂದ ೪೦೨ರವನೊಡನೆ ರುಬಷೊವ ಮಾತನಾಡಿರಲಿಲ್ಲ. ೪೦೨ರಿಂದ ಮತ್ತೆ ಹೊರಟಿತು:

'ನಿನಗೆ ಇನ್ನೂ ಹತ್ತು ಮಿನಿಟಿದೆ. ಚೆನ್ನಾಗಿದ್ದೀಯಾ?'

ನಿರೀಕ್ಷೆಯ ಕಾಲವನ್ನು ನಿಶ್ಚಿಂತೆಯಿಂದ ಕಳೆಯಲಿ ಎಂದೇ ೪೦೨ ಸಂಭಾಷಣೆಯನ್ನು ಆರಂಭಿಸಿದನೆಂದು ರುಬಷೊವಗೆ ಅರ್ಥವಾಯಿತು.

ಮಂಚದ ಮೇಲೆ ಕೂತು ಅವನು 'ಮುಗಿದಿದ್ದರೆ ಒಳ್ಳೆಯದಿತ್ತು' ಎಂದು ಬಡಿದನು.

'ನೀನು ಜಳೇಪುಕ್ಕವನ್ನಂತೂ ತೋರಿಸಲಿಕ್ಕಿಲ್ಲ. ನನಗೆ ಗೊತ್ತು, ತೋರಿಸಲಿಕ್ಕಿಲ್ಲ' ಎಂದು ಬಡಿದು ಳಂತರವನು ತುಸು ಹೊತ್ತಿನ ಮೇಲೆ ಏನು ಹೇಳುವುದೆಂದು ತೋಚದೆ 'ನೀನು ಗಟ್ಟಿ ದೆವ್ವದ ಜಾತಿ, ದೆವ್ವದ ಜಾತಿ' ಎಂದು ಬಡಿದನು.

ಸ್ವಲ್ಪ ಹೊತ್ತಿನಮೇಲೆ ಎಲ್ಲಿ ಸಂಭಾಷಣೆ ಕೊನೆಯಾದೀತೋ ಎಂಬ ಭಯದಿಂದ 'ಮದ್ಯದ ಪಾತ್ರೆಯೊಳಗೆ ಹಿಡಿಸುವ ಗಾತ್ರದ ಸ್ತನಗಳು, ಹಹ್ಹಾ, ದೆವ್ವದ ಜಾತಿಯ ಮನುಷ್ಯ ನೀನು........' ಎಂದನು.

ರುಬಷೊವ ನಡವೆಯಲ್ಲೇನಾದರೂ ಸದ್ದುಂಟೇ ಎಂದು ಆಲಿಸು ತ್ತಿದ್ದನು. ಳಂತರವನಿಗೆ ಆತನ ಮನಸ್ಸು ಅರ್ಥವಾಯಿತೆಂದು ತೋರು ತ್ತದೆ:

'ಸುಮ್ಮನೆ ಹೊರಗೆ ಕಿವಿ ಕೊಡಬೇಡ. ಅವರು ಬರು ವಾಗ ನಾನು ತಿಳಿಸುತ್ತೇನೆ........ನಿನ್ನನ್ನು ಕ್ಷಮಿಸಿದರೆ ಏನು ಮಾಡುತ್ತೀಯಾ?'

'ಖಗೋಳ ಶಾಸ್ತ್ರವನ್ನು ಅಭ್ಯಾಸ ಮಾಡುವೆ'

'ಹಾ ಹ್ಹಾ! ನಾನೂ ಅದನ್ನೇ ಮಾಡುತ್ತೇನೆ. ಬೇರೆ ನಕ್ಷ ತ್ರಗಳಲ್ಲಿಯೂ ಜನರಿದ್ದಾರಂತೆ. ನಿನಗೆ ಒಂದೆರಡು ಉಪದೇಶ ಕೊಡಲೆ?

'ಅಗತ್ಯವಾಗಿ' ಎಂದನು ರುಬಷೊವ.

'ತಪ್ಪು ತಿಳಿಯಬೇಡ. ಸೈನಿಕನು ಕೊಡುವ ಒಂದು ತಾಂತ್ರಿಕ ಸೂಚನೆ ಇದು. ಮೂತ್ರ ಮಾಡಿ ಹೊರಡು. ಇಂಥ ಸಂದರ್ಭಗಳಲ್ಲಿ ಒಳ್ಳೆಯದಾಗುತ್ತದೆ ಆತ್ಮ ಒಪ್ಪೀತು. ಆದರೆ ದುರ್ಬಲ ಶರೀರ ಕೇಳುವುದಿಲ್ಲ, ಹಹ್ಹಾ'.

ರುಬಷೊವ ನಸುನಕ್ಕು ಬಕೀಟಿನ ಹತ್ತಿರ ಹೋದನು. ಕೆಲಸ ಮುಗಿಸಿ ಮಂಚದ ಬಳಿ ಬಂದು, 'ಒಳ್ಳೆಯ ಸೂಚನೆಯಯ್ಯಾ.... ನಿನ್ನ ಭವಿಷ್ಯ ಹೇಗಿದೆ?'

'ಇನ್ನು ಹದಿನೆಂಟು ವರ್ಷ. ಹೆಚ್ಚೇನೂ ಅಲ್ಲ. ಬರಿಯ 6530 ದಿವಸ........'

ಸ್ವಲ್ಪ ಹೊತ್ತಿನ ಮೇಲೆ 'ನಿನ್ನ ಮೇಲೆ ನನಗೇಕೋ ಮತ್ಸರ. ನೋಡಿದಿಯಾ. ಹೆಣ್ಣು ಹತ್ತಿರವಿಲ್ಲದೆ 6530 ರಾತ್ರಿ ಕಳೆಯ ಬೇಕಲ್ಲಾ!'

ರುಬಷೊವ 'ಅದರಲ್ಲೇನು, ಓದು, ಅಭ್ಯಾಸ ಮಾಡು........'

'ಅದಕ್ಕೆ ಬೇಕಾದ ತಲೆ ಇಲ್ಲ...........ಹಾಂ, ಬಂದರು'. ಒಂದು ನಿಮಿಷ ತಡೆದು 'ಇಷ್ಟೊಂದು ಸವಿಯಾದ ಹರಟೆಯನ್ನು ಬಿಟ್ಟು ಹೋಗಬೇಕಲ್ಲಾ ಎಂದು ನನಗೆ ವ್ಯಥೆ' ಎಂದನು.

ರುಬಷೊವ 'ನನಗೆ ನಿನ್ನಿಂದ ಎಷ್ಟೋ ಉಪಕಾರವಾಗಿದೆ. ಕೃತಜ್ಞ!'

ಬೀಗದ ಕೈ ಬೀಗದೊಳಗೆ ತಿರುಗಿತು. ರುಬಷೊವನ ಹೆಸರು ಹಿಡಿದು ಕರೆಯಲಾಯಿತು. ಕೈಯನ್ನು ಹಿಂದೆ ತಿರುಗಿಸಿ ಬೇಡಿಗಳನ್ನು ಹಾಕಿದ್ದಾಯಿತು. ಆ ಅವಸರದಲ್ಲಿ 'ನನಗೆ ಮತ್ಸರವಾಗುತ್ತಿದೆ, ಮತ್ಸರ, ನಮಸ್ಕಾರ' ಎಂದನು.

ಹೊರಗಿನ ನಡವೆಯಲ್ಲಿ ಬ್ಯಾಂಡಿನ ಸದ್ದು ಮರಳಿ ಆರಂಭವಾಯಿತು. ಕ್ಷೌರಿಕನ ಕೋಣೆಯ ವರೆಗೂ ಆ ಸದ್ದು ಅವರ ಬೆನ್ನ ಹಿಡಿದು ಬಂದಿತು. ಕಬ್ಬಿಣದ ಪ್ರತಿ ಬಾಗಿಲಿನ ತೂತಿನಲ್ಲಿಯೂ ಒಂದು ಜತೆ ಕಣ್ಣು ತನ್ನನ್ನು ನೋಡುತ್ತಿದ್ದುವೆಂದು ರುಬಷೊವಗೆ ತಿಳಿದಿದ್ದರೂ ಅವನು ಅತ್ತಿತ್ತ ನೋಡದೆ ಮುನ್ನಡೆದನು. ಕೈಗೆ ಬೇಡಿಯ ತಿರುಗಣೆ ಬಿಗಿದಷ್ಟೆ ಬಲವಾಗಿ ಕಟ್ಟಿದ ಕೈ ನೋಯುತಿತ್ತು.

ಕೆಳಗಿಳಿಯುವ ಮೆಟ್ಟಿಲಿನ ಪಕ್ಕದಲ್ಲಿ ಒಬ್ಬನು 'ಏನಾದರೂ ಕೊನೆಯ ಇಚ್ಛೆ ಇದ್ದರೆ ಹೇಳು' ಎಂದನು. ರುಬಷೊವ 'ಏನೂ ಇಲ್ಲ'

ಎಂದ ಬಳಿಕ ಎಲ್ಲರೂ ಮೆಟ್ಟಲನ್ನಿಳಿದರು. ಪ್ರಶ್ನೆ ಕೇಳಿದವನು ಮಾತ್ರ ಮೇಲೆಯೇ ನಿಂತಿದ್ದನು. ಮೆಟ್ಟಲುಗಳು ಅಗಲ ಕಿರಿದಾಗಿದ್ದುವು, ದೀಪದ ಬೆಳಕೂ ಸರಿಯಾಗಿರಲಿಲ್ಲ. ಆದುದರಿಂದ ರುಬಷೊವ ಜಾಗ್ರತೆಯಾಗಿ ನಡೆಯುಬೇಕಾಗಿತ್ತು. ಬ್ಯಾಂಡಿನ ಸದ್ದು ನಿಂತು ಹೋಗಿತ್ತು. ಆಜಾನುಬಾಹು ಮೂರು ಮೆಟ್ಟಲು ಹಿಂದಿನಿಂದ ಬರುತ್ತಿದ್ದನು.

ಮೆಟ್ಟಲುಗಳು ಚಕ್ರಾಕಾರವಾಗಿ ತಿರುಗಿದುವು. ರುಬಷೊವ ಸರಿಯಾಗಿ ತೋರಲಿಲ್ಲವೆಂದು ಮುಂದಕ್ಕೆ ಬಾಗಿದಾಗ ಕನ್ನಡಕವು ಕೆಳಗೆ ಬಿತ್ತು, ಕೆಳಗಿನ ಮೆಟ್ಟಲವರೆಗೂ ಅದು ಸುತ್ತಿಕೊಂಡು ಹೋಯಿತು. ರುಬಷೊವ ಹೆಕ್ಕಲೇ ಬಿಡಲೇ ಎಂದು ಕೊನೆಗೆ ಬೇಡವೆಂದು ಬಿಟ್ಟು ಬಿಟ್ಟನು. ಮುಂದಿನವನು ಬಗ್ಗಿ ಅದನ್ನು ಕಿಸೆಗೆ ಸೇರಿಸಿಕೊಂಡುದು ಅವನಿಗೆ ಕಾಣದಿರಲಿಲ್ಲ.

ಅಷ್ಟರಲ್ಲಿ ಮೆಟ್ಟಲು ಮುಗಿದು ಸರಿಯಾದ ನೆಲ ಸಿಕ್ಕಿತು. ಉದ್ದವಾದ ಒಂದು ನಡವೆಯಲ್ಲಿ ಅವರು ಮುಂದುವರಿದರು. ನಡವೆ ಎಲ್ಲಿ ಕೊನೆಯಾಗುವುದೆಂದು ಹೇಳುವಂತಿರಲಿಲ್ಲ. ಆಜಾನುಬಾಹು ಮೂರು ಹೆಜ್ಜೆ ಹಿಂದಿನಿಂದ ಬರುತ್ತಿದ್ದನು. ರುಬಷೊವಗೆ ಅವನು ಹಿಂದಿನಿಂದ ತನ್ನ ಕತ್ತನ್ನೇ ಗುರಿ ಇಟ್ಟು ನೋಡುವಂತೆ ಭಾಸವಾಯಿತು. ಆದರೆ ಅವನು ತಿರುಗಿ ನೋಡಲಿಲ್ಲ. ಜಾಗ್ರತೆಯಾಗಿ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತ ತೆರಳಿದನು.

ನಡವೆಯಲ್ಲಿ ನಡೆಯಲು ಆರಂಭಿಸಿ ಎಷ್ಟೋ ಸಮಯ ಕಳೆದಂತೆ ರುಬಷೊವಗೆ ಅನಿಸಿತು. ಆದರೂ ಸುದ್ದಿ ಇಲ್ಲ. ರಿವಾಲ್ವರನ್ನು ಅದರ ಸಂಪುಟದಿಂದ ತೆಗೆಯುವ ಸದ್ದು ಕೇಳಿಸಬೇಕಲ್ಲಾ? ಅಥವಾ ದಂತವೈದ್ಯರ ಹಾಗೆ ರಿವಾಲ್ವರನ್ನು ತಯಾರುಮಾಡಿ ಜೇಬಿನೊಳಗೆ ಇಟ್ಟಿರುತ್ತಾರೋ? ಏನಾದರೂ ಬೇರೆ ವಿಷಯ ಯೋಚಿಸುವ ಎಂದರೆ ರುಬಷೊವನ ಧ್ಯಾನವೆಲ್ಲ ತಿರುಗಿ ನೋಡದಿರುವ ಪ್ರಯತ್ನವಲ್ಲಿ ಏಕಾಗ್ರವಾಗಿ ನಿಲ್ಲಬೇಕಾಗಿತ್ತು.

ವಿಚಾರಣೆಯ ಸಮಯ ವಿಶಿಷ್ಟವಾದ ಮೌನವು ರುಬಷೊವನ ಅಂತರಂಗದೊಳಗೆ ನೆಲಸಿದ ಕ್ಷಣವೇ ಅವನ ಹಲ್ಲುನೋವು ನಿಂತು ಹೋಗಿತ್ತು. ಹಲ್ಲಿನ ಕುರ ಅದೇ ನಿಮಿಷ ಒಡೆದು ಹೋಯಿತೊ ಏನೊ. ಅವನು ಅವರಿಗೆ ಹೇಳಿದ್ದೇನು? 'ದೇಶಕ್ಕೆ, ಜನತೆಗೆ, ಅಖಿಲ ಜನಸಮುದಾಯಕ್ಕೆ ನನ್ನ ವಂದನೆ' ಎಂತಲೆ? ಅಂದರೆ ಜನತೆಗೇನು ಗತಿ? ನಲ್ವತ್ತು ವರ್ಷಗಳ ಕಾಲ ಮರುಭೂಮಿಯಲ್ಲಿ ದುಡಿದು, ದಣಿದು, ಕಾಲ್ಪನಿಕ ಭೀತಿ ಮತ್ತು ಕಾಲ್ಪನಿಕ ಆಶೋತ್ತರಗಳಿಂದ ಜರ್ಜರಿತನಾಗಿ ಬೇಸತ್ತ ಜನತೆಯ ಗತಿ ಏನು? ಸ್ವರ್ಗರಾಜ್ಯವೆಲ್ಲಿದೆ?

ತಿರುಕುಳಿ ಮನುಷ್ಯ ಜಾತಿಗೆ ಇಂಥ ಒಂದು ಲಕ್ಷ್ಯವೂ ಇದೆಯೆ? ಎಂಬ ಪ್ರಶ್ನೆಗೆ ರುಬಷೊವ ಈಗಲಾದರೂ ಉತ್ತರ ಹುಡುಕಬೇಕು. ಸಂತ ಮೋಸಸನಿಗೆ ಸ್ವರ್ಗರಾಜ್ಯಕ್ಕೆ ಪ್ರವೇಶ ದೊರೆಯ ಲಿಲ್ಲವಾದರೂ, ದೂರದ ಬೆಟ್ಟದಿಂದ ಅದರ ಒಂದು ನೋಟವಾದರೂ ಕಂಡಿದ್ದೀತು. ಕಣ್ಣೆದಿರೇ ನಮ್ಮ ಲಕ್ಷ್ಯವಿರುವಲ್ಲಿ ಅದನ್ನು ನೋಡಿ ಕೊಂಡೇ ಸಾಯಬಹುದು, ಸುಲಭವಾಗಿ ಸಾಯಬಹುದು. ನಿಕೊಲಸ್ ಸಲ್ಮನೊವಿಚ್ ರುಬಷೊವ ಬೆಟ್ಟದ ಮೇಲಿರಲಿಲ್ಲ, ಎತ್ತನೋಡಿ ದರೂ ಆತನ ಕಣ್ಣಿಗೆ ಮರುಭೂಮಿ ಮತ್ತು ಗಾಢಾಂಧಕಾರದ ಹೊರತು ಬೇರೇನೂ ಕಾಣಿಸದು.

ಒಂದು ಪೆಟ್ಟು ಕೊರಳಿನ ಹಿಂಭಾಗಕ್ಕೆ ದೂರದಿಂದ ಬಿದ್ದ ಹಾಗ ನಿಸಿತು. ಅವನು ಬಹಳ ಹೊತ್ತಿನಿಂದ ನಿರೀಕ್ಷಿಸಿದ್ದರೂ, ಬಂದಾಗ ಅದು ಅನಿರೀಕ್ಷಿತವಾಗಿಯೇ ಇತ್ತು. ಕಾಲು ಕುಸಿದು, ದೇಹ ಹೊರಳಿತು. ನೆಲದ ಮೇಲೆ ಆತ ಮುದ್ದೆಯಾಗಿ ಬಿದ್ದನು. ಕೆನ್ನೆಯು ತಂಪಾದ ಹಾಸು ಗಲ್ಲಿಗೆ ತಗಲಿಕೊಂಡಿತ್ತು. ಕತ್ತಲು ಕವಿಯಿತ್ತು. ಕತ್ತಲಿನ ಸಾಗರವು ಅವನನ್ನು ಅದರ ಮಡಿಲಲ್ಲಿ ಸೇರಿಸಿಕೊಂಡಿತು. ನೀರಿನ ಮೇಲೆ ಮಂಜು ಏಳುವಂತೆ ಅವನ ನೆನಪಿನ ಮೊತ್ತವು ಮೇಲಕ್ಕೆದ್ದಿತು.

ಹೊರಗೆ ಯಾರೋ ಬಾಗಿಲು ಬಡಿಯುತ್ತಿದ್ದರು. ಹೌದು, ಸೆರೆಮನೆಗೆ ಒಯ್ಯಲು ಅವರೇ ಬಂದರು. ಆದರೆ ಇದಾವ ದೇಶ?

ಕೈಯನ್ನು ಗವನಿನ ತೋಳಿಗೆ ಸಿಕ್ಕಿಸಬೇಕು. ಎಲಾ, ಹಾಸಿಗೆಯ ಮೇಲ್ಗಡೆ ಇದಾರ ಚಿತ್ರ ತೂಗುತ್ತಿದೆ.

ಒಂದನೆಯ ನಂಬರಿನವನದೋ ಅಥವಾ ಅವನಿಗೂ ಹಿಂದಿನ ಹಿರಿಯನದೋ? ಅಲ್ಲಿರುವುದು ವ್ಯಂಗ್ಯದ ನಗುವೋ, ಅಸ್ಪಷ್ಟ ನೋಟವೊ?

ಆಕಾರವಿಲ್ಲದ ಒಂದು ಆಕೃತಿ ರುಬಷೊವನ ಮೇಲೆ ನಿಂತಿತ್ತು. ಅದಕ್ಕೆ ಚರ್ಮದ ರಿವಾಲ್ವರ್ ಬೆಲ್ಟಿತ್ತು ತೋಳಿನ ಮೇಲೆ ಇದಾವ ಅಂಕಿತ, ಇದಾವ ಮುದ್ರೆ? ಇದು ಪಿಸ್ತೂಲನ್ನೆತ್ತಿರುವುದು ಯಾರ ಹೆಸರಿನಲ್ಲಿ? ಯಾರಿಗೋಸ್ಕರ?

ಒಂದು ಸೆಕೆಂಡಿನಲ್ಲಿ ಕಿವಿಯಮೇಲೆ ರಪ್ಪನೆ ಹೊಡೆತ ಬಿದ್ದಿತು. ಭೋರ್ಗರೆವ ಸಾಗರದ ಒಂದು ಅಲೆ ರುಬಷೊವನನ್ನು ಮೆಲ್ಲನೆ ಮೇಲಕ್ಕೆತ್ತಿತು. ಬಹಳ ದೂರದಿಂದ ಹೊರಟು ಬಂದಿತ್ತು ಅಲೆ. ಅನಂತತೆ ಭುಜವನ್ನು ಹಾರಿಸಿತು.

NAVAYUGA PRESS, UDIPI, S. KANARA
12—1956—2000

**ನಡುಹಗಲಿನ ಕಗ್ಗತ್ತಲೆ**

ಇದೊಂದು ರಸಪೂರ್ಣ, ರೋಮಾಂಚಕ ಕಾದಂಬರಿ. ಮಾಡಿರದ ಅಪರಾಧಗಳಿಗಾಗಿ ಏಕಾಂತವಾಸಕ್ಕೆ ಗುರಿಯಾಗಿ ಅತ್ಯಾಧುನಿಕ ಚಿತ್ರಹಿಂಸೆಯ ನರಕ ಯಾತನೆಯಿಂದಾಗಿ ಅಪರಾಧ ಸ್ವೀಕಾರ ಮಾಡಿದ ಒಬ್ಬ ಸೆರೆಯಾಳು ಹಂತಕರು ಕರೆದೊಯ್ಯುವ ವರೆಗೆ ಸೆರೆಮನೆಯ ತನ್ನ ಕೋಣೆಯಲ್ಲಿ ಅನುಭವಿಸುವ ಮಾನಸಿಕ ಯಾತನೆಯ ಭೀಕರ ಚಿತ್ರಣ.

**ಆರ್ಥರ್ ಕೊಸ್ಲರ್**

ಲೇಖಕ ಮತ್ತು ಪತ್ರಿಕೋದ್ಯಮಿ. ಜರ್ಮನಿಯಲ್ಲಿ ಹಿಟ್ಲರನ ಮೃತ್ಯು ಶಿಬಿರಗಳಿಂದ ಸೆರೆಮನೆ, ಸೆರೆಮನೆಯಿಂದ ಆಸ್ಪತ್ರೆ ಹೀಗೆ ಹಲವು ಸಲ ಸುತ್ತಾಡಿ ಅನುಭವಿಕರಾದ ಒಬ್ಬ ಬುದ್ಧಿಜೀವಿ. ಪೆಲೆಸ್ತೀನದಲ್ಲಿ ಸ್ವಲ್ಪ ಕಾಲ ಬೇಸಾಯವನ್ನೂ ಮಾಡಿದ್ದಾರೆ. ಸೋವಿಯಟ್ ರಶಿಯದ ಗಣ್ಯ ಅತಿಥಿಯಾಗಿ ಮಧ್ಯ ಏಶಿಯದಲ್ಲಿ ಅಲೆದಾಡಿದ್ದಾರೆ. ಪ್ಯಾರಿಸಿನಲ್ಲಿ ಹಿಟ್ಲರ್–ಸ್ಟಾಲಿನ ತತ್ತ್ವಗಳನ್ನು ವಿರೋಧಿಸುವ ಪತ್ರಿಕೆಗಳನ್ನು ನಡೆಸಿದ್ದಾರೆ. ಇನ್ನೂ ಹಲವು ಕಾದಂಬರಿಗಳನ್ನೂ, ಮೂರು ಸಂಪುಟದ ಆತ್ಮಚರಿತ್ರೆಯನ್ನೂ ಬರೆದಿದ್ದಾರೆ.

ಬೆಲೆ: ರೂ. ೨-೮೦